# ದಕ್ಷಿಣ ಕನ್ನಡದ ಕ್ರೈಸ್ತರು ಮತ್ತು ರಾಜಕೀಯ ಭಾಗವಹಿಸುವಿಕೆ - ಒಂದು ಅಧ್ಯಯನ

ಕನ್ನಡ ವಿಶ್ವವಿದ್ಯಾಲಯ ಹಂಪಿಗೆ ಎಂ.ಫಿಲ್ ಪದವಿಗಾಗಿ
ಸಾದರಪಡಿಸಿದ ಸಂಪ್ರಬಂಧ

ಸಂಶೋಧಕರು

ಥೋಮಸ್ ಜಿ.ಎಂ.

ಮಾರ್ಗದರ್ಶಕರು

ಡಾ. ಸುಲೋಚನಾ ನಾರಾಯಣ

೨೦೦೬

ಕರ್ನಾಟಕ ಥಿಯೋಲಾಜಿಕಲ್ ಸಂಶೋಧನ ಕೇಂದ್ರ

ಬಲ್ಮಠ, ಮಂಗಳೂರು - ೫೭೫೦೦೧

# ದಕ್ಷಿಣ ಕನ್ನಡದ ಕ್ರೈಸ್ತರು ಮತ್ತು ರಾಜಕೀಯ ಭಾಗವಹಿಸುವಿಕೆ – ಒಂದು ಅಧ್ಯಯನ

ಕನ್ನಡ ವಿಶ್ವವಿದ್ಯಾಲಯ ಹಂಪಿಗೆ ಎಂ.ಫಿಲ್ ಪದವಿಗಾಗಿ
ಸಾದರಪಡಿಸಿದ ಸಂಪ್ರಬಂಧ

ಸಂಶೋಧಕರು

ಥೋಮಸ್ ಜಿ.ಎಂ.





ಮಾರ್ಗದರ್ಶಕರು

ಡಾ. ಸುಲೋಚನಾ ನಾರಾಯಣ

೨೦೦೯

ಕರ್ನಾಟಕ ತಿಯೋಲಾಜಿಕಲ್ ಸಂಶೋಧನ ಕೇಂದ್ರ

ಬಲ್ಮಠ, ಮಂಗಳೂರು – ೫೭೫೦೦೧



# ಯೋಗ್ಯತಾ ಪತ್ರ

**ಥೋಮಸ್ ಜಿ. ಎಂ.** ಅವರು ನನ್ನ ಸಲಹೆ ಮತ್ತು ಮಾರ್ಗದರ್ಶನದಲ್ಲಿ **ದಕ್ಷಿಣ ಕನ್ನಡದ ಕ್ರೈಸ್ತರು ಮತ್ತು ರಾಜಕೀಯ ಭಾಗವಹಿಸುವಿಕೆ – ಒಂದು ಅಧ್ಯಯನ** ಎಂಬ ಶೀರ್ಷಿಕೆಯ ಈ ಸಂಪ್ರಬಂಧವನ್ನು ಎಂ.ಫಿಲ್ ಪದವಿ ಪ್ರಾಪ್ತಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಬೇಕೆಂದು ಸಿದ್ಧಪಡಿಸಿದ್ದಾರೆ. ಈ ಸಂಪ್ರಬಂಧವವು ಸಂಶೋಧಕರ ಸ್ವಂತ ಪರಿಶ್ರಮ, ವಿಶ್ಲೇಷಣೆ, ಅಭಿಪ್ರಾಯ ಸಂಗ್ರಹ ಮತ್ತು ಸಂಶೋಧನೆಯ ಫಲಸ್ವರೂಪವಾಗಿದೆ. ಇವರು ಸಂಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲಿ ಅಥವಾ ಇನ್ನಿತರ ಉದ್ದೇಶಗಳಿಗಾಗಿಯಾಗಲಿ ಬಳಸಿಕೊಂಡಿಲ್ಲ.

ಸುಲೋಚನ ನಾರಾಯಣ

**ಡಾ. ಸುಲೋಚನಾ ನಾರಾಯಣ**

ಸಂಶೋಧನ ಮಾರ್ಗದರ್ಶಕರು

**ಕರ್ನಾಟಕ ತಿಯೋಲಾಜಿಕಲ್ ಸಂಶೋಧನ ಕೇಂದ್ರ**

ಬಲ್ಮಠ, ಮಂಗಳೂರು





# ಪ್ರಮಾಣ ಪತ್ರ

ಕನ್ನಡ ವಿಶ್ವವಿದ್ಯಾಲಯ ಹಂಪಿಗೆ ಎಂ. ಫಿಲ್ ಪದವಿಗಾಗಿ ಸಾದರಪಡಿಸಿದ **ದಕ್ಷಿಣ ಕನ್ನಡದ ಕ್ರೈಸ್ತರು ಮತ್ತು ರಾಜಕೀಯ ಭಾಗವಹಿಸುವಿಕೆ - ಒಂದು ಅಧ್ಯಯನ**. ಈ ಸಂಪ್ರಬಂಧವು ನನ್ನ ಸ್ವತಂತ್ರ ಕೃತಿಯಾಗಿದ್ದು ವಿಶ್ಲೇಷಣೆ ಮತ್ತು ಅಧ್ಯಯನದ ಫಲೋದಯವಾಗಿದೆ. ಮಂಗಳೂರಿನ ಕರ್ನಾಟಕ ತಿಯೋಲಾಜಿಕಲ್ ಸಂಶೋಧನಾ ಕೇಂದ್ರದಲ್ಲಿ ಡಾ. ಸುಲೋಚನಾ ನಾರಾಯಣ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ ಈ ಸಂಪ್ರಬಂಧವನ್ನು ಬೇರಾವುದೇ ಪದವಿ, ಡಿಪ್ಲೋಮಾ ಅಥವಾ ತತ್ಸಮಾನ ಉಪಾಧಿಗಳ ಪ್ರಾಪ್ತಿಗಾಗಿ ಅಥವಾ ಆರ್ಥಿಕ ಲಾಭಕ್ಕಾಗಿ ಇಡಿಯಾಗಿ ಅಥವಾ ಬಿಡಿಯಾಗಿ ಬಳಸಿಕೊಂಡಿಲ್ಲವೆಂದು ನಾನು ಈ ಮೂಲಕ ದೃಢಪಡಿಸುತ್ತೇನೆ.

**ಥೋಮಸ್ ಜಿ. ಎಂ**
ಸಂಶೋಧಕರು
**ಕರ್ನಾಟಕ ತಿಯೋಲಾಜಿಕಲ್ ಸಂಶೋಧನ ಕೇಂದ್ರ**
ಬಲ್ಮಠ, ಮಂಗಳೂರು



# ಕೃತಜ್ಞತೆಯ ನುಡಿಗಳು

ಕ್ರೈಸ್ತ ಸಮುದಾಯದ ರಾಜಕೀಯ ಭಾಗವಹಿಸುವಿಕೆ ಎಂಬ ವಿಷಯದಲ್ಲಿ ಕ್ಷೇತ್ರಾಧ್ಯಯನವನ್ನು ಕೈಗೊಂಡು ವಾಸ್ತವಾಂಶಗಳನ್ನು ಹೊರತರುವ ಪ್ರಯತ್ನವೊಂದನ್ನು ಮಾಡತೊಡಗಿದೆ. ಈ ಅಧ್ಯಯನಕ್ಕೆ ಸಂಪೂರ್ಣ ಮಾರ್ಗದರ್ಶನ ಮಂಗಳೂರಿನ ಬೆಸೆಂಟ್ ಮಹಿಳಾ ಕಾಲೇಜಿನ ರಾಜ್ಯಶಾಸ್ತ್ರ ವಿಭಾಗದ ಪ್ರಾಧ್ಯಾಪಕಿ ಡಾ. ಸುಲೋಚನ ನಾರಾಯಣ್ ರವರಿಂದ ಲಭಿಸಿದೆ. ವಸ್ತು ವಿಷಯಗಳ ರೂಪಾತ್ಮಕ ಅಧ್ಯಯನಕ್ಕೆ ಮಾರ್ಗದರ್ಶನ, ಸಹಕಾರ ಹಾಗೂ ಪ್ರೋತ್ಸಾಹಗಳನ್ನು ನೀಡಿ ಪ್ರಸ್ತುತ ಅಧ್ಯಯನವನ್ನು ಯಶಸ್ವಿಯಾಗಿ ಪೂರ್ಣಗೊಳಿಸಲು ನನ್ನೊಡನೆ ಕೈ ಜೋಡಿಸಿರುವುದಕ್ಕಾಗಿ ಅವರಿಗೆ ನಾನು ಚಿರಋಣಿಯಾಗಿರುತ್ತೇನೆ.

ಹಂಪಿ ವಿಶ್ವವಿದ್ಯಾನಿಲಯಕ್ಕೆ ಸೇರಿಕೊಂಡು ಸಂಶೋಧನಾ ಕ್ಷೇತ್ರಕ್ಕೆ ಅಪಾರ ಸೇವೆ ಸಲ್ಲಸುತ್ತಿರುವ, ಕರ್ನಾಟಕ ಥಿಯೊಲಾಜಿಕಲ್ ಸಂಶೋಧನಾ ಕೇಂದ್ರ, ಬಲ್ಮಠ ಇದರ ನಿರ್ದೇಶಕರಾದ ಡಾ. ರತ್ನಾಕರ ಸದಾನಂದ ಹಾಗೂ ಸಂಯೋಜಕರಾದ ಶ್ರೀಯತ ನಾವಡರವರ ಸಂದರ್ಭೋಚಿತ ಸಲಹೆಗಳನ್ನು ನೀಡಿ ಅಧ್ಯಯನಕ್ಕೆ ಅವಕಾಶ ಮಾಡಿಕೊಟ್ಟಿರುವುದಕ್ಕಾಗಿ ಅನಂತ ಧನ್ಯವಾದಗಳನ್ನು ಸಮರ್ಪಿಸುತ್ತಿದ್ದೇನೆ.

ಸಂಶೋಧನೆಗೆ ಅಗತ್ಯವಾದ ಗ್ರಂಥಗಳನ್ನು ಲೇಖನಗಳನ್ನು ಹಾಗೂ ದಾಖಲೆಗಳನ್ನು ಜಿಲ್ಲಾ ಪಂಚಾಯತ್, ತಾಲೂಕ್ ಪಂಚಾಯತ್, ಡಿ. ಸಿ. ಕಛೇರಿ, ವಿವಿಧ ಗ್ರಂಥಾಲಯಗಳಿಂದ ಪಡೆದು ಕೊಂಡು ಅಧ್ಯಯನಕ್ಕೆ ಆಧಾರವನ್ನು ಒದಗಿಸಿಕೊಂಡಿದ್ದೇನೆ. ಸಹಕರಿಸಿದ ಪ್ರತಿಯೊಬ್ಬರಿಗೆ ಈ ಸಂದರ್ಭದಲ್ಲಿ ನನ್ನ ಕೃತೆಜ್ಞತೆಗಳು ಸಲ್ಲುತ್ತದೆ. ಮುಖ್ಯವಾಗಿ ಶ್ರೀಯುತ ಬೆನೆಟ್ ಅಮ್ಮನ್ನ ಅವರಿಗೆ ನನ್ನ ಕೃತಜ್ಞತೆಗಳನ್ನು ಸಲ್ಲಿಸುವವನಾಗಿದ್ದೇನೆ.

ವಿಶೇಷವಾಗಿ, ಕ್ರೈಸ್ತ ಜನರ ಬಗೆಗಿನ ರಾಜಕೀಯ ಭಾಗವಹಿಸುವಿಕೆ ಕುರಿತಂತೆ ಅನೇಕ ಹಿರಿಯ ಚೇತನಗಳಿಂದ ಅನುಭವದ ಮಾಹಿತಿಗಳನ್ನು ಪಡೆದಿರುತ್ತೇನೆ. ಕೊನೆಯಲ್ಲಿ ಸಂದರ್ಶಕರ ಪಟ್ಟಿಯಲ್ಲಿರುವ ಪ್ರತಿಯೋರ್ವ ಸಜ್ಜನ ವ್ಯಕ್ತಿಯೂ ನನ್ನೊಡನೆ ತಾಳ್ಮೆಯಿಂದ ನಡೆದುಕೊಂಡು

ಬಹಳಷ್ಟು ಸಲಹೆ, ಸೂಚನೆಗಳನ್ನು ನೀಡಿ ಅಧ್ಯಯನವನ್ನು ರೂಪಿಸಲು ಸಹಕರಿಸಿರುವರು. ನನ್ನ ಕೃತಜ್ಞತೆಗಳು ಸದಾ ಅವರಿಗೆ ಸಲ್ಲುತ್ತದೆ.

ಅಂತೆಯೇ ಪ್ರಶ್ನಾವಳಿಗಳಿಗೂ ಕ್ರೈಸ್ತ ಸಮಾಜ ನೀಡಿದ ಸ್ಪಂದನ ಅಧ್ಯಯನಕ್ಕೆ ಸ್ಪೂರ್ತಿಯನ್ನು ನೀಡಿದೆ. ತಿಳಿದ ಮಾಹಿತಿಗಳನ್ನು ನೀಡಿದವರೆಲ್ಲರಿಗೂ ಧನ್ಯವಾದಗಳು.

ಅಧ್ಯಯನದ ಗುಣಮಟ್ಟವನ್ನು ಪರಿಶೀಲಿಸುತ್ತಾ ಮಾಹಿತಿಗಳ ವಿಶ್ಲೇಷಣೆಗೆ ಸಲಹೆಗಳನ್ನು ನೀಡಿ ಬೆಂಬಲಿಸಿದ ಸಹೋದ್ಯೋಗಿ ಮಿತ್ರರಾದ ಡಾ. ರಾಧಾಕೃಷ್ಣ ಭಟ್ ಪೆರ್ಲ ಹಾಗೂ ನನ್ನ ಮಿತ್ರ ಪ್ರೊ. ಟಿ. ಪಿ. ಆ್ಯಂಟನಿಯವರಿಗೂ ವೈಯಕ್ತಿಕವಾಗಿ ಬಹಳ ಆಭಾರಿಯಾಗಿರುತ್ತೇನೆ.

ಕಾಲೇಜಿನ ಪ್ರಾಂಶುಪಾಲರುಗಳಾದ ಡಾ. ಜೆ. ಸಿ. ಮಿರಾಂಡಾ ಮತ್ತು ಪ್ರೊ. ಪ್ಯಾಟ್ರಿಕ್ ಮಿನೆಜಸ್ ರವರಿಗೂ ಎಲ್ಲ ಸಹೋದ್ಯೋಗಿಗಳಿಗೂ ನನ್ನ ಕೃತಜ್ಞತೆಗಳು.

ನನ್ನ ಅಧ್ಯುಯನಕ್ಕೆ ಹಿಂದಿನಿಂದ ಬೆಂಬಲ, ಆತ್ಮ ವಿಶ್ವಾಸ ನೀಡಿ ದೈನಂದಿನ ಜೀವನದಲ್ಲಿ ಬಹಳ ಹೆಂದಾಣಿಕೆ ಮಾಡಿದ ಪತ್ನಿ ಶ್ರೀಮತಿ ಮೋಳಿ ರವರಿಗೂ, ಮಕ್ಕಳಿಗೂ ನಾನು ಚಿರಋಣಿ.

ಪ್ರತಿ ಅಧ್ಯಾಯವನ್ನು ಅಚ್ಚು ಕಟ್ಟಾಗಿ ಕಂಪ್ಯೂಟರೀಕರಣಗೊಳಿಸಿ, ಸುಂದರವಾಗಿ ಪ್ರಿಂಟ್ ತೆಗೆದ ಬಲ್ಮಠ ಇನ್‌ಸ್ಟಿಟ್ಯೂಟ್ ಆಫ್ ಕಂಪ್ಯೂಟರ್ ಸೆಂಟರ್ ಮತ್ತು ಬಲ್ಮಠ ಪ್ರಿಂಟಿಂಗ್ ಪ್ರೆಸ್ ನವರಿಗೆ ವಂದನೆಗಳು.

ಪರೋಕ್ಷವಾಗಿ ಸಂಶೋಧನೆಯ ಯಶಸ್ವಿಗೆ ಸಹಾಯ ಹಸ್ತ ನೀಡಿದ ಎಲ್ಲರಿಗೂ ನನ್ನ ನಮನಗಳು.

ಥೋಮಸ್ ಜಿ. ಎಂ.

ಸಂಶೋಧಕರು

# ದಕ್ಷಿಣ ಕನ್ನಡದ ಕ್ರೈಸ್ತರು ಮತ್ತು ರಾಜಕೀಯ ಭಾಗವಹಿಸುವಿಕೆ – ಒಂದು ಅಧ್ಯಯನ

## ಅಧ್ಯಯನದ ವಿವರಗಳು

# ಅಧ್ಯಾಯ – ೧

# ಅಧ್ಯಯನದ ಉದ್ದೇಶ, ಸ್ವರೂಪ, ಮತ್ತು ವ್ಯಾಪ್ತಿ

## ೧.೧. ಪೀಠಿಕೆ – ಪ್ರಜಾಪ್ರಭುತ್ವದ ಪ್ರಾಮುಖ್ಯತೆ – ನಿರ್ಣಯಿಸುವ ಅಧಿಕಾರ ಮತ್ತು ಅಭಿವೃದ್ಧಿ

ಒಂದು ದೇಶದ ವೈವಿಧ್ಯಮಯ ಸಾಮಾಜಿಕ ಮತ್ತು ರಾಜಕೀಯ ಬಲಗಳಿಗನುಸಾರವಾಗಿ ವಿವಿಧ ಬಗೆಯ ಸರ್ಕಾರದ ವ್ಯವಸ್ಥೆಗಳು ರೂಪುಗೊಳ್ಳುತ್ತವೆ. ರಾಜಕೀಯ ಚಿಂತನೆಯು ಅಧಿಕೃತವಾಗಿ ಆರಂಭಗೊಂಡಾಗಿನಿಂದಲೇ ಅತ್ಯುತ್ತಮ ಸರ್ಕಾರ ರಚನೆಯ ಬಗ್ಗೆ ಹುಡುಕಾಟವು ಶುರುವಾಗಿತ್ತು. ಜನರ ಹಿತಾಸಕ್ತಿಯನ್ನು ರಕ್ಷಿಸಬಹುದಾದ ಪ್ರಜಾಪ್ರಭುತ್ವ ಸರಕಾರ ವ್ಯವಸ್ಥೆಯು ಅನೇಕ ದೇಶಗಳಲ್ಲಿ ಸ್ವೀಕರಿಸಲ್ಪಟ್ಟಿದೆ. ಭಾರತವೂ ಸ್ವತಂತ್ರ ಪಡೆದ ನಂತರ ಸಂಸದೀಯ ಸರ್ಕಾರ ವ್ಯವಸ್ಥೆಯನ್ನು ಅಳವಡಿಸಿಕೊಂಡಿದೆ, ಹಾಗೂ ಜಗತ್ತಿನಲ್ಲಿ ಅತೀ ದೊಡ್ಡ ಪ್ರಜಾತಂತ್ರವೆನಿಸಿಕೊಂಡ ರಾಷ್ಟ್ರವಾಗಿದೆ.

ಪ್ರಜಾಪ್ರಭುತ್ವ ಮತ್ತು ಪ್ರಜೆಗಳ ರಾಜಕೀಯ ಪ್ರಾತಿನಿದ್ಯತೆ ಕುರಿತಂತೆ ಹಲವು ಅಭಿಪ್ರಾಯಗಳಿವೆ. ಆದರೆ ಜನ ಸಾಮಾನ್ಯರ ದೃಷ್ಟಿಯಲ್ಲಿ ಪ್ರಜಾಪ್ರಭುತ್ವವು ಒಂದು ಸಾಂಸ್ಥಿಕ ವ್ಯವಸ್ಥೆಯಾಗಿದ್ದು, ರಾಜಕೀಯ ಅಧಿಕಾರವನ್ನು ಪಡೆಯುವ ಪ್ರಕ್ರಿಯೆಯಲ್ಲಿ ಜಾತಿ, ಮತ, ಲಿಂಗ, ಧರ್ಮ, ವರ್ಗಗಳ ತಾರತಮ್ಯವಿಲ್ಲದೆ ಪ್ರತಿಯೋರ್ವ ಅರ್ಹ ಪೌರನು ಭಾಗವಹಿಸಲು ಅವಕಾಶ ನೀಡುತ್ತದೆ. ಪ್ರಜಾಪ್ರಭುತ್ವವೆಂದರೆ ಪ್ರತಿಯೊಬ್ಬರಿಗೂ ಪಾಲು ಇರುವ ಒಂದು ಸರಕಾರ ಎಂಬುದಾಗಿ ಪ್ರೊ. ಸೀಲೆ ಹೇಳಿದ್ದಾನೆ[೧]. ಇಲ್ಲಿ ಆಡಳಿತದ ಅಧಿಕಾರವು ಒಂದು ನಿರ್ಧಿಷ್ಟ ವರ್ಗ ಅಥವಾ ವರ್ಗಗಳ ಕೈಯಲ್ಲಿ ಅಪರಿಮಿತವಾಗಿರದೆ, ಇಡೀ ಸಮುದಾಯದ ಎಲ್ಲ ಸದಸ್ಯರ ಕೈಯಲ್ಲಿರುತ್ತದೆ. ಪ್ರಜಾತಂತ್ರದ ಕೇಂದ್ರ ಬಿಂದುವೇ ಆಯ್ಕೆಯ ಸ್ವಾತಂತ್ರ್ಯ ಮತ್ತು ಈ ಆಯ್ಕೆಯು ಯಾರು ಆಡಳಿತ ನಡೆಸಬೇಕೆಂಬುವುದನ್ನು ನಿರ್ಧರಿಸುತ್ತದೆ. ಇಲ್ಲಿ ಸಾರ್ವಜನಿಕ ಅಭಿಪ್ರಾಯಕ್ಕೆ ವಿಶೇಷ ಮನ್ನಣೆ ಇದೆ ಎನ್ನುವುದು ಗಮನಾರ್ಹ.

ಪ್ರಜಾಪ್ರಭುತ್ವದಲ್ಲಿರುವ ವೈಶಿಷ್ಟ್ಯತೆಯೆಂದರೆ ರಾಜಕೀಯ ಅಧಿಕಾರವು ಜನರು ಪಾಲುಗೊಳ್ಳುವುದರ ಮೂಲಕ ಸಮುದಾಯದ ಆಶೋತ್ತರಗಳಿಗೆ ಸ್ಪಂದಿಸುವ ವ್ಯವಸ್ಥೆ ಎನ್ನುವುದನ್ನು ಒಪ್ಪಿಕೊಳ್ಳಬೇಕು. ಅಂತೆಯೇ ಸರಕಾರದ ನಿಯಂತ್ರಣವೂ ಜನಸಮುದಾಯದ ಅಧೀನದಲ್ಲಿರುತ್ತದೆ. ಈ ಹಿನ್ನಲೆಯಿಂದ ಒಂದು ಉತ್ತಮ ಸರ್ಕಾರವು ರಚನೆಯಾಗಬೇಕಾದರೆ ಮುಖ್ಯವಾಗಿ ನಾಲ್ಕು ವಿಧಾನಗಳು ಅಗತ್ಯ.

- ಅಭಿಪ್ರಾಯಗಳ ಸಹ ಅಸ್ತಿತ್ವ ಮತ್ತು ರಾಜಕೀಯ ಪಕ್ಷಗಳ ಸಹಕಾರಯುತ ಬೆಂಬಲಗಳು,
- ಮುಕ್ತವಾಗಿ ಚರ್ಚಿಸುವ ಹಕ್ಕುಗಳು/ಅವಕಾಶಗಳು,
- ವಯಸ್ಕ ಮತದಾನ ಪದ್ಧತಿ, ಮತ್ತು
- ಚುನಾವಣೆಗಳು.

ಇಂತಹ ಒಂದು ರಾಜಕೀಯ ವ್ಯವಸ್ಥೆಯು ಪರಿಪೂರ್ಣತೆಯನ್ನು ಸಾಧಿಸಬೇಕಾದರೆ ಸಾಮಾಜಿಕ ವ್ಯವಸ್ಥೆಯೂ ಸಹ ಪ್ರಜಾಪ್ರಭುತ್ವ ದೃಷ್ಟಿಕೋನವನ್ನು ಹೊಂದಿರಬೇಕಾದ ಅಗತ್ಯವಿದೆ. ಅಂದರೆ, ಸಮಾಜದ ಅವಿಭಾಜ್ಯ ಅಂಗವೆನಿಸಿಕೊಂಡ ಪ್ರತೀ ವ್ಯಕ್ತಿಯೂ ಸಾರ್ವಜನಿಕ ಚರ್ಚೆಗಳಿಗೆ ತನ್ನ ಅಭಿಪ್ರಾಯಗಳ ಕೊಡುಗೆಗಳನ್ನು ನೀಡುವಂತಾಗಬೇಕು. ಜಾತಿ, ಧರ್ಮ, ವರ್ಗ, ಲಿಂಗ ಇತ್ಯಾದಿಗಳ ಬಗೆಗಿನ ವಿಭಜನೆಗಳನ್ನು ಮೀರಿ, ಸಂವಿಧಾನದ ನೆಲೆಯಿಂದ ಪಡೆದ 'ಸಮಾನ ಪೌರತ್ವಕ್ಕೆ' ಮನ್ನಣೆಯನ್ನು ಪಡೆಯಬೇಕು. ಪ್ರತಿಯೋರ್ವನೂ ತನ್ನ ಚಟುವಟಿಕೆಗಳಿಗೆ ನೈತಿಕ ಹೊಣೆಗಾರಿಕೆಗಳನ್ನು ಇಟ್ಟುಕೊಂಡಿರಬೇಕು. ಪ್ರಜೆಗಳು ಆರಿಸಿದ ಜನಪ್ರತಿನಿಧಿಗಳು ಸರ್ಕಾರದಲ್ಲಿ ಕಾರ್ಯ ನಿರ್ವಹಿಸುವಾಗ ನೈತಿಕ ಹೊಣೆಗಾರಿಕೆಯು ಅನಿವಾರ್ಯವಾಗುವ ಅಂಶವೆನ್ನುವುದನ್ನು ಗಮನಿಸಬೇಕು.

ರಾಜಕೀಯ ಮತ್ತು ಸಾಮಾಜಿಕ ಪ್ರಜಾಪ್ರಭುತ್ವಗಳೆರಡೂ ಒಂದು ದೇಶದೊಳಗೆ ಸಾಧಿಸಬೇಕಾದರೆ ಜನ ಸಮುದಾಯಗಳ ನಡುವಣ ಸಂಬಂಧಗಳೂ ಬಹಳ ಮುಖ್ಯ. ವ್ಯಕ್ತಿತ್ವದ ಶ್ರೀಮಂತಿಕೆಯನ್ನು ಬೆಳೆಸಬೇಕಾದರೆ ಸಂಘಟಿತ ಜೀವನ ವಿವಿಧ ಗುಂಪು, ವರ್ಗಗಳ ನಡುವೆ

ಸಹಜವಾಗಿ ಸೆಳೆಯಲ್ಪಡುವ ಸೌಹಾರ್ದತೆಯು ಅಗತ್ಯ. ಭಾರತವು ಒಂದೇ ಸಮುದಾಯದ ರಾಷ್ಟ್ರವಲ್ಲ. ಇಲ್ಲಿ ಸಾಂಸ್ಥಿಕ ಬಹುತ್ವವಿದೆ, ಕಾರ್ಯವೈಖರಿಗಳಲ್ಲಿ ವೈವಿಧ್ಯತೆ ಇದೆ. 'ಅಲ್ಪಸಂಖ್ಯಾತ', 'ಬಹುಸಂಖ್ಯಾತ' ಇತ್ಯಾದಿ ನಿರ್ದಿಷ್ಟವಾಗಿ ಗುರುತಿಸಲ್ಪಡುವ ಗುಂಪುಗಳಿವೆ. ಯಾವುದೇ ವ್ಯತ್ಯಾಸಗಳಿದ್ದರೂ ರಾಜಕೀಯ ಪ್ರಕ್ರಿಯೆಗಳಲ್ಲಿ ಸಮಾನವಾಗಿ ಪಾಲ್ಗೊಳ್ಳುವ ಅವಕಾಶವಿರುವುದರಿಂದಲೇ ಪ್ರಜಾಪ್ರಭುತ್ವವು ಜನಪ್ರಿಯತೆಯನ್ನು ಪಡೆದಿದೆ

ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ನಿರ್ಧಾರ ತೆಗೆದುಕೊಳ್ಳುವ ಪ್ರಕ್ರಿಯೆಯಲ್ಲಿ ಜನರ ಪಾಲುಗೊಳ್ಳುವಿಕೆಗೆ ವಿಶೇಷ ಮಹತ್ವವಿದೆ. ಇಲ್ಲಿ ಪ್ರಜೆಗಳೇ ನಿಜವಾದ ಪ್ರಭುಗಳು. ಇಲ್ಲಿ ಪ್ರಜೆಗಳ ಸಹಮತ ಮತ್ತು ಬೆಂಬಲವಿಲ್ಲದೆ ತೆಗೆದುಕೊಳ್ಳಲಾದ ಯಾವುದೇ ನಿರ್ಧಾರಗಳು ಪರಿಣಾಮಕಾರಿಯಾಗಿ ಅನುಷ್ಠಾನಗೊಳ್ಳಲಾರವು. ಜನರಿಂದ ಆಯ್ಕೆಗೊಂಡಂತಹ ಸರಕಾರಗಳು ರೂಪಿಸುವ ಪ್ರತಿಯೊಂದು ನಿರ್ಣಯಗಳು ಜನರ ಆಸೆ, ಆಕಾಂಕ್ಷೆ, ಆಶೋತ್ತರಗಳಿಗೆ ಸ್ಪಂದಿಸಬೇಕು. ಇಲ್ಲಿ ಜನ ಪ್ರತಿನಿಧಿ ಜನರ ಧ್ವನಿಯಾಗಿ ಕೆಲಸ ಮಾಡಬೇಕಾಗುತ್ತದೆ ಎಂಬುದನ್ನು ಗಮನಿಸಬೇಕು. ನಿರ್ಧಾರಗಳನ್ನು ತೆಗೆದುಕೊಳ್ಳುವ ಪ್ರಕ್ರಿಯೆಯಲ್ಲಿ ಜನಮನ್ನಣೆ ಎಷ್ಟು ಪ್ರಾಮುಖ್ಯವೋ ಅಷ್ಟೇ ಪ್ರಾಮುಖ್ಯತೆ ಈ ರೀತಿ ರೂಪಿಸಲ್ಪಟ್ಟ ನಿರ್ಧಾರಗಳನ್ನು ಪರಿಣಾಮಕಾರಿಯಾಗಿ ಅನುಷ್ಟಾನಗೊಳಿಸುವಂತಹ ಸಂದರ್ಭಗಳಲ್ಲೂ ಸಹ ಜನರ ಪಾಲುಗೊಳ್ಳುವಿಕೆ ಮತ್ತು ಬೆಂಬಲ ಅಗತ್ಯ. ಈ ಕಾರಣದಿಂದಲೇ ಪ್ರಜಾಪ್ರಭುತ್ವವೆನ್ನುವುದು ಇತರ ಸರ್ಕಾರ ವ್ಯವಸ್ಥೆಗಳಾದ ನಿರಂಕುಶ ಆಳ್ವಿಕೆ, ಮಿಲಿಟರಿ ಆಡಳಿತ ಇತ್ಯಾದಿಗಳಿಂದ ವಿಭಿನ್ನವಾಗಿದ್ದು ಜನಪ್ರಿಯ ಸರ್ಕಾರವಾಗಿ ವಿಶ್ವದ ಅನೇಕ ದೇಶಗಳಲ್ಲಿ ವ್ಯವಸ್ಥಿತಗೊಂಡಿದೆ. ಸ್ವಾತಂತ್ರೋತ್ತರ ಭಾರತಕ್ಕೆ ಸೂಕ್ತ ರಾಜಕೀಯ ವ್ಯವಸ್ಥೆಯನ್ನು ನಿರ್ಧರಿಸುವ ಸಂದರ್ಭದಲ್ಲಿ ಸಂವಿಧಾನದ ನಿರ್ಮಾಪಕರು ಪ್ರಜಾಪ್ರಭುತ್ವವನ್ನು ಆರಿಸಿಕೊಂಡು ಜನರ ಭಾಗವಹಿಸುವಿಕೆ ಮತ್ತು ಪ್ರಾತಿನಿಧ್ಯತೆಗೆ ವಿಶೇಷ ಮನ್ನಣೆ ನೀಡಿದ್ದಾರೆ.

## ೧.೨. ರಾಜಕೀಯ ಭಾಗವಹಿಸುವಿಕೆಯ ವಿವಿಧ ದೃಷ್ಟಿಕೋನಗಳು

ಪ್ರಜಾಪ್ರಭುತ್ವದಲ್ಲಿ ರಾಜಕೀಯ ಭಾಗವಹಿಸುವಿಕೆಯೆಂಬುವುದು ರಾಜ್ಯದ ಪ್ರತಿಯೊಬ್ಬ ಸದಸ್ಯನಾದ ಪೌರ/ನಾಗರಿಕನ ಹಕ್ಕು ಮತ್ತು ಕರ್ತವ್ಯ ಎರಡೂ ಹೌದು. ಪ್ರತಿಯೊಬ್ಬ ಪೌರನು

'ಆಳುವವ' ಎಂಬ ಅರ್ಥದಲ್ಲಿ ರಾಜ್ಯದ ಪ್ರತಿಯೊಂದು ಆಗುಹೋಗುಗಳಲ್ಲಿ ಭಾಗಿಯಾಗುವ ಅವಕಾಶ/ಹಕ್ಕನ್ನು ಹೊಂದಿರುತ್ತಾನೆ. ಪ್ರಜೆಗಳ ಸಹಮತ ಅಥವಾ ಬೆಂಬಲವಿಲ್ಲದೆ ಪ್ರಾತಿನಿಧಿಕ ಸರಕಾರಗಳು ಯಾವುದೇ ನಿರ್ಧಾರ, ನೀತಿ, ಅಥವಾ ಧೋರಣೆಗಳನ್ನು ರೂಪಿಸಲು ಸಾಧ್ಯವಿಲ್ಲ. ಒಂದು ವೇಳೆ ಈ ರೀತಿಯ ದುಸ್ಸಾಹಸಕ್ಕೆ ಅವುಗಳು ಇಳಿದರೆ ಜನ ಬೆಂಬಲ ಮತ್ತು ಅಧಿಕಾರಗಳನ್ನು ಕಳೆದುಕೊಳ್ಳಬೇಕಾಗುತ್ತದೆ. ಆದುದರಿಂದ ಜನರ ಸಕ್ರಿಯ ಪಾಲುಗೊಳ್ಳುವಿಕೆಯು ಪ್ರಜಾತಂತ್ರ ವ್ಯವಸ್ಥೆಯ ಯಶಸ್ವೀ ಆಚರಣೆಗೆ ಅನಿವಾರ್ಯವೆಂಬುದರಲ್ಲಿ ಯಾವುದೇ ಅನುಮಾನವಿಲ್ಲ. ರಾಜಕೀಯ ಪ್ರಕ್ರಿಯೆಗಳಲ್ಲಿ ಪ್ರಜೆಗಳ ಭಾಗವಹಿಸುವಿಕೆಯಿಂದಾಗಿ ರಾಜ್ಯದ ಪ್ರತಿಯೊಂದು ಆಗುಹೋಗುಗಳಲ್ಲಿ ಪ್ರಜೆಗಳ ಧ್ವನಿಗೆ ಪ್ರಾಧಾನ್ಯತೆ ಸಿಗುವುದು ಮಾತ್ರವಲ್ಲದೆ, ಆಡಳಿತ ಯಾವ ದಿಸೆಯಲ್ಲಿ ಚಲಿಸಬೇಕೆಂಬುದಾಗಿಯೂ ನಿರ್ಧರಿಸುವ ಅವಕಾಶವೂ ಇರುತ್ತದೆ. ರಾಜಕೀಯ ಪ್ರಕ್ರಿಯೆಗಳಲ್ಲಿ ಪ್ರಜೆಗಳ ಪಾಲ್ಗೊಳ್ಳುವಿಕೆಯಿಂದಾಗಿ ಸರ್ಕಾರದ ಅಧಿಕಾರಕ್ಕೆ ಹೆಚ್ಚಿನ ಒಂದು ಬದ್ಧತೆ ಮತ್ತು ಜನಾನುಮತಿ ಲಭ್ಯವಾಗುತ್ತದೆ. ಇದರಿಂದಾಗಿ ಪ್ರಜಾಪ್ರಭುತ್ವದ ಆಚರಣೆ ಮತ್ತಷ್ಟೂ ಅರ್ಥಪೂರ್ಣವಾಗುತ್ತದೆ.

ಆಧುನಿಕ ಪ್ರಜಾಪ್ರಭುತ್ವಗಳೆಲ್ಲವೂ 'ಪ್ರಾತಿನಿಧಿಕ' ಅಥವಾ ಪರೋಕ್ಷ ಪ್ರಜಾಪ್ರಭುತ್ವ ವ್ಯವಸ್ಥೆಗಳು. ಇಲ್ಲಿ ಮತದಾರರೆಂದರೆ ದೇಶದ ಸಮಸ್ತ ಪೌರರು ಆಗಿರುತ್ತಾರೆ. ಪರಮಾಧಿಕಾರದ ಸ್ಥಾನವೇ ಇಲ್ಲಿದೆ. ಒಂದು ಶಾಸನ ಸಭೆಗೆ ಚುನಾಯಿಸಲ್ಪಟ್ಟ ಅಭ್ಯರ್ಥಿಯು ಜನರ ಆಶೋತ್ತರಗಳಿಗೆ ಮತ್ತು ರಾಜ್ಯವು ಸ್ಪಂದಿಸಬಹುದಾದ ರೀತಿನೀತಿಗಳಿಗೆ ಅಧಿಕೃತ ರೂಪು ನೀಡುವ ನಾಯಕನ ಸ್ಥಾನವನ್ನು ಪಡೆಯುತ್ತಾನೆ. ರಾಜಕೀಯ ಪಕ್ಷಗಳು, ಜನರು ಮತ್ತು ಸರ್ಕಾರದ ನಡುವಣ ಸಂಪರ್ಕ ಸೇತುವೆಯಾಗಿ ಕೆಲಸ ಮಾಡುತ್ತದೆ.

ಪ್ರಜೆಗಳು ರಾಜಕೀಯ ಪ್ರಕ್ರಿಯೆಗಳಲ್ಲಿ ಭಾಗವಹಿಸುವುದು ಏಕರೂಪವಾಗಿಲ್ಲ. ಈ ದೇಶದಲ್ಲಿ ರಾಜಕೀಯ ವ್ಯವಸ್ಥೆಯು ವಿಕೇಂದ್ರೀಕೃತಗೊಂಡಿದೆ. ಕೇಂದ್ರ, ರಾಜ್ಯ ಹಾಗೂ ಸ್ಥಳೀಯ ಸರ್ಕಾರಗಳು ಅತೀ ಹೆಚ್ಚಿನ ಸಂಖ್ಯೆಯಲ್ಲಿ ಜನರು ಪಾಲ್ಗೊಳ್ಳಲು ಅವಕಾಶ ಮಾಡಿಕೊಡುವುದಲ್ಲದೆ ಪ್ರಜಾಪ್ರಭುತ್ವದ ಬೇರುಗಳು ವ್ಯಾಪಕವಾಗಿ ಗಟ್ಟಿಗೊಳ್ಳಲು ಸ್ಥಳೀಯ ಸ್ವ–ಸರ್ಕಾರ ವ್ಯವಸ್ಥೆಗಳು ಅನುಕೂಲಕಾರಿ ವಾತಾವರಣವನ್ನು ಸೃಷ್ಟಿಸಿದೆ.

ರಾಜಕೀಯ ಭಾಗವಹಿಸುವಿಕೆ ಎಂಬ ವಿಚಾರವು ರಾಜ್ಯಶಾಸ್ತ್ರದ ವಿದ್ವಾಂಸರುಗಳಿಗೆ ಹೊಸತೇನಲ್ಲ. ರಾಜಕೀಯ ಚಿಂತಕರುಗಳು ಜನರು ಹೇಗೆ ಮತ್ತು ಯಾವ ಕಾರಣಕ್ಕಾಗಿ ರಾಜಕೀಯದಲ್ಲಿ ಪಾಲುಗೊಳ್ಳುತ್ತಾರೆ ಎಂಬ ಪ್ರಶ್ನೆಗಳಿಗೆ ಉತ್ತರವನ್ನು ನಿರಂತರವಾಗಿ ಶೋಧಿಸುತ್ತಿದ್ದರು. ರಾಜಕೀಯ ಭಾಗವಹಿಸುವಕೆಯ ಬಗ್ಗೆ ಹಲವು ಚಿಂತಕರ ಅಭಿಪ್ರಾಯಗಳು ಅಭಿವ್ಯಕ್ತಿಗೊಂಡಿವೆ.

ಆರಂಭದಲ್ಲಿ 'ಪೊಲಿಟಿಕಲ್ ಪಾರ್ಟಿಸಿಪೇಶನ್' ಅಥವಾ ರಾಜಕೀಯ ಭಾಗವಹಿಸುವಿಕೆ ಎಂಬ ಪರಿಕಲ್ಪನೆಯನ್ನು ಅರ್ಥೈಸಿಕೊಳ್ಳಬೇಕು. ಇಲ್ಲಿ ಎರಡು ಪದಗಳಿವೆ. ಪ್ಯಾರಿ ಎಂಬ ವಿದ್ವಾಂಸನ ಪ್ರಕಾರ 'ಪಾರ್ಟಿಸಿಪೇಶನ್' ಅಥವಾ ಭಾಗವಹಿಸುವಿಕೆ ಎಂಬ ಪದದ ಅರ್ಥವೇನೆಂದರೆ, ಅದೊಂದು ಪಾಲುಗೊಳ್ಳುವ ಕ್ರಿಯೆ ಅಥವಾ ಇತರರ ಜತೆಗೆ ಹಂಚಿಕೊಂಡು ಮಾಡುವ ಕಾರ್ಯ ಎಂಬುದಾಗಿ ತಿಳಿಸಿದ್ದಾನೆ. ಭಾಗವಹಿಸುವಿಕೆಯೆಂಬುದು ಒಂದು ಸಾಮಾನ್ಯ ಪದವಾಗಿದೆ[2]. ಆದರೆ 'ರಾಜಕೀಯ' ಎಂಬ ಪದವನ್ನು 'ಭಾಗವಹಿಸುವಿಕೆ' ಪದದ ಮೊದಲು ಸೇರಿಸಿದಾಗ ತಕ್ಕಮಟ್ಟಿನ ಗೊಂದಲವೇರ್ಪಡುತ್ತದೆ. ಪ್ಯಾರಿಯ ಪ್ರಕಾರ, ರಾಜಕೀಯ ಮತ್ತು ಭಾಗವಹಿಸುವಿಕೆ ಎಂಬ ಎರಡು ಪದಗಳನ್ನು ಜತೆ ಸೇರಿಸಿದಾಗ, ಯಾವುದಾದರೂ ರಾಜಕೀಯ ಚಟುವಟಿಕೆಯಲ್ಲಿ ಪಾಲ್ಗೊಳ್ಳುವುದು ಎಂಬ ಸ್ಪಷ್ಟ ಅರ್ಥ ಅದಕ್ಕೆ ಬರುತ್ತದೆ. ಪ್ಯಾರಿಯ ಮಾತುಗಳಲ್ಲೆ ಹೇಳುವುದಾದರೆ, "ಯಾವಾತನಿಗೆ ಸರಕಾರದ ನೀತಿ ನಿರೂಪಣೆಯನ್ನು ಪ್ರಭಾವಿಸುವ ತಾರ್ಕಿಕ ನಿರೀಕ್ಷೆ ಅಥವಾ ಕೊನೆಯ ಪಕ್ಷ ತನ್ನ ಧ್ವನಿ ಈ ನೀತಿ ನಿರೂಪಣೆಯ ಪ್ರಕ್ರಿಯೆಯಲ್ಲಿ ಕೇಳಿಸುವಂತೆ ಆಗಿಸುತ್ತಾನೋ ಅವನೇ ರಾಜಕೀಯ ಸಹಭಾಗಿ ಎನಿಸುತ್ತಾನೆ. ಈ ರಾಜಕೀಯ ಸಹಭಾಗಿಗಳು ಮತದಾನದಂತಹ ಸಾಧಾರಣ ರಾಜಕೀಯ ಕಾರ್ಯದಿಂದ ಆರಂಭಿಸಿ ಸರ್ಕಾರದಲ್ಲಿ ಸಂಪುಟ ದರ್ಜೆಯ ಸಚಿವ ಸ್ಥಾನವನ್ನು ಅಲಂಕರಿಸುವವರೆಗಿನ ತನಕದ ಕಾರ್ಯಗಳಲ್ಲಿ ಭಾಗವಹಿಸಬಹುದಾಗಿದೆ".

ರಾಜ್ಯಶಾಸ್ತ್ರದ ಪಿತಾಮಹನಾದ ಅರಿಸ್ಟಾಟಲನು ತನ್ನ ಮೇರು ಕೃತಿಯಾದ 'ಪಾಲಿಟಿಕ್ಸ್' ನಲ್ಲಿ ಪಟ್ಟಣ ರಾಜ್ಯಗಳನ್ನು ಸ್ವಾವಲಂಬಿಯನ್ನಾಗಿ ಮಾಡುವ ಚರ್ಚೆಗಳು, ತೀರ್ಮಾನಗಳಲ್ಲಿ ಯಾರು ಭಾಗಿಗಳಾಗುತ್ತಾರೋ ಅವರಿಗೆ ಪೌರನೆಂಬುದಾಗಿ ಪರಿಗಣಿಸಿದ್ದಾನೆ. ಆಧುನಿಕ ರಾಜ್ಯ ಶಾಸ್ತ್ರದ

ಸಾಹಿತ್ಯ ಹಾಗೂ ಬರವಣಿಗೆಗಳಲ್ಲಿ ಸಿಡ್ನಿ ವರ್ಬಾ, ಶ್ಲೋಜ್‌ಮಾನ್, ಬ್ರಾಡಿ ಮತ್ತು ನೀ ಮೊದಲಾದ ವಿದ್ವಾಂಸರುಗಳು ರಾಜಕೀಯ ಭಾಗವಹಿಸುವಿಕೆಯನ್ನು ಪೌರರ ಬೇಡಿಕೆ ಮತ್ತು ಅಗತ್ಯಗಳನ್ನು ನೀತಿ ನಿರೂಪಕರಿಗೆ ಸಂವಹಿಸುವ ಮತ್ತು ಅವರ ಅವಶ್ಯಕತೆಗಳನ್ನು ಪೂರೈಸುವಂತೆ ಒತ್ತಡವನ್ನು ಬೀರುವ ತಂತ್ರ ಅಥವಾ ಸಾಧನವೆಂಬುದಾಗಿ ಪರಿಗಣಿಸಿದ್ದಾರೆ[೩].

ರಾಜಕೀಯ ಭಾಗವಹಿಸುವಿಕೆಯ ಪರಿಕಲ್ಪನೆಗೆ ಸಂಬಂಧಿಸಿದಂತೆ ಅಮೇರಿಕಾದ ರಾಜಕೀಯ ಪಂಡಿತನಾದ ಲೆಸ್ಟರ್ ಮಿಲ್ ಬ್ರಾತ್‌ನ ಅಭಿಪ್ರಾಯದ ಪ್ರಕಾರ, "ಒಬ್ಬ ವ್ಯಕ್ತಿಯ ರಾಜಕೀಯ ಪಾಲುಗೊಳ್ಳುವಿಕೆಯ ಮೇಲೆ ಪ್ರಭಾವ ಬೀರಬಹುದಾದ ಅತ್ಯಂತ ಪ್ರಮುಖ ಅಂಶವೆಂದರೆ ಆತನ ಶಿಕ್ಷಣದ ಮಟ್ಟವಾಗಿದೆ[೪]". ಹೆಚ್ಚಿಗೆ ಶಿಕ್ಷಿತರು ರಾಜಕೀಯದಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಾರೆ. ಏಕೆಂದರೆ ಹೆಚ್ಚಿಗೆ ಶಿಕ್ಷಿತರಲ್ಲಿ ದೇಶದ ರಾಜಕೀಯ ಸಂಗತಿಗಳ ಕುರಿತು ಆಳವಾದ ಪರಿಜ್ಞಾನವಿರುವುದು ಮಾತ್ರವಲ್ಲದೆ, ರಾಜಕೀಯ ಪ್ರಕ್ರಿಯೆಗಳಲ್ಲಿ ಪರಿಣಾಮಕಾರಿಯಾಗಿ ಭಾಗವಹಿಸಲು ಬೇಕಾದ ಆತ್ಮವಿಶ್ವಾಸವು ತನ್ನಲ್ಲಿರುತ್ತದೆಯೆಂದು ಅಭಿಪ್ರಾಯಪಟ್ಟಿದ್ದಾನೆ.

ಮಿಲ್‌ಬ್ರಾತ್‌ನ ಪ್ರಕಾರ "ರಾಜಕೀಯ ಭಾಗವಹಿಸುವಿಕೆಯಲ್ಲಿ ಅಡಕವಾಗಿರುವ ಚಟುವಟಿಕೆಗಳನ್ನು ಮುಖ್ಯವಾಗಿ ಮೂರು ಗುಂಪುಗಳನ್ನಾಗಿ ವಿಂಗಡಿಸಬಹುದಾಗಿದೆ. ಮೊದಲನೆಯದಾಗಿ, ರಾಜಕೀಯ ಪಕ್ಷಗಳ ಮಾಮೂಲಿ ಕಾರ್ಯ ಚಟುವಟಿಕೆಗಳಾದ ರಾಜಕೀಯ ಹುದ್ದೆಗಳಿಗೆ ನಡೆಯುವ ಚುನಾವಣೆಗಳಲ್ಲಿ ಭಾಗವಹಿಸುವುದು, ಶಾಸಕಾಂಗ ಸಭೆಗಳಿಗೆ ನಡೆಯುವ ಚುನಾವಣೆಗಳಲ್ಲಿ ಪಾಲ್ಗೊಳ್ಳುವುದು, ಪಕ್ಷಕ್ಕಾಗಿ ನಿಧಿ ಸಂಗ್ರಹದಲ್ಲಿ ತೊಡಗುವುದು ಪಕ್ಷದ ಸದಸ್ಯತ್ವ ಹೆಚ್ಚಿಸುವುದಕ್ಕಾಗಿ ಆಂದೋಳನಗಳಲ್ಲಿ ತೊಡಗುವುದು, ಎಲ್ಲೆಲ್ಲೂ ಪಕ್ಷದ ಸಭೆಗಳನ್ನು ಸಂಘಟಿಸಿ ಸಾರ್ವಜನಿಕ ಅಭಿಪ್ರಾಯ ಪಕ್ಷಕ್ಕೆ ಹಿತಕರವಾಗಿ ಮೂಡಿಬರುವಂತೆ ಮಾಡುವುದು, ಇತ್ಯಾದಿಗಳಿಗೆ 'ಗ್ಲಾಡಿಟೋರಿಯಲ್ (ಮಾಮೂಲಿ) ಕಾರ್ಯಾಚಟುವಟಿಕೆಗಳೆಂದು ಕರೆದಿದ್ದಾನೆ. ಅವನ ಪ್ರಕಾರ ಸ್ಥಿತಿಯಂತರಗೊಳ್ಳುತ್ತಿರುವ ರಾಜಕೀಯ ಭಾಗವಹಿಸುವಕೆಯಲ್ಲಿ ಒಳಗೊಂಡಿರುವ ಪಕ್ಷಗಳ ಹಿತೈಷಿಗಳ ಮತ್ತು ಬೆಂಬಲಿಗರ ರಾಜಕೀಯ ಚಟುವಟಿಕೆಗಳಾದ ನೇತಾರರುಗಳ ಭಾಷಣ ಕಾರ್ಯಕ್ರಮಗಳಿಗೆ ಹಾಜರಾಗುವುದು, ಉದಾರವಾಗಿ ಪಕ್ಷಕ್ಕೆ ದೇಣಿಗೆ ನೀಡುವುದು, ಪಕ್ಷದ ನಾಯಕರೊಂದಿಗೆ ಸಂಪರ್ಕವಿರಿಸಿಕೊಳ್ಳುವುದು, ಇತ್ಯಾದಿ, ಇತ್ಯಾದಿಗಳು. ಮೂರನೆಯ ರೂಪದ

ಚಟುವಟಿಕೆಗಳಿಗೆ ಆತ ಪ್ರೇಕ್ಷಕ ರೂಪೀ ಚಟುವಟಿಕೆಗಳೆನ್ನುತ್ತಾನೆ. ಅವುಗಳಲ್ಲಿ ಮತದಾನ ಮಾಡುವುದು, ಇನ್ನೊಬ್ಬರ ಮತದಾನದ ಮೇಲೆ ಪ್ರಭಾವ ಬೀರುವುದು, ರಾಜಕೀಯ ಪ್ರಚೋದನೆಗಳಿಂದ ಪ್ರಭಾವಿತಗೊಳ್ಳುವುದು, ರಾಜಕೀಯ ಪಕ್ಷದ ಲಾಂಛನಗಳನ್ನು ಧರಿಸುವುದು, ಪಕ್ಷದ ಪ್ರಕಟಣಾ ಪತ್ರಗಳನ್ನು ಹಂಚುವುದು, ಇತ್ಯಾದಿಗಳು ಮುಖ್ಯವಾದವುಗಳು[೫]''.

ಮಿಲ್‌ಬ್ರಾತ್‌ನ ಪ್ರಕಾರ ಅಮೇರಿಕಾದ ಸಂಯುಕ್ತ ಸಂಸ್ಥಾನಗಳಲ್ಲಿ ಒಟ್ಟು ಜನಸಂಖ್ಯೆಯಲ್ಲಿ ಕೇವಲ ಶೇಕಡಾ ೩ ರಷ್ಟು ಪಾಲಿನ ಜನ ಮೇಲೆ ಉಲ್ಲೇಖಿಸಿದ ಮೊದಲನೆಯ ವರ್ಗದ ರಾಜಕೀಯ ಭಾಗವಹಿಸುವಿಕೆಯ ಚಟುವಟಿಕಟಗಳಲ್ಲೂ, ಶೇಕಡಾ ೭ರಿಂದ ೯ರಷ್ಟು ಜನ ಎರಡನೆಯ ವರ್ಗದ ರಾಜಕೀಯ ಭಾಗವಹಿಸುವಿಕೆ ಚಟುವಟಿಕೆಗಳಲ್ಲೂ ತೊಡಗಿಸಿಕೊಂಡಿರುತ್ತಾರೆ. ಒಬ್ಬ ವ್ಯಕ್ತಿ ಕೇವಲ ಒಂದೇ ರೀತಿಯ ರಾಜಕೀಯ ಭಾಗವಹಿಸುವಿಕೆ ಚಟುವಟಿಕೆಗಳಲ್ಲಿ ಮಾತ್ರ ತೊಡಗಿಸಿಕೊಳ್ಳಬೇಕೆಂಬ ಯಾವ ನಿರ್ಬಂಧವೂ ಇರುವುದಿಲ್ಲ. ಬದಲಾಗಿ ಏಕಕಾಲದಲ್ಲಿ ಎಲ್ಲ ರೀತಿಯ ರಾಜಕೀಯ ಭಾಗವಹಿಸುವಿಕೆ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳಬಹುದಾಗಿದೆ. ರಾಜಕೀಯ ಭಾಗವಹಿಸುವಿಕೆ ಪ್ರಕ್ರಿಯೆಯು ಬದಲಾಗುತ್ತಿರುತ್ತದೆ. ಅವನ ಪ್ರಕಾರ, ಅಮೇರಿಕಾದ ಒಟ್ಟು ಜನಸಂಖ್ಯೆಯಲ್ಲಿ ಸುಮಾರು ೧/೩ ಪಾಲಿನಷ್ಟು ಜನರಿಗೆ ರಾಜಕೀಯ ಚಟುವಟಿಕೆಗಳಲ್ಲಿ ಯಾವುದೇ ಆಸಕ್ತಿಯಿಲ್ಲ. ಮಿಲ್‌ಬ್ರಾತ್‌ನ ಈ ವಿಶ್ಲೇಷಣೆಯು ರಾಜಕೀಯ ಭಾಗವಹಿಸುವಿಕೆಯ ಸ್ವರೂಪದ ಕುರಿತು ಬೆಳಕು ಚೆಲ್ಲುತ್ತದೆ[೬].

ಅಲ್ಪಸಂಖ್ಯಾತರಲ್ಲಿ 'ಎಥ್‌ನಿಸಿಟಿ' ಅಥವಾ 'ಜನಾಂಗೀಯ ಭಾವ'ವೆನ್ನುವುದು ರಾಜಕೀಯ ಭಾಗವಹಿಸುವಿಕೆಯಲ್ಲಿ ಪ್ರಭಾವ ಬೀರುತ್ತದೆ ಎನ್ನುವುದು ಟೆರ್‌ಚೆಕ್ ರೋನಾಲ್ಡ್‌ರವರ ಅಭಿಪ್ರಾಯವಾಗಿರುತ್ತದೆ[೭]. ತಮ್ಮ ಸಮುದಾಯದ ವ್ಯಕ್ತಿಯೊಬ್ಬರು ರಾಜಕೀಯ ಪ್ರಾತಿನಿಧ್ಯತೆಗೆ ತೊಡಗಿಸಿಕೊಳ್ಳುತ್ತಾರೆಂದರೆ ಒಟ್ಟು ಆ ಸಮುದಾಯದ ರಾಜಕೀಯ ಮತದಾನದ ಪ್ರಕ್ರಿಯೆಗಳು ಹೆಚ್ಚುತ್ತವೆ. ಉತ್ತಮ ಫಲಿತಾಂಶಗಳು ಅಲ್ಪಸಂಖ್ಯಾತರಾದವರಲ್ಲಿ ಒಬ್ಬರ ಪ್ರಾತಿನಿಧ್ಯತೆ ತರಬಹುದು ಎಂಬ ಕಲ್ಪನೆಗಳು ಜನರನ್ನು ಪಾಲ್ಗೊಳ್ಳುವಂತೆ ಪ್ರೇರೇಪಿಸುತ್ತದೆ, ಜೊತೆಗೆ ತಮ್ಮ ಸಮುದಾಯದಲ್ಲಿ ಚುನಾವಣಾ ಕಣಕ್ಕೆ ಸಿದ್ಧರಾಗದೆ ಇದ್ದಲ್ಲಿ ಅಥವಾ ನಾಯಕತ್ವವಿಲ್ಲವೆಂದಾದರೆ ರಾಜಕೀಯ ವ್ಯವಸ್ಥೆಗಳ ಲಾಭ ಪಡೆಯಲಾಗುವುದಿಲ್ಲವೆಂಬ ಆಲೋಚನೆಗಳು ಸಹ ಸಂಭಾವ್ಯ ಸಹಭಾಗಿಗಳಲ್ಲಿ ರಾಜಕೀಯ

ಭಾಗವಹಿಸುವಿಕೆಯ ಪ್ರಮಾಣ ಹೆಚ್ಚಿಸಲು ಕಾರಣವಾಗುತ್ತದೆ. ಒಟ್ಟು ರಾಜಕೀಯ ವ್ಯವಸ್ಥೆಯಿಂದ ಕೇವಲ ಮತ ಚಲಾಯಿಸುವುದರಿಂದ ಹೆಚ್ಚಿನ ಬದಲಾವಣೆ ತರಲು ಸಾಧ್ಯವಿಲ್ಲವೆಂಬ ನಂಬಿಕೆಯು ಇತರ ಸಮುದಾಯದ ಜನರಲ್ಲಿ ಇರುವಂತೆಯೇ ಅಲ್ಪಸಂಖ್ಯಾತರಲ್ಲೂ ಇದೆ ಎನ್ನುವ ವಿಷಯವನ್ನು ಗಮನಿಸಬೇಕು.

ಹೀಗೆ ಪ್ರಜಾಪ್ರಭುತ್ವದಲ್ಲಿ ಜನರ ಭಾಗವಹಿಸುವಿಕೆ ಎನ್ನುವುದು ಅತ್ಯಂತ ಪ್ರಾಮುಖ್ಯವಾದ ವಿಷಯವಾಗಿದೆ. ಇದಕ್ಕೆ ಮಹಿಳೆ – ಪುರುಷ, ಶ್ರೀಮಂತ – ಬಡವ, ಅಲ್ಪಸಂಖ್ಯಾತ – ಬಹುಸಂಖ್ಯಾತ ಇತ್ಯಾದಿ ಬೇಧಗಳಿಲ್ಲ. ದೇಶದ ಸಂವೈಧಾನಿಕ ನಿಯಮಗಳನ್ನು ವಾಸ್ತವಿಕವಾಗಿ ಕಾರ್ಯಗತಗೊಳಿಸುವ ನಿಟ್ಟಿನಲ್ಲಿ ಎಲ್ಲ ಸಮುದಾಯಗಳ ಪ್ರಾತಿನಿಧ್ಯತೆಯು ಅಗತ್ಯ. ನಾಯಕತ್ವದ ಆಯ್ಕೆ ಮತದಾನ, ಪಕ್ಷಗಳ ಆಯ್ಕೆ ಮುಂತಾದವುಗಳು ಪ್ರಜಾಪ್ರಭುತ್ವದ ಜೀವನಾಡಿಯಾಗಿ ಕೆಲಸ ಮಾಡುತ್ತದೆ. ಸಾರ್ವಜನಿಕವಾಗಿ ತೊಡಗಿಸಿಕೊಳ್ಳುವುದು ಮನುಷ್ಯನ ಮೂಲ ಸ್ವಭಾವವೆಂದು ಅರಿಸ್ಟಾಟಲ್[೮] ಅಭಿವ್ಯಕ್ತಿಸಿದ್ದು ಈ ಹಿನ್ನೆಲೆಗಳಿಂದ ಪುಷ್ಟೀಕರಣವನ್ನು ಪಡೆಯುತ್ತದೆಯಾದರೂ ಒಂದು ದೇಶದೊಳಗೆ ಬಹು ಸಂಖ್ಯಾತರ ಪ್ರಭಾವ, ಪಾಲ್ಗೊಳ್ಳುವಿಕೆ, ನಿಯಂತ್ರಣ ಮುಂತಾದವುಗಳ ನಡುವೆ ಅಲ್ಪಸಂಖ್ಯಾತರೆನಿಸಿಕೊಂಡ ಜನರು ಸಕ್ರಿಯವಾಗಿ ಪಾಲ್ಗೊಳ್ಳಲು ಎಡರು–ತೊಡರುಗಳಿವೆಯೇ ಎನ್ನುವುದನ್ನು ಪರಿಶೀಲಿಸಬೇಕಾಗುತ್ತದೆ.

### ೧.೩. ಸಂವಿಧಾನ ಮತ್ತು ಅಲ್ಪಸಂಖ್ಯಾತರ ಸ್ಥಾನಮಾನಗಳು

ಭಾರತದ ಗಣರಾಜ್ಯವು ಬಹು ಭಾಷಾ, ಬಹು ಸಂಸ್ಕೃತಿ ಹಾಗೂ ಬಹು ಧರ್ಮೀಯರನ್ನೊಳಗೊಂಡ ರಾಷ್ಟ್ರವಾಗಿದೆ. ಈ ದೇಶ ಅನೇಕ ವೈವಿಧ್ಯತೆಗಳನ್ನೊಳಗೊಂಡ ನಾಡಾಗಿದೆ. ನಮ್ಮ ದೇಶವು ಹಿಂದೂ, ಇಸ್ಲಾಂ, ಬೌದ್ಧ, ಕ್ರೈಸ್ತ, ಸಿಖ್ಖ, ಜೈನ, ಪಾರ್ಸಿ, ಯಹೂದ್ಯ ಧರ್ಮಗಳ ಅನುಯಾಯಿಗಳನ್ನೊಳಗೊಂಡಿವೆ. ಸಂವಿಧಾನದ ಪ್ರಕಾರ ಭಾರತವು ಒಂದು ಧರ್ಮ ನಿರಪೇಕ್ಷ ರಾಷ್ಟ್ರವೆನಿಸಿಕೊಂಡಿದೆ. ಧಾರ್ಮಿಕ ತಳಹದಿಯಲ್ಲಿ ನೋಡುವುದಾದರೆ ಈ ದೇಶದಲ್ಲಿ ಹಿಂದೂಗಳು ಒಟ್ಟು ಜನಸಂಖ್ಯೆಯ ೮೦.೪೬ ಶೇಕಡ (೮೨೭, ೫೭೮, ೮೬೮) ವಿದ್ದು ಬಹು ಸಂಖ್ಯಾತರೆನಿಸಿಕೊಂಡಿದ್ದಾರೆ. ಉಳಿದಂತೆ ಮುಸ್ಲೀಮರು, ಕ್ರೈಸ್ತರು, ಸಿಖ್ಖರು, ಭೌದ್ಧರು, ಜೈನರು,

ಪಾರ್ಸಿಗಳು ಧಾರ್ಮಿಕ ಅಲ್ಪಸಂಖ್ಯಾತರೆನಿಸಿಕೊಂಡಿದ್ದಾರೆ. ಮುಸ್ಲೀಮರು ಎರಡನೆಯ ಅತಿ ದೊಡ್ಡ ಧಾರ್ಮಿಕ ಸಮುದಾಯವಾಗಿದ್ದು ದೇಶದ ಒಟ್ಟು ಜನಸಂಖ್ಯೆಯ ಶೇಕಡ ೧೩.೪೩ (೧೩೮, ೧೮೮, ೨೪೦) ರಷ್ಟಿದ್ದು ದೊಡ್ಡ ಅಲ್ಪಸಂಖ್ಯಾತ ಸಮುದಾಯವೆನಿಸಿದೆ. ಕ್ರೈಸ್ತರು ದೇಶದ ಒಟ್ಟು ಜನಸಂಖ್ಯೆಯ ಶೇಕಡ ೨.೩೪ (೨೪,೦೮೦, ೦೧೬) ರಷ್ಟಿದ್ದು ಮೂರನೆಯ ಅತಿ ದೊಡ್ಡ ಧಾರ್ಮಿಕ ಸಮುದಾಯವಾಗಿ ಹೊರ ಹೊಮ್ಮಿದೆ[೬].

ಸಾಮಾನ್ಯವಾಗಿ ಹೇಳುವುದಿದ್ದರೆ, ಅಲ್ಪಸಂಖ್ಯಾತರೆಂದರೆ ಅಂಕಿ ಅಂಶಗಳ ಪ್ರಕಾರ ಇತರ ಪಂಗಡಗಳಿಗಿಂತ ಕಡಿಮೆ ಜನಸಂಖ್ಯೆ ಇರುವ ಸಮುದಾಯವಾಗಿದೆ. ವಿಶ್ವಸಂಸ್ಥೆಯ ಪ್ರಕಾರ, ಅಲ್ಪಸಂಖ್ಯಾತರೆಂದರೆ ರಾಜ್ಯದ ಇತರ ಜನಸಂಖ್ಯೆಗಿಂತ ಸಾಂಖಿಕವಾಗಿ ಕೀಳಾದ ಸಮೂಹವಾಗಿದೆ. ಹಾಗೂ ಇತರರನ್ನು ನಿಯಂತ್ರಿಸಲಾರದ ಸ್ಥಾನ ಪಡೆದವರಾಗಿದ್ದಾರೆ. ಅದರ ಸದಸ್ಯರುಗಳು ಆ ರಾಜ್ಯದ ರಾಷ್ಟ್ರೀಯರಾಗಿದ್ದು ಇತರ ಜನರಿಗಿಂತ ಭಿನ್ನವಾದ ಕುಲ, ಧರ್ಮ ಅಥವಾ ಭಾಷಿಕ ಲಕ್ಷಣಗಳನ್ನು ಹೊಂದಿದ್ದು ತಮ್ಮ ಸಂಸ್ಕೃತಿ, ಸಂಪ್ರದಾಯ, ಧರ್ಮ ಮತ್ತು ಭಾಷೆಯನ್ನು ಸಂರಕ್ಷಿಸುವಲ್ಲಿ ಏಕತೆಯ ಮನೋಭಾವವನ್ನು ತೋರಿಸುತ್ತಾರೆ. ಭಾರತದ ಸಂವಿಧಾನದ ಪ್ರಕಾರ ನಮ್ಮಲ್ಲಿನ ಅಲ್ಪಸಂಖ್ಯಾತರನ್ನು ಮುಖ್ಯವಾಗಿ ಎರಡು ವರ್ಗಗಳನ್ನಾಗಿ ವಿಂಗಡಿಸಬಹುದಾಗಿದೆ.

- ಭಾಷಾ ನೆಲೆಯಲ್ಲಿ ಅಲ್ಪಸಂಖ್ಯಾತರು ಹಾಗೂ
- ಧಾರ್ಮಿಕ ನೆಲೆಯಲ್ಲಿ ಅಲ್ಪಸಂಖ್ಯಾತರು

ಇವುಗಳಲ್ಲಿ ಕ್ರೈಸ್ತ ಸಮುದಾಯವು ದಾರ್ಮಿಕ ಅಲ್ಪಸಂಖ್ಯಾತ ವರ್ಗಕ್ಕೆ ಸೇರಿದೆ.

ನಮ್ಮ ಸಂವಿಧಾನದ ಮೂರನೆಯ ಅಧ್ಯಾಯದಲ್ಲಿ ಬರುವ ಆರು ವರ್ಗಗಳ ಮೂಲಭೂತ ಹಕ್ಕುಗಳಲ್ಲಿ ಸಂವಿಧಾನದ ೨೯ ಮತ್ತು ೩೦ ನೇ ವಿಧಿಗಳಡಿಯಲ್ಲಿ ಕೊಟ್ಟಿರುವ ಸಾಂಸ್ಕೃತಿಕ ಮತ್ತು ಶೈಕ್ಷಣಿಕ ಹಕ್ಕುಗಳನ್ನು ಅಲ್ಪಸಂಖ್ಯಾತರ ಹಕ್ಕುಗಳೆಂದೇ ವಿಶ್ಲೇಷಿಸಲಾಗಿದೆ. ಈ ವಿಶೇಷ ಹಕ್ಕುಗಳು ಕೇವಲ ಸಾಂಸ್ಕೃತಿ ಮತ್ತು ಭಾಷಾ ಅಲ್ಪಸಂಖ್ಯಾತರಿಗೆ ಮಾತ್ರವಲ್ಲದೆ ಧಾರ್ಮಿಕ ಅಲ್ಪಸಂಖ್ಯಾತರಿಗೂ ಅನ್ವಯವಾಗುತ್ತದೆ. ಈ ಹಕ್ಕುಗಳು ಎಲ್ಲಾ ವರ್ಗದ ಅಲ್ಪಸಂಖ್ಯಾತರ ಸಂಸ್ಕೃತಿ, ಭಾಷೆ ಹಾಗೂ ಲಿಪಿಗಳನ್ನು ಸಂರಕ್ಷಿಸುವಲ್ಲಿ ಸಹಕರಿಸಿ ಅವರ ಅನನ್ಯತೆಯನ್ನು ಉಳಿಸಿಕೊಳ್ಳಲು ನೆರವಾಗುತ್ತದೆ.

ಸಂವಿಧಾನದ ೨೯ನೇ ವಿಧಿಯ (೧) ನೇ ಉಪವಿಧಿಯ ಪ್ರಕಾರ, ಭಾರತದ ಯಾವುದೇ ಭಾಗದಲ್ಲಿ ವಾಸಿಸುವ ಯಾವುದೇ ವರ್ಗದ ಜನರು ತಮ್ಮ ವಿಶಿಷ್ಟ ಭಾಷೆ, ಲಿಪಿ ಮತ್ತು ಸಂಸ್ಕೃತಿಯನ್ನು ರಕ್ಷಿಸಿಕೊಳ್ಳುವ ಹಕ್ಕನ್ನು ಹೊಂದಿದ್ದಾರೆ.

೨೯ ರಲ್ಲಿ (೨) ನೇ ಉಪವಿಧಿಯ ಪ್ರಕಾರ “ಸರ್ಕಾರದ ಅನುದಾನ ಪಡೆಯುವ ಅಥವಾ ಸರಕಾರದಿಂದಲೇ ನಡೆಸುವ ಯಾವುದೇ ಶಿಕ್ಷಣ ಸಂಸ್ಥೆಗಳಲ್ಲಿ ಧರ್ಮ, ಜನಾಂಗ, ಜಾತಿ, ಭಾಷೆಯನ್ನು ಆಧಾರವಾಗಿಟ್ಟುಕೊಂಡು ಯಾವುದೇ ವ್ಯಕ್ತಿಗಾಗಲೀ ಪ್ರವೇಶವನ್ನು ನಿರಾಕರಿಸುವಂತಿಲ್ಲ[೧೦]”.

ಸಂವಿಧಾನದ ೩೦ನೇ ವಿಧಿಯ (೧) ನೇ ಉಪವಿಧಿಯ ಪ್ರಕಾರ “ಎಲ್ಲಾ ಧಾರ್ಮಿಕ ಮತ್ತು ಭಾಷಾ ಅಲ್ಪಸಂಖ್ಯಾತರು ಅವರದೇ ಆದ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿಕೊಂಡು ನಡೆಸಿಕೊಂಡು ಹೋಗುವ ಹಕ್ಕನ್ನು ಹೊಂದಿರುತ್ತಾರೆ[೧೧].”

ಸರ್ವೋಚ್ಛ ನ್ಯಾಯಾಲಯದ ಅಕ್ಟೋಬರ್ ೩೧, ೨೦೦೨ ರ ತೀರ್ಪಿನ ಪ್ರಕಾರ, ತಮ್ಮ ಆಯ್ಕೆಯ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿ ನಡೆಸಿಕೊಂಡು ಹೋಗುವ ಅಲ್ಪಸಂಖ್ಯಾತರ ಹಕ್ಕನ್ನು ಈ ಕೆಳಗಿನಂತೆ ಮರುವ್ಯಾಖ್ಯಾನಿಸಲಾಗಿದೆ. ಸರ್ಕಾರದಿಂದ ಅನುದಾನ ಪಡೆದು ನಡೆಸಲ್ಪಡುವ ಅಲ್ಪ ಸಂಖ್ಯಾತರ ಶಿಕ್ಷಣ ಸಂಸ್ಥೆಗಳ ಮೇಲೆ ರಾಜ್ಯವು ಕೆಲವೊಂದು ನಿಯಂತ್ರಣಗಳನ್ನು ಹೇರಬಹುದಾದರೂ, ಅನುದಾನ ಪಡೆಯದೆ ನಡೆಸಲ್ಪಡುವ ಶಿಕ್ಷಣ ಸಂಸ್ಥೆಗಳು ಅನಿಯಂತ್ರಿತ ಹಕ್ಕುಗಳನ್ನು ಪಡೆದಿವೆ.

ಸಂವಿಧಾನದ ೩೦ನೇ ವಿಧಿಯ (೨) ನೇ ಉಪವಿಧಿಯ ಪ್ರಕಾರ, “ಶಿಕ್ಷಣ ಸಂಸ್ಥೆಗಳಿಗೆ ರಾಜ್ಯವು ಧನ ಸಹಾಯ ನೀಡುವಾಗ ಅಲ್ಪಸಂಖ್ಯಾತರಿಂದ ನಡೆಸಲ್ಪಡುತ್ತಿದೆ ಅಥವಾ ಧರ್ಮ ಭಾಷೆಗೆ ಸೇರಿವೆ ಎಂಬ ಕಾರಣಕ್ಕಾಗಿ ತಾರತಮ್ಯವೆಸಗಬಾರದು[೧೨]”.

ಅಲ್ಪಸಂಖ್ಯಾತರು ತಮ್ಮದೇ ಆದ ಶಿಕ್ಷಣ ಸಂಸ್ಥೆಗಳನ್ನು ನಿರ್ವಹಿಸುವ ಹಕ್ಕು ಕೂಡ ಕೆಲವೊಂದು ಮಿತಿಗಳು ಮತ್ತು ನಿರ್ಬಂಧಗಳಿಗೊಳಪಟ್ಟಿವೆ. ಅಂತಹ ಸಂಸ್ಥೆಗಳು ಕ್ರಮಬದ್ಧ ಮತ್ತು ಸಮರ್ಥ ಆಡಳಿತ ನಡೆಸಬೇಕು. ಸಂಸ್ಥೆಗಳು ಉತ್ತಮ ಸ್ಥಿತಿಯಲ್ಲಿ ಕಾರ್ಯ ನಿರ್ವಹಿಸುವಂತೆ ಹಾಗೂ

ಶಿಕ್ಷಕರು ಯೋಗ್ಯ ಅರ್ಹತೆ ಹೊಂದಿರುವಂತೆ, ಹಾಗೂ ಅವರಿಗೆ ನ್ಯಾಯಯುತ ವೇತನ ಕೊಡುವಂತೆ ಆದೇಶ ನೀಡುವ ಅಧಿಕಾರವು ರಾಜ್ಯಕ್ಕಿದೆ. ಶಿಕ್ಷಣ ಸಂಸ್ಥೆಗಳ ಸಾಮರ್ಥ್ಯ, ಶಿಸ್ತು, ಆರೋಗ್ಯ, ನೈರ್ಮಲ್ಯ, ನೀತಿ, ಸಾರ್ವಜನಿಕ ಶಿಸ್ತು ಕಾಪಾಡಲು ಅವಶ್ಯವಿರುವ ನೀತಿ ನಿಯಮಗಳನ್ನು ರಾಜ್ಯವು ರೂಪಿಸಬಹುದು.

ಉಳಿದಂತೆ ಭಾರತದ ಸಂವಿಧಾನದ ಮೂರನೆಯ ಭಾಗದಲ್ಲಿ ಬರುವ ಎಲ್ಲಾ ಮೂಲಭೂತ ಹಕ್ಕಗಳು – ಅದು ಸಮಾನತೆ, ಸ್ವಾತಂತ್ರ್ಯ ಶೋಷಣೆಯ ವಿರುದ್ಧದ ಹಕ್ಕು, ಧಾರ್ಮಿಕ ಸ್ವಾತಂತ್ರ್ಯದ ಹಕ್ಕುಗಳು ಮತ್ತು ಸಂವಿಧಾನಾತ್ಮಕ ಪರಿಹಾರದ ಹಕ್ಕುಗಳು – ಇವುಗಳೆಲ್ಲವೂ ಅಲ್ಪಸಂಖ್ಯಾತರಂತೆ ಬಹುಸಂಖ್ಯಾತರಿಗೂ ಸಮಾನವಾಗಿ ಅನ್ವಯವಾಗುವ ಹಕ್ಕುಗಳು ಎನ್ನುವುದನ್ನು ಗಮನಿಸಬೇಕು.

ಬ್ರಿಟೀಷ್ ಆಳ್ವಿಕೆಯ ಕಾಲಘಟ್ಟದಲ್ಲಿ ಅಲ್ಪಸಂಖ್ಯಾತರಿಗೆ ಅವರ ಸಂಖ್ಯಾವಾರು ಪ್ರಮಾಣಕ್ಕನುಗುಣವಾಗಿ ಶಾಸನ ಸಭೆಗಳಲ್ಲಿ ಕೋಮುವಾರು ಪ್ರಾತಿನಿಧ್ಯವನ್ನು ಒದಗಿಸಿ ಕೊಡಲಾಗಿತ್ತು[೧೩]. ಆದರೆ ಧಾರ್ಮಿಕ ನೆಲೆಯಲ್ಲಿ ಭಾರತದ ಉಪಖಂಡ ೧೯೪೭ ರಲ್ಲಿ ವಿಭಜಿಸಲ್ಪಟ್ಟ ಪರಿಣಾಮವಾಗಿ ಹೊಸ ಸಂವಿಧಾನದ ಅಡಿಯಲ್ಲಿ ಕೋಮುವಾರು ಪ್ರಾತಿನಿಧ್ಯ ಮುಸ್ಲೀಮರಿಗೆ, ಕ್ರೈಸ್ತರಿಗೆ, ಸಿಖ್ಖರಿಗೆ, ದಲಿತರಿಗೆ ಈ ಹಿಂದೆ ಕೊಟ್ಟಿದ್ದನ್ನು ರದ್ದಾಯಿತಿ ಮಾಡಲಾಯಿತು. ಹೊಸ ಸಂವಿಧಾನವು ಧರ್ಮ ನಿರಪೇಕ್ಷ ರಾಷ್ಟ್ರವನ್ನು ಸ್ಥಾಪಿಸುವ ಉದ್ದೇಶದಿಂದ ಧಾರ್ಮಿಕ ತಳಹದಿಯಲ್ಲಿ ಪ್ರಾತಿನಿಧ್ಯ ಕಲ್ಪಿಸುವುದನ್ನು ನಿಲ್ಲಿಸಿತು.

ಸಂವಿಧಾನ ರಚನಾ ಸಭೆಯಲ್ಲಿ ನಡೆದ ಚರ್ಚೆಗಳ ಅಧ್ಯಯನದಿಂದ ತಿಳಿದು ಬರುವುದೇನೆಂದರೆ, ಅಲ್ಪ ಸಂಖ್ಯಾತರಿಗೆ ಕೋಮುವಾರು ತಳಹದಿಯಲ್ಲಿ ರಾಜಕೀಯ ಪ್ರಾತಿನಿಧ್ಯವನ್ನು ನೀಡುವ ಬದಲಿಗೆ ಅಲ್ಪಸಂಖ್ಯಾತರ ಹಿತರಕ್ಷಣೆಯನ್ನು ಗಮನದಲ್ಲಿಟ್ಟುಕೊಂಡು ಸಂವಿಧಾನದ ಮೂಲಭೂತ ಹಕ್ಕುಗಳ ಪಟ್ಟಿಯಲ್ಲಿ ಅವರ ಲಿಪಿ, ಭಾಷೆ ಮತ್ತು ಸಂಸ್ಕೃತಿಯನ್ನು ರಕ್ಷಿಸುವ ಸಲುವಾಗಿ ಕೆಲವು ಹಕ್ಕುಗಳನ್ನು ಸೇರ್ಪಡೆಗೊಳಿಸಲಾಯಿತು[೧೪].

## ೧.೪. ಅಲ್ಪಸಂಖ್ಯಾತ ಕ್ರೈಸ್ತ ಸಮುದಾಯದ ಪರಿಕಲ್ಪನೆ: ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಕ್ರೈಸ್ತ ಸಮುದಾಯದ ಪರಿಚಯ.

ಅಲ್ಪಸಂಖ್ಯಾತರೆಂದರೆ ಅಂಕಿ ಅಂಶಗಳ ಪ್ರಕಾರ ಇತರ ಪಂಗಡಗಳಿಗಿಂತ ಕಡಿಮೆ ಜನಸಂಖ್ಯೆ ಇರುವ ಸಮುದಾಯವಾಗಿದೆ. ಭಾರತದ ಸಂವಿಧಾನದ ಪ್ರಕಾರ ನಮ್ಮಲ್ಲಿನ ಅಲ್ಪಸಂಖ್ಯಾತರನ್ನು ಮುಖ್ಯವಾಗಿ ಭಾಷಾ ನೆಲೆಯಲ್ಲಿ ಹಾಗೂ ಧಾರ್ಮಿಕ ನೆಲೆಯಲ್ಲಿ ಅಲ್ಪಸಂಖ್ಯಾತರು ಎಂದು ಈ ಹಿಂದೆ ಪರಿಗಣಿಸಲಾಗಿದೆ. ಕರ್ನಾಟಕದಲ್ಲಿ ತುಳು ಭಾಷೆ ಮಾತನಾಡುವವರು ಭಾಷಾ ಅಲ್ಪಸಂಖ್ಯಾತರಾಗಿದ್ದಾರೆ. ಧಾರ್ಮಿಕ ತಳಹದಿಯಲ್ಲಿ ಹಿಂದೂ ಸಮುದಾಯವು ಭಾರತದಲ್ಲಿ ಬಹುಸಂಖ್ಯಾತರು. ಅದೇ ರೀತಿಯಲ್ಲಿ ಮುಸ್ಲೀಮರು ಕ್ರೈಸ್ತರು, ಸಿಖ್ಖರು, ಬೌದ್ಧರು, ಜೈನರು, ಪಾರ್ಸಿಗಳು, ಮೊದಲಾದವರು ಧಾರ್ಮಿಕ ಅಲ್ಪಸಂಖ್ಯಾತ ವರ್ಗಕ್ಕೆ ಸೇರಿದವರಾಗಿದ್ದಾರೆ. ಭಾರತದಲ್ಲಿ ಮುಸ್ಲೀಮರು ಅತಿ ದೊಡ್ಡ ಧಾರ್ಮಿಕ ಅಲ್ಪಸಂಖ್ಯಾತರಾಗಿದ್ದಾರೆ. ಕ್ರೈಸ್ತರು ಎರಡನೆಯ ದೊಡ್ಡ ಧಾರ್ಮಿಕ ಅಲ್ಲಸಂಖ್ಯಾತರಾಗಿದ್ದಾರೆ.

ಯೇಸು ಕ್ರಿಸ್ತನ ಅನುಯಾಯಿಗಳಿಗೆ ಕ್ರೈಸ್ತರೆನ್ನುವರು. ಭಾರತದಲ್ಲಿ ಕ್ರೈಸ್ತರು, ಹಿಂದೂ ಮತ್ತು ಮುಸ್ಲೀಮರ ನಂತರ ಮೂರನೆಯ ಅತಿ ದೊಡ್ಡ ಧಾರ್ಮಿಕ ಸಮುದಾಯವೆನಿಸಿದೆ. ೨೦೦೧ ರ ಜನಗಣತಿಯ ಅಂಕಿ ಅಂಶಗಳ ಪ್ರಕಾರ ಭಾರತದಲ್ಲಿ ಕ್ರೈಸ್ತರ ಒಟ್ಟು ಸಂಖ್ಯೆಯು ೨.೪ ಕೋಟಿ ಇದ್ದು, ದೇಶದ ಒಟ್ಟು ಜನಸಂಖ್ಯೆಯು ಶೇಕಡ ೨.೩೪ ರಷ್ಟು ಇದ್ದಾರೆ. ಭಾರತದಲ್ಲಿ ಕ್ರೈಸ್ತ ಧರ್ಮಕ್ಕೆ ಸುಮಾರು ೨೦೦೦ ವರ್ಷಗಳ ಇತಿಹಾಸವಿದೆ[೧೫]. ಈ ದೇಶಕ್ಕೆ ಕ್ರೈಸ್ತ ಧರ್ಮವು ಕ್ರಿ. ಶ. ೫೨ರಲ್ಲಿ ಕೇರಳದ ಕರಾವಳಿಯಲ್ಲಿ ಅಪೋಸ್ತೋಲನಾದ ಸಂತಥೋಮಸ್‌ನ ಮೂಲಕ ಪ್ರವೇಶಿಸಿದೆ[೧೬]. ಈಶಾನ್ಯ ಭಾರತದ ಮೂರು ಸಣ್ಣ ರಾಜ್ಯಗಳಾದ ನಾಗಲ್ಯಾಂಡ್, ಮಿಜೋರಾಂ ಮತ್ತು ಮೇಘಾಲಯಗಳಲ್ಲಿ ಕ್ರೈಸ್ತರು ಬಹು ಸಂಖ್ಯಾತರಾಗಿದ್ದಾರೆ. ಭಾರತದಲ್ಲೆ ಅತೀ ಹೆಚ್ಚು ಕ್ರೈಸ್ತರಿರುವ ರಾಜ್ಯ ನೆರೆಯ ಕೇರಳವಾಗಿದೆ. ದಕ್ಷಿಣ ಭಾರತದ ರಾಜ್ಯಗಳ ಪೈಕಿ ಅತೀ ಕಡಿಮೆ ಕ್ರೈಸ್ತ ಜನಸಂಖ್ಯೆಯಿರುವ ರಾಜ್ಯವೆಂದರೆ ಕರ್ನಾಟಕ. ಕರ್ನಾಟಕದ ಒಟ್ಟು ಜನಸಂಖ್ಯೆಯ ಶೇಕಡ ೧.೯೧ ರಷ್ಟಿದ್ದು, ೧೦,೯೯,೧೬೪ ಮಂದಿ ಕ್ರೈಸ್ತ ಸಮುದಾಯಕ್ಕೆ ಸೇರಿದವರು. ಶೇಕಡಾವಾರು ಪ್ರಮಾಣದಲ್ಲಿ ರಾಜ್ಯದಲ್ಲಿ ಅತಿ ಹೆಚ್ಚು ಕ್ರೈಸ್ತರಿರುವ ಜಿಲ್ಲೆ ದಕ್ಷಿಣ ಕನ್ನಡ ಜಿಲ್ಲೆ ಎಂದು ಗುರುತಿಸಲಾಗಿದೆ.

ಜಿಲ್ಲೆಯಲ್ಲಿ ಒಟ್ಟು ೧,೬೪,೯೮೨ ಕ್ರೈಸ್ತರಿದ್ದು ಜಿಲ್ಲೆಯ ಒಟ್ಟು ಜನಸಂಖ್ಯೆಯ ಶೇಕಡ ೮.೬೯ ರಷ್ಟಿದ್ದಾರೆ. ಪಕ್ಕದ ಉಡುಪಿ ಜಿಲ್ಲೆಯಲ್ಲಿ ೬೫,೬೩೪ ಜನ ಕ್ರೈಸ್ತರಿದ್ದು ಜಿಲ್ಲೆಯ ಒಟ್ಟು ಜನ ಸಂಖ್ಯೆಯ ಶೇಕಡ ೫.೯ ರಷ್ಟಿದ್ದಾರೆ. ಬೆಂಗಳೂರು ನಗರ ಜಿಲ್ಲೆಯ ಒಟ್ಟು ಜನಸಂಖ್ಯೆಯಲ್ಲಿ ೩,೭೮,೯೭೮ ಜನ ಕ್ರೈಸ್ತರಿದ್ದರೂ ನಮ್ಮ ರಾಜ್ಯದಲ್ಲಿ, ಶೇಕಡವಾರು ಪ್ರಮಾಣ (೫.೮೦%) ದ ಆಧಾರದಲ್ಲಿ ಮೂರನೆಯ ಅತೀ ದೊಡ್ಡ ಕ್ರೈಸ್ತ ಸಮುದಾಯವಿರುವ ಜಿಲ್ಲೆಯೆನಿಸಿದೆ.

ದಕ್ಷಿಣ ಕನ್ನಡದಲ್ಲಿ ಕೊಂಕಣಿ ಭಾಷೆ ಮಾತನಾಡುವ ಕೆಥೋಲಿಕ ಕ್ರೈಸ್ತ ಸಮುದಾಯಕ್ಕೆ ಐದು ಶತಮಾನಗಳ ಚರಿತ್ರೆಯಿದೆ[೧೭]. ಜಿಲ್ಲೆಯಲ್ಲಿನ ಕ್ರೈಸ್ತ ಸಮುದಾಯದಲ್ಲಿ ಅನೇಕ ಪಂಗಡಗಳಿವೆ. ಅಧ್ಯಯನದ ಅನುಕೂಲಕ್ಕಾಗಿ ಇಲ್ಲಿನ ಕ್ರೈಸ್ತ ಸಮುದಾಯದ ಅಡಿಯಲ್ಲಿ ಬರುವ ಪಂಗಡಗಳನ್ನು ಅವರಾಡುವ ಭಾಷೆಯ ನೆಲೆಯಲ್ಲಿ ಮೂರು ಮುಖ್ಯ ವಿಭಾಗಗಳನ್ನಾಗಿ ವರ್ಗೀಕರಿಸಬಹುದಾಗಿದೆ. ಕೊಂಕಣಿ ಭಾಷಿಗರಾದ ರೋಮನ್ ಕೆಥೋಲಿಕರು ಇಲ್ಲಿನ ಕ್ರೈಸ್ತ ಸಮುದಾಯದಲ್ಲಿ ಬಹು ಸಂಖ್ಯಾತರಾಗಿದ್ದಾರೆ. ಇವರಲ್ಲಿ ಹೆಚ್ಚಿನವರು ಅನೇಕ ಕಾರಣಗಳಿಂದಾಗಿ ಗೋವಾ ಪ್ರಾಂತ್ಯದ ಕಡೆಯಿಂದ ವಲಸೆ ಬಂದು ಇಲ್ಲಿ ನೆಲೆಸಿದವರಾಗಿದ್ದಾರೆ[೧೮]. ಇಲ್ಲಿನ ಕ್ರೈಸ್ತರಲ್ಲಿ ಇನ್ನೊಂದು ಮುಖ್ಯ ಪಂಗಡ ೧೭೫ ವರುಷಗಳ ಇತಿಹಾಸವಿರುವ ಕನ್ನಡ ಭಾಷೆಯನ್ನಾಡುವ ಪ್ರೊಟೆಸ್ಟಾಂಟ್ ಪಂಥಕ್ಕೆ ಸೇರಿದವರಿದ್ದಾರೆ. ಇವರಲ್ಲಿ ಹೆಚ್ಚಿನವರು ಸ್ಥಳೀಯ ಬಿಲ್ಲವ, ಬ್ರಾಹ್ಮಣ, ಬಂಟ ಮತ್ತು ಇತರೇ ಸಮುದಾಯಗಳಿಂದ ಒಂದು ಶತಮಾನಕ್ಕಿಂತ ಹಿಂದೆ ಕ್ರೈಸ್ತ ಧರ್ಮಕ್ಕೆ ಸೇರಿದವರಾಗಿದ್ದಾರೆ. ೧೮೩೪ ರಲ್ಲಿ ಮಂಗಳೂರಿನ ಬಲ್ಮಠ ಎಂಬ ಸ್ಥಳದಲ್ಲಿ ಸ್ಥಾಪಿಸಲ್ಪಟ್ಟ ಜರ್ಮನಿಯ "ಎವಾಂಜಲಿಕಲ್ ಮಿಶನ್ ಆಫ್ ಬಾಸೆಲ್" ಎಂಬ ಮತ ಪ್ರಚಾರ ಸಂಸ್ಥೆಗೆ ಸೇರಿದವರಾದುದರಿಂದ ಅವರು ಸ್ಥಾಪಿಸಿದ ಕ್ರೈಸ್ತ ಸಭೆಗೆ 'ಬಾಸೆಲ್ ಮಿಶನ್' ಎಂಬ ಹೆಸರು ಪ್ರಚಲಿತವಾಯಿತು[೧೯].

ಮೇಲೆ ತಿಳಿಸಿದ ಎರಡು ಪಂಥದ ಜತೆಗೆ ಇನ್ನೊಂದು ವಿಭಾಗವನ್ನು ನಾವು ಇಲ್ಲಿನ ಕ್ರೈಸ್ತ ಸಮುದಾಯದಲ್ಲಿ ಕಾಣಬಹುದಾಗಿದೆ. ಇವರೇ ಕಳೆದ ಆರೇಳು ದಶಕಗಳಿಂದ ಕೇರಳದಿಂದ ವಲಸೆ ಬಂದಂತಹ ಮಲೆಯಾಳಿ ಕ್ರೈಸ್ತರು. ಇವರಲ್ಲಿ ಮುಖ್ಯವಾಗಿ ಸೀರೋ ಮಲಬಾರ್, ಮಲಂಕರ ಸಿರಿಯನ್ಸ್, ಸಿರಿಯನ್ ಆರ್ಥೋಡಾಕ್ಸ್, ಸಿರಿಯನ್ ಜಾಕೋಬೈಟ್ಸ್ ಹಾಗೂ ಮಾರ್ತೋಮಾ ಚರ್ಚಿಗೆ ಸೇರಿದವರು ಇದ್ದಾರೆ[೨೦]. ಇವರಲ್ಲಿ ಹೆಚ್ಚಿನವರು ಕೇರಳದ ಸಿರಿಯನ್ ಕ್ರಿಶ್ಚಿಯನ್ ಮೂಲಕ್ಕೆ

ಸೇರಿದವರು. ಇವರಲ್ಲಿ ಸೀರೋ ಮಲಬಾರ್ ವಿಭಾಗಕ್ಕೆ ಸೇರಿದ ಒಂದು ಧರ್ಮ ಪ್ರಾಂತ್ಯವನ್ನು ಬೆಳ್ತಂಗಡಿ ಧರ್ಮ ಪ್ರಾಂತ್ಯವೆಂಬುದಾಗಿ ರಚಿಸಲಾಗಿದೆ. ಮಲಯಾಳಿ ಕ್ರೈಸ್ತರು ಹೆಚ್ಚಾಗಿ ಕೃಷಿಕರಾಗಿದ್ದು ಜಿಲ್ಲೆಯ ಮಲೆನಾಡು ತಾಲ್ಲೂಕುಗಳಾದ ಪುತ್ತೂರು, ಬೆಳ್ತಂಗಡಿ ಹಾಗೂ ಸುಳ್ಯ ತಾಲ್ಲೂಕುಗಳ ವ್ಯಾಪ್ತಿಯಲ್ಲಿ ಹಂಚಿ ಹೋಗಿರುತ್ತಾರೆ[೨೧].

ಆದ ಕಾರಣ ದಕ್ಷಿಣ ಕನ್ನಡದ ಕ್ರೈಸ್ತರೆಂದರೆ ಒಂದು ಸಮಗ್ರ ಹೋಮೋಜೀನಸ್ ಅಥವಾ ಏಕರೂಪೀ ಗುಂಪಾಗಿ ಕಂಡು ಬರುತ್ತಿಲ್ಲ. ಆದರೆ ಈ ಸಮುದಾಯದಲ್ಲಿ 'ಕೆನರಾ ಕ್ರಿಶ್ಚಿಯನ್ಸ್[೨೨]' ಎಂದು ಕರೆಸಲ್ಪಡುವ ಕೊಂಕಣಿ ಕ್ರೈಸ್ತರು ಶೈಕ್ಷಣಿಕ, ಆರ್ಥಿಕ ಹಾಗೂ ರಾಜಕೀಯ ಕ್ಷೇತ್ರಗಳಲ್ಲಿ ಉಳಿದವರಿಗಿಂತ ಬಹಳಷ್ಟು ಮುಂದುವರೆದಿದ್ದಾರೆ. ಐದು ಶತಮಾನಗಳಷ್ಟು ದೀರ್ಘ ಇತಿಹಾಸವಿದ್ದು, ಸುಸಂಘಟಿತವಾದ ಒಂದು ಧಾರ್ಮಿಕ ಪಂಗಡವಾಗಿರುವುದೇ ಇದಕ್ಕೆ ಮುಖ್ಯ ಕಾರಣ. ಈ ಗುಂಪಿಗೆ ಹೋಲಿಸಿದಾಗ ರಾಜಕೀಯ ಕ್ಷೇತ್ರದಲ್ಲಿ ಪ್ರೊಟೆಸ್ಟಾಂಟರು ಮತ್ತು ಮಲಯಾಳಿ ಕ್ರೈಸ್ತರು ಸೂಕ್ತ ಪ್ರಾತಿನಿಧ್ಯವಿಲ್ಲದೆ, ಜೊತೆಗೆ ಶೈಕ್ಷಣಿಕ ಆರ್ಥಿಕ ಕ್ಷೇತ್ರಗಳಲ್ಲಿಯೂ ಬಹಳಷ್ಟು ಹಿಂದುಳಿದಿರುತ್ತಾರೆ ಎನ್ನುವುದು ಅವರ ಜೀವನ ಶೈಲಿಯಿಂದ ತಿಳಿಯುತ್ತದೆ.

ಕಳೆದ ಸುಮಾರು ಒಂದೂವರೆ ದಶಕದಿಂದ ಈಚೆಗೆ ಕರಾವಳಿ ಜಿಲ್ಲೆಗಳಲ್ಲಿ ಅದರಲ್ಲೂ ಮುಖ್ಯವಾಗಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಧಾರ್ಮಿಕ ಸಾಮರಸ್ಯ ಶೋಚನೀಯವಾಗಿ ಹದಗೆಡುತ್ತಿದೆ. ಕೋಮು ಸಂಘರ್ಷವೇ ಇಲ್ಲಿನ ಪ್ರಧಾನ ಸಮಸ್ಯೆಯ ರೂಪು ತಳೆದಿದೆ[೨೩]. ಸಣ್ಣ ಪುಟ್ಟ ಕಾರಣಗಳಿಗಾಗಿ ಹಿಂಸಾಚಾರ ವ್ಯಾಪಕವಾಗಿ ಹರಡುತ್ತಿದೆ. ಈ ಹಿಂದೆ ಹಿಂದೂ – ಮುಸ್ಲಿಮ್ ಕೋಮು ಗಲಭೆಗಳು ಇಲ್ಲಿ ಸಾಮಾನ್ಯವಾಗಿತ್ತು. ಆದರೆ ಹಿಂದೂ – ಕ್ರಿಶ್ಚಿಯನ್ ಗಲಭೆಗಳು ಘಟಿಸಿದ್ದೆ ಇಲ್ಲ. ಆದರೆ ೨೦೦೮ರ ಸೆಪ್ಟೆಂಬರ್ ತಿಂಗಳಲ್ಲಿ 'ಮತಾಂತರ'ದ ಹೆಸರಿನಲ್ಲಿ ನಡೆದ ಚರ್ಚ್ ಮೇಲಿನ ದಾಳಿಗಳು ಈ ಎರಡೂ ಕೋಮುಗಳ ನಡುವೆ ಇದ್ದ ಸೌಹಾರ್ದಯುತ ಸಂಬಂಧಗಳಿಗೆ ಅಡ್ಡಿಯಾಗಿದೆ. ಜಿಲ್ಲೆಯಲ್ಲಿ ಅಲ್ಪ ಸಂಖ್ಯಾತರಾಗಿರುವ ಕ್ರೈಸ್ತ ಸಮುದಾಯವು ನಿರಂತರ ಭೀತಿಯಿಂದ ಅಭದ್ರತೆಯಲ್ಲಿ ಬದುಕುವ ವಾತಾವರಣ ಸೃಷ್ಟಿಯಾಗಿದೆ ಎನ್ನುವುದನ್ನು ಸಮೂಹ ಮಾಧ್ಯಮಗಳು ಸಾಕ್ಷೀಕರಿಸಿದೆ[೨೪]. ಸಂಶೋಧನಾತ್ಮಕವಾಗಿ ಅಧ್ಯಯನ ಮಾಡಲು ಸೂಕ್ತವೆನಿಸುತ್ತದೆ.

## ೧.೬. ಅಧ್ಯಯನಕ್ಕೆ ಮೂಲವಾಗಿರುವ ಸಮಸ್ಯೆಗಳು

ಶಾಸನ ಸಭೆಗಳಲ್ಲಿ ಹಾಗೂ ಮಂತ್ರಿಮಂಡಲದಲ್ಲಿ ಕ್ರೈಸ್ತ ಸಮುದಾಯಕ್ಕೆ ಈ ಹಿಂದೆ ಲಭ್ಯವಾಗುತ್ತಿದ್ದ ಕನಿಷ್ಠ ರಾಜಕೀಯ ಪ್ರಾತಿನಿಧ್ಯ ಈಗಲಂತೂ ದೊರಕಲಾಗದ ಸ್ಥಿತಿಗೆ ತಲುಪಿದೆ. ಕ್ರೈಸ್ತರ ಜನಸಂಖ್ಯಾವಾರು ಪ್ರಮಾಣಕ್ಕನುಗುಣವಾಗಿ ಅವರಿಗೆ ರಾಜಕೀಯ ಪ್ರಾತಿನಿಧ್ಯ ಸರಕಾರದ ವಿವಿಧ ಸ್ತರಗಳಲ್ಲಿ ಪಡೆಯಲಾಗುತ್ತಿಲ್ಲ[೨೫]. ಕ್ರೈಸ್ತರು ಈ ಜಿಲ್ಲೆಯ ಆರ್ಥಿಕ, ಸಾಮಾಜಿಕ, ಶೈಕ್ಷಣಿಕ, ವೈದ್ಯಕೀಯ ಮತ್ತು ಇತರೇ ಕ್ಷೇತ್ರಗಳ ಅಭಿವೃದ್ಧಿಗೆ ಅವರ ಕೊಡುಗೆಗೆ ಅನುಸಾರವಾಗಿ ಅವರು ರಾಜಕೀಯ ಕ್ಷೇತ್ರದಲ್ಲಿ ಪ್ರಾತಿನಿಧ್ಯದಿಂದ ವಂಚಿತರಾಗಿದ್ದಾರೆ ಎನ್ನುವ ಅಭಿಪ್ರಾಯಗಳು ಸಂಶೋಧನಾತ್ಮಕವಾಗಿ ಅಧ್ಯಯನ ಮಾಡಲು ಸೂಕ್ತವೆನಿಸುತ್ತದೆ.

ದಕ್ಷಿಣ ಕನ್ನಡ ಕೊಂಕಣಿ ಕ್ರೈಸ್ತರ ಶೈಕ್ಷಣಿಕ, ಆರ್ಥಿಕ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ಅವರು ನೀಡಿದ ಕೊಡುಗೆ ಹಾಗೂ ಸಕ್ರಿಯ ಭಾಗವಹಿಸುವಿಕೆಗೆ ಹೋಲಿಸಿಕೊಂಡಾಗ ದಕ್ಷಿಣ ಕನ್ನಡದಲ್ಲಿ ವಾಸ್ತವ್ಯವಿರುವ ಪ್ರೊಟೆಸ್ಟಾಂಟ್ ಮತ್ತು ಮಲಯಾಳಿ ಕ್ರೈಸ್ತರ ರಾಜಕೀಯ ಅಸ್ತಿತ್ವಕ್ಕೆ ನಿರೀಕ್ಷಿತ ಮಟ್ಟದ ಪ್ರಾತಿನಿಧ್ಯತೆ ಮತ್ತು ಅವಕಾಶಗಳು ದೊರೆತಿಲ್ಲವೆನ್ನುವುದು ಸಾಮಾನ್ಯ ಜನರ ಅಭಿಪ್ರಾಯವಾಗಿದೆ. ಈ ನೆಲೆಯಿಂದ ಅವರು ಹಿಂದುಳಿದಿರಲು ಕಾರಣಗಳೇನು ಎನ್ನುವುದನ್ನು ಸಂಶೋಧನಾ ಅಧ್ಯಯನಗಳ ಮೂಲಕ ತಿಳಿಯಬೇಕಾಗಿದೆ.

ಕೆಲವು ಜನಪ್ರಿಯ ಕನ್ನಡ ಮತ್ತು ಇಂಗ್ಲೀಷ್ ಪತ್ರಿಕೆಗಳು ಲೋಕಸಭೆಯಲ್ಲಿ ಅಲ್ಪಸಂಖ್ಯಾತರ ಪ್ರಾತಿನಿಧ್ಯತೆ ಕುಸಿತವೆನ್ನುವುದನ್ನೂ ಪ್ರಕಟಿಸಿದೆ[೨೬]. ಈ ಹಿನ್ನಲೆಯಿಂದ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅಲ್ಪಸಂಖ್ಯಾತರಾಗಿರುವ ಕ್ರೈಸ್ತ ಸಮುದಾಯವು ರಾಜಕೀಯದಲ್ಲಿ ತೊಡಗಿಸಿ ಕೊಳ್ಳುವುದರ ಬಗ್ಗೆ ಹಾಗೂ ಪ್ರಾತಿನಿಧ್ಯತೆಗೆ ಸಂಬಂಧಿಸಿದ ಅನೇಕ ಕುತೂಹಲಕಾರಿ ಪ್ರಶ್ನೆಗಳು ಮೂಡುತ್ತವೆಯಾದುದರಿಂದ ಒಂದು ವಾಸ್ತವ ಚಿತ್ರಣದ ಅರಿವನ್ನು ಪಡೆಯಲು ಸಂಶೋಧನಾ ಅಧ್ಯಯನಗಳು ಅಗತ್ಯವೆನಿಸುತ್ತದೆ. ಈ ಹಿನ್ನಲೆಯಿಂದ ಪ್ರಸ್ತುತ ಸಂಶೋಧನಾ ಅಧ್ಯಯನವನ್ನು ಕೈಗೆತ್ತಿಕೊಳ್ಳಲಾಗಿದೆ.

## ೧.೬. ಅಧ್ಯಯನದ ಉದ್ದೇಶಗಳು

- ಅಧ್ಯಯನದ ಮುಖ್ಯ ಉದ್ದೇಶ ದಕ್ಷಿಣ ಕನ್ನಡ ಜಿಲ್ಲೆಯ ಕ್ರೈಸ್ತರ ರಾಜಕೀಯ ಪಾಲ್ಗೊಳ್ಳುವಿಕೆಯ ಗುರುತಿಸಿ ವಿಶ್ಲೇಷಣೆ ಮಾಡುವುದು.
- ಅವರ ರಾಜಕೀಯ ಪ್ರಜ್ಞೆ ಮತ್ತು ಮತದಾನದ ಪ್ರಕ್ರಿಯೆಯಲ್ಲಿ ಅವರ ಭಾಗವಹಿಸುವಿಕೆಯ ಮಟ್ಟ ಸಕ್ರಿಯವಾಗಿದೆಯೇ ಎಂದು ತಿಳಿಯುವುದು.
- ಅವರ ಜನಸಂಖ್ಯಾವಾರು ಪ್ರಮಾಣಕ್ಕನುಗುಣವಾಗಿ ಅವರಿಗೆ ವಿವಿಧ ಹಂತದ ಸರಕಾರಗಳಲ್ಲಿ ಸೂಕ್ತವಾದ ಪ್ರಾತಿನಿಧ್ಯ ದೂರೆತಿವೆಯೇ ಎಂದು ಪರಿಶೀಲಿಸುವುದು.
- ಕ್ರೈಸ್ತರ ರಾಜಕೀಯ ಭಾಗವಹಿಸುವಿಕೆ ಪ್ರಕ್ರಿಯೆಯ ಮೇಲೆ ಪ್ರಭಾವ ಬೀರುವಂತಹ ಇನ್ನಿತರ ಅಂಶಗಳನ್ನು ಗುರುತಿಸುವುದು.
- ಕ್ರೈಸ್ತರ ರಾಜಕೀಯ ಭಾಗವಹಿಸುವಿಕೆಗೆ ತೊಡಕಾಗಿರುವ ಸಮಸ್ಯೆಗಳನ್ನು ಪರಿಶೀಲಿಸುವುದು.
- ಕ್ರೈಸ್ತರಲ್ಲಿ ರಾಜಕೀಯ ಪ್ರಜ್ಞೆ ಮೂಡಿಸಿ ಅವರ ರಾಜಕೀಯ ಭಾಗವಹಿಸುವಿಕೆಯ ಮಟ್ಟವನ್ನು ಹೆಚ್ಚಿಸುವ ಬಗೆ ಹೇಗೆ ಎಂದು ಸೂಚಿಸುವುದು.

## ೧.೭. ಅಧ್ಯಯನದ ಊಹೆ

೧. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕ್ರೈಸ್ತ ಸಮುದಾಯದ ಸಂಖ್ಯಾವಾರು ಪ್ರಮಾಣಕ್ಕನುಗುಣವಾಗಿ ಲಭಿಸಬೇಕಾಗಿದ್ದ ರಾಜಕೀಯ ಪ್ರಾತಿನಿಧ್ಯತೆಯಲ್ಲಿ ಕೊರತೆ ಇದೆ.

೨. ಕ್ರೈಸ್ತರು ಮತದಾನದ ಪ್ರಕ್ರಿಯದಲ್ಲಿ ಸಕ್ರಿಯವಾಗಿ ಭಾಗವಹಿಸಿದರೂ ವಿವಿಧ ರಾಜಕೀಯ ವ್ಯವಸ್ಥೆಗಳಲ್ಲಿ ಪ್ರಾತಿನಿಧ್ಯತೆಯ ಪ್ರಮಾಣ ಇಳಿಕೆಯಾಗಿದೆ.

## ೧.೮. ಗ್ರಂಥ ಪರಾಮರ್ಶೆ

ಸಾಮಾಜಿಕ ಸಾಂಸ್ಕೃತಿಕ ಹಾಗೂ ಧಾರ್ಮಿಕ ವೈವಿಧ್ಯತೆಗಳಿರುವ ಈ ದೇಶದೊಳಗೆ ವಿವಿಧ ಸಮುದಾಯಗಳ ರಾಜಕೀಯ ಸಹಭಾಗಿತ್ವ, ಪಾಲ್ಗೊಳ್ಳುವಿಕೆ, ಪ್ರಾತಿನಿಧ್ಯತೆಗೆ ಸಂಬಂಧಿಸಿದ

ಸಮಸ್ಯೆಗಳು, ಇತಿಮಿತಿಗಳು ಇತ್ಯಾದಿ ವಿಷಯಗಳಿಗೆ ಸಂಬಂಧಿಸಿದ ಅನೇಕ ಅಧ್ಯಯನಗಳು ಸಾಕಷ್ಟು ನಡೆದಿವೆ. ಅಂತೆಯೇ ಇತರ ದೇಶಗಳಲ್ಲಿ ಪ್ರಜೆಗಳ ಭಾಗವಹಿಸುವಿಕೆ ಕುರಿತಂತೆ ಅಧ್ಯಯನ ಸಂಶೋಧನೆಗಳೂ ಲಭ್ಯವಿದೆ. ಈ ಕ್ಷೇತ್ರಗಳಲ್ಲಿ ಹೊರ ಬಂದಿರುವ ಸಮೀಕ್ಷೆ, ಸಂಶೋಧನಾ ಪ್ರಬಂಧ, ಅಧ್ಯಯನಗಳನ್ನು ಪರಾಮರ್ಶಿಸಿದರೆ ಪ್ರಸ್ತುತ ಸಂಶೋಧನೆಗೆ ಅಗತ್ಯವಾದ ಶೈಕ್ಷಣಿಕ ಹಿನ್ನೆಲೆ, ಮಾಹಿತಿ ಹಾಗೂ ಪರಿಕರಗಳು ದೊರೆಯುತ್ತದೆಯಾದರೂ, ಕ್ರೈಸ್ತ ಸಮುದಾಯವು ರಾಜಕೀಯವಾಗಿ ಪಾಲ್ಗೊಳ್ಳುವ ಹಾಗೂ ರಾಜಕೀಯ ಪ್ರಾತಿನಿಧ್ಯಕ್ಕೆ ಸಂಬಂಧಿಸಿದ ಪ್ರತ್ಯೇಕ ಅಧ್ಯಯನಗಳು ಹೆಚ್ಚಿನ ಸಂಖ್ಯೆಯಲ್ಲಿ ಲಭ್ಯವಿಲ್ಲ. ಅದರಲ್ಲೂ ಭೌಗೋಳಿಕವಾಗಿ, ಸಾಮಾಜಿಕವಾಗಿ, ಶೈಕ್ಷಣಕವಾಗಿ ಪ್ರತ್ಯೇಕವಾಗಿ ಗುರುತಿಸಲ್ಪಡಬಹುದಾದ ದಕ್ಷಿಣ ಕನ್ನಡ ಜಿಲ್ಲೆಯ ಕ್ರೈಸ್ತ ಸಮುದಾಯದ ರಾಜಕೀಯ ಭಾಗವಹಿಸುವಿಕೆಯ ನೆಲೆಯಲ್ಲಿ ನಡೆಸಿದ ಅಧ್ಯಯನಗಳು ಬಹಳ ವಿರಳವೆನ್ನುವುದು ಸಂಶೋಧಕನ ಗಮನ ಸೆಳೆದಿರುವ ಪ್ರಮುಖ ಅಂಶವಾಗಿದೆ.

ಟೆರ್‌ಚೆಕ್ ರೊನಾಲ್ಡನು, "ಇನ್ಸೆಂಟೀವ್ಸ್ ಆಂಡ್ ವೋಟರ್ ಪಾರ್ಟಿಸಿಪೇಶನ್" ಎಂಬ ತನ್ನ ಕೃತಿಯಲ್ಲಿ ಜನರು ತಮ್ಮನ್ನು ರಾಜಕೀಯದಲ್ಲಿ ಏಕೆ ತೊಡಗಿಸಿ ಕೊಳ್ಳುತ್ತಾರೆ ಮತ್ತು ಯಾವುದೆಲ್ಲ ಅಂಶಗಳು ರಾಜಕೀಯದಲ್ಲಿ ಭಾಗವಹಿಸುವಂತೆ ಪ್ರೇರಿಸುತ್ತದೆ ಹಾಗೂ ಈ ಎಲ್ಲಾ ಅಂಶಗಳು ರಾಜ್ಯಶಾಸ್ತ್ರದ ಅಧ್ಯಯನದಲ್ಲಿ ಬಹಳಷ್ಟು ಮಹತ್ವ ಪಡೆದಿದೆಯೆಂದು ತಿಳಿಸಿದ್ದಾನೆ. ಇಷ್ಟು ಮಾತ್ರವಲ್ಲದೆ ಸಮಾಜವು ರಾಜಕಾರಣಕ್ಕೆ ಹೇಗೆ ಹೊಂದಿಕೊಳ್ಳುತ್ತದೆ ಎಂಬುದಾಗಿ ತಿಳಿಸಿದ್ದಾನೆ. ಈತನ ಪ್ರಕಾರ ದ್ವಿತೀಯ ಜಾಗತಿಕ ಮಹಾಯುದ್ದದ ತರುವಾಯ ಪಾಶ್ಚಾತ್ಯ ದೇಶಗಳಲ್ಲಿ ಮತದಾರರು ಚುನಾವಣಾ ಪ್ರಕ್ರಿಯಗಳಲ್ಲಿ ಪಾಲುಗೊಳ್ಳುವಿಕೆ ಒಂದೇ ಸವನೆ ಇಳಿಮುಖವಾಗುತ್ತಿದೆ[೨೬]. ಮಾತ್ರವಲ್ಲದೆ, ಸಮಾಜವು ರಾಜಕಾರಣದಲ್ಲಿ ಔದಾಸೀನ್ಯತೆಯ ಪ್ರವೃತ್ತಿಯನ್ನು ತೋರಿಸುತ್ತಿದೆ ಎಂದಿದ್ದಾನೆ. ಒಂದು ವೇಳೆ, ಸಮಾಜದ ಸದಸ್ಯರಲ್ಲಿ ಯಾವ ಪ್ರಮುಖ ಅಂಶಗಳು ರಾಜಕೀಯದಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವಂತೆ ಪ್ರೇರಿಸುತ್ತದೆಯೆಂದು ನಿಗದಿ ಪಡಿಸಲು ಸಾಧ್ಯವಾಗುವ ಪಕ್ಷದಲ್ಲಿ, ಹೆಚ್ಚು ಹೆಚ್ಚು ಜನರು ರಾಜಕೀಯದಲ್ಲಿ ಸಕ್ರಿಯವಾಗಿ ಭಾಗವಹಿಸುವಂತೆ ಮಾಡುವುದರ ಮೂಲಕ ತಮಗೂ ಮತ್ತು ಸಮಾಜಕ್ಕೂ ಹಿತಕಾರಿಯಾದ ನಿರ್ಧಾರಗಳನ್ನು ರೂಪಿಸುವಲ್ಲಿ ಪ್ರತಿಯೊಬ್ಬರ ಅಭಿಪ್ರಾಯಕ್ಕೆ ಮನ್ನಣೆ ದೊರೆತಂತೆ ಆಗುವುದು. ತನ್ನ

ಒಬ್ಬನ ಮತದಿಂದ ಏನನ್ನೂ ಬದಲಾಯಿಸಲು ಸಾಧ್ಯವಿಲ್ಲವೆಂಬ ಹತಾಶ ಭಾವನೆಯನ್ನೂ ನಿವಾರಿಸಿ, ಪ್ರತಿಯೊಬ್ಬರ ಮತವು ಅಮೂಲ್ಯವೆಂದು ಅರಿವು ಮೂಡಿಸುವುದರ ಮೂಲಕ ಸಮಾಜವು ರಾಜಕಾರಣದಲ್ಲಿ ಮತ್ತು ಸರಕಾರದಲ್ಲಿ ಸಕ್ರಿಯವಾಗಿ ಪಾಲುಗೊಳ್ಳಿಸಬಹುದಾಗಿದೆ ಎಂದು ತಿಳಿಸಿದ್ದಾನೆ.

ಭಾರತದಲ್ಲಿ 'ಲೋಕನೀತಿ' (ಗುಂಪಿನ) ತಂಡದ ಯೋಗೇಂದ್ರ ಯಾದವ್ ಮತ್ತೆ ಇತರರುಗಳ ಚುನಾವಣಾ ಅಧ್ಯಯನಗಳ ಪ್ರಕಾರ, ೧೯೯೦ರ ದಶಕದಿಂದ ಈಚೆಗೆ ರಾಜಕೀಯ ಭಾಗವಹಿಸುವಿಕೆಯ ಪ್ರಮಾಣದಲ್ಲಿ ಹೆಚ್ಚಳವಾಗಿದೆ, ೧೯೯೮ ಹಾಗೂ ೧೯೯೯ರ ಲೋಕ ಸಭೆಗೆ ನಡೆದ ಚುನಾವಣೆಗಳಲ್ಲಿ ಮತದಾನದ ಶೇಕಡಾವಾರು ಪ್ರಮಾಣ ಹೆಚ್ಚಾಗಿದೆ, ಸಮಾಜದ ವಿವಿಧ ವರ್ಗಗಳು ಹಾಗೂ ಸಮುದಾಯಗಳ ರಾಜಕೀಯ ಪಾಲ್ಗೊಳ್ಳುವಿಕೆ ವಿಸ್ತಾರಗೊಂಡಿದೆ, ಸಮಾಜದ ಮುಂದುವರೆದ ವರ್ಗಗಳಿಗಿಂತ ಶೋಷಿತರು ಮತ್ತು ದುರ್ಬಲ ವರ್ಗಗಳ ಮತದಾನದಲ್ಲಿ ಪಾಲ್ಗೊಳ್ಳುವ ಪ್ರಮಾಣ ಹೆಚ್ಚಾಗಿದೆ, ಎನ್ನುತ್ತಾರೆ. ಇವರ ಪ್ರಕಾರ ವಿಶೇಷವೇನೆಂದರೆ, ದಲಿತರು, ಆದಿವಾಸಿಗಳು ಮತ್ತು ಇತರೇ ಹಿಂದುಳಿದ ವರ್ಗಗಳ ಜನರು ಮತದಾನದಲ್ಲಿ ಪಾಲ್ಗೊಳ್ಳುವಿಕೆಯ ಪ್ರಮಾಣದಲ್ಲಿ ಹೆಚ್ಚಳವಾಗಿದೆ. ಆಲಮ್ ಜಾವೇದ್, 'ವಾಟ್ ಈಸ್ ಹ್ಯಾಪ್ಪೆನಿಂಗ್ ಇನ್‌ಸೈಡ್ ಇಂಡಿಯನ್ ಡೆಮೊಕ್ರೆಸಿ' ಎಂಬ ತನ್ನ ಲೇಖನದಲ್ಲಿ ಈ ಮೇಲಿನ ಅಭಿಪ್ರಾಯವನ್ನು ಪುಷ್ಟೀಕರಿಸಿದ್ದಾನೆ. ಅದೇ ರೀತಿಯಾಗಿ ಜಾಫ್ರೆಲಾಟ್ ಕ್ರಿಸ್ಟೋಫರವರು ಇಂಡಿಯಾಸ್ ಸೈಲೆಂಟ್ ರೆವ್ಯೊಲ್ಯೂಶನ್ ಎಂಬ ತನ್ನ ಕೃತಿಯಲ್ಲಿ ಇದೇ ಅಭಿಪ್ರಾಯವನ್ನು ವ್ಯಕ್ತಪಡಿಸಿರುತ್ತಾರೆ. ಅಂತೆಯೇ ಯೋಗೇಂದ್ರ ಯಾದವ್‌ರವರ 'ಅಂಡರ್‌ಸ್ಟಾಂಡಿಂಗ್ ದಿ ಸೆಕೆಂಡ್ ಡೆಮೊಕ್ರೆಟಿಕ್ ಅಪಸರ್ಜ್ ಮತ್ತು ಟ್ರೆಂಡ್ಸ್ ಅಫ್ ಬಹುಜನ್ ಪಾರ್ಟಿಸಿಪೇಶನ್ ಇನ್ ದಿ ಎಲೆಕ್ಟೋರಲ್ ಪಾಲಿಟಿಕ್ಸ್ ಇನ್ ದಿ ೧೯೯೦ ಸ್' ಎಂಬ ಕೃತಿಯಲ್ಲೂ ಕೂಡ ಇದೇ ಅಭಿಪ್ರಾಯ ವ್ಯಕ್ತವಾಗಿದೆ. ಕೋಮುಧ್ರುವೀಕರಣ, ಜಾತಿಧ್ರುವೀಕರಣ ಮತ್ತು ಆರ್ಥಿಕ ಅಂಶಗಳ ಒಟ್ಟು ಸಮ್ಮಿಳಿತದಿಂದಾಗಿ ಮತದಾನದ ಪ್ರಮಾಣದಲ್ಲಿ ಹೆಚ್ಚಳ ಸಾಧ್ಯವಾಗಿದೆಯೆಂದು ಅಭಿಪ್ರಾಯ ಪಡಲಾಗಿದೆ.

ಗಾಡ್ವಿನ್ ಶಿರಿಯವರು ತಮ್ಮ ಮಾಸ್ಟರ್ ಅಫ್ ಥಿಯೊಲೊಜಿ ಅಧ್ಯಯನದ ಭಾಗವಾಗಿ ೧೯೭೦ರ ದಶಕದಲ್ಲಿ ರಚಿಸಿದ "ಕರ್ನಾಟಕದ ಕ್ರೈಸ್ತರು ಮತ್ತು ರಾಜಕಾರಣ" ಎಂಬ ಸಂಶೋಧನಾ ಕೃತಿಯಲ್ಲಿ ಕರ್ನಾಟಕದಲ್ಲಿ ಪ್ರೊಟೆಸ್ಟಾಂಟ್ ಕ್ರೈಸ್ತರ ರಾಜಕೀಯ ಪಾಲ್ಗೊಳ್ಳುವಿಕೆಯ ಕುರಿತು ಬೆಳಕು ಚೆಲ್ಲುವಲ್ಲಿ ಶ್ಲಾಘನೀಯ ಪ್ರಯತ್ನವನ್ನೂ ಮಾಡಿದ್ದಾರೆ. ಕರ್ನಾಟಕದ ಕ್ರೈಸ್ತ ಸಮುದಾಯದಲ್ಲೇ ಅಲ್ಪ ಸಂಖ್ಯಾತರಾಗಿರುವ ಪ್ರೊಟೆಸ್ಟಾಂಟ್ ಕ್ರೈಸ್ತ ವಿಭಾಗವನ್ನು ಕೇಂದ್ರವಾಗಿಟ್ಟುಕೊಂಡು ಒಂದು ಅಧ್ಯಯನ ಮಾಡಿರುತ್ತಾರೆ. ಇದರಲ್ಲಿ ಅವರು ಪ್ರೊಟೆಸ್ಟಾಂಟ್ ಕ್ರೈಸ್ತರ ರಾಜಕೀಯ ಪಾಲ್ಗೊಳ್ಳುವಿಕೆಯ ಮಟ್ಟ ಉತ್ತೇಜನಕಾರಿಯಾಗಿಲ್ಲ, ವಿವಿಧ ಹಂತದ ಸರಕಾರಗಳಲ್ಲಿ ಅವರ ಪ್ರಾತಿನಿಧ್ಯವು ನಗಣ್ಯವಾಗಿದೆಯೆಂದು ಹೇಳಿದ್ದಾರೆ[೩]. ಮತ್ತು ಪ್ರೊಟೆಸ್ಟಾಂಟ್ ಕ್ರೈಸ್ತ ಸಮುದಾಯದ ರಾಜಕೀಯ ಭಾಗವಹಿಸುವಿಕೆಯು ಸಕ್ರಿಯವಾಗಿಲ್ಲದಿರುವಿಕೆಗೆ ಅವರು ಕೆಲವು ಕಾರಣಗಳನ್ನು ಅಥವಾ ಸಮಸ್ಯೆಗಳನ್ನು ಗುರುತಿಸಿದ್ದರು. ಅವುಗಳಲ್ಲಿ ಮುಖ್ಯವಾದವುಗಳು – ಆರ್ಥಿಕವಾಗಿ ಹಾಗೂ ಸಾಮಾಜಿಕವಾಗಿ ಕ್ರೈಸ್ತರ ತೀರಾ ಹಿಂದುಳಿದಿರುವಿಕೆ, ಕ್ರೈಸ್ತರ ಧಾರ್ಮಿಕ ನಂಬಿಕೆಗಳು (ಅಂದರೆ ಕ್ರೈಸ್ತರು ಧಾರ್ಮಿಕವಾಗಿ ತುಂಬಾ ಸಂಪ್ರದಾಯಸ್ಥರು ಲೌಕಿಕವಾದ ರಾಜಕೀಯ ಬದುಕಿಗಿಂತ ಪಾರಮಾರ್ಥಿಕ ಬದುಕಿಗೆ ಹೆಚ್ಚಿಗೆ ಪ್ರಾಧಾನ್ಯತೆ ಕೊಡುವವರು), ತಾವು ಅಲ್ಪಸಂಖ್ಯಾತರೆಂಬ ಭಾವನೆ ಹಾಗೂ ಕ್ರೈಸ್ತ ಸಮುದಾಯದೊಳಗಿರುವ ಐಕ್ಯತೆಯ ಕೊರತೆ, ಇತ್ಯಾದಿಗಳು ಆಗಿವೆ. ಈ ಸಂಶೋಧನಾ ಅಧ್ಯಯನ ನಾಲ್ಕು ದಶಕಗಳ ಹಿಂದೆ ಮಾಡಲಾಗಿತ್ತು. ಅದರ ನಂತರ ಸಾಕಷ್ಟು ಬೆಳವಣಿಗೆಗಳು ಮತ್ತು ಬದಲಾವಣೆಗಳಾಗಿವೆ. ಇಲ್ಲಿ ದಕ್ಷಿಣ ಕನ್ನಡ ಜಿಲ್ಲೆಯನ್ನು ಕೇಂದ್ರವಾಗಿಟ್ಟುಕೊಂಡು ಮತ್ತು ಸಮಸ್ತ ಕ್ರೈಸ್ತ ಸಮುದಾಯದ ಕುರಿತು ಹೊಸ ದೃಷ್ಟಿಕೋನಗಳನ್ನಿಟ್ಟುಕೊಂಡ ಅಧ್ಯಯನಗಳ ಪ್ರಯತ್ನಗಳು ನಡೆಯುತ್ತಿಲ್ಲ.

ವೆಲೇರಿಯನ್ ರಾಡ್ರಿಗಸ್ ಅವರು "ಕೆನರಾ ಕ್ರೈಸ್ತರು ಮತ್ತು ಅವರ ರಾಜಕೀಯ ಹಂಬಲ" ವೆಂಬ ಸಂಶೋಧನಾ ಪ್ರಬಂಧದಲ್ಲಿ ಕ್ರೈಸ್ತರ ರಾಜಕೀಯ ಅಸ್ತಿತ್ವದ ಬಗೆಗಿನ ಚಿಂತನೆಯನ್ನು ನಡೆಸಿದ್ದಾರೆ. ಸಾಂಸ್ಕೃತಿಕ ಅಸ್ತಿತ್ವವನ್ನು ಹಿನ್ನಲೆಯಾಗಿಸಿಕೊಂಡು ಕೆನರಾ ಕ್ರಿಶ್ಚಿಯನ್ಸ್ ಸಾರ್ವಜನಿಕ ಸಂಸ್ಥೆಗಳಿಗೆ ಮತ್ತು ಪ್ರಕ್ರಿಯಗಳಿಗೆ ಹೇಗೆ ಸಂಬಂಧಿಸಿಕೊಂಡಿದ್ದಾರೆ ಎನ್ನುವುದು ಅವರ ಪ್ರಬಂಧದ ಒಳನೋಟವಾಗಿದೆ. ಈ ಸಮುದಾಯದ ಚಿಂತನೆ ವಿಚಾರಗಳು ಶ್ರೇಣೀಕೃತ

ಬ್ರಾಹ್ಮಣೀಕರಣದ ಆಲೋಚನೆಗಳಿಂದ ಪ್ರಭಾವಿಸಲ್ಪಟ್ಟಿದೆ ಎನ್ನುವುದು, ಹಾಗೂ ಹಿಂದುಳಿದ ಮತ್ತು ದಲಿತ ಚಳವಳಿಗಳು ಹಿಂದೂ ಧರ್ಮವನ್ನು ವಿಮರ್ಶಾತ್ಮಕವಾಗಿ ಪರಿಶೀಲಿಸಿದಂತೆ ಕ್ರೈಸ್ತರು ಇದನ್ನು ಪರಿಶೀಲಿಸಲಿಲ್ಲವೆನ್ನುವ ವಾದ ಇಲ್ಲಿ ಕಂಡಿದೆ. ಕ್ರೈಸ್ತರ ಮೂಲ ಬೇರುಗಳು ಕೃಷಿ ಸಂಸ್ಕೃತಿಯದ್ದಾದರೂ ಕಳೆದ ೫೦–೬೦ ವರ್ಷಗಳಲ್ಲಿ ಆಧುನಿಕತೆಯ ಪ್ರಭಾವಗಳು ಪಲ್ಲಟನಗೊಳಿಸಿದೆ. ಕ್ರೈಸ್ತರ ಅಸ್ತಿತ್ವ ಕುರಿತಂತೆ ಪಡ್ರಾಡೊ, ಪ್ರಚಾರ, ಪಿಡ್ಯೆ ಮತ್ತು ಕೇರಳದ ಸಿರಿಯನ್ ಕ್ರೈಸ್ತರು ಕುರಿತಂತೆ ಧಾರ್ಮಿಕ ವಿರೋಧಾಭಾಸಗಳನ್ನು ಲೇಖಕರು ಗುರುತಿಸಿಕೊಂಡಿದ್ದಾರೆ. ಈ ಸಂಧರ್ಭದ ಜೊತೆಗೆ ಕ್ರೈಸ್ತರ ಮೇಲೆ ಟಿಪ್ಪು ಸುಲ್ತಾನನ ದೌರ್ಜನ್ಯ, ಸೆರೆ ಹಿಡಿಯುವಿಕೆಯ ಮೇಲೂ ಪಕ್ಷಿನೋಟವಿದೆ[೬೦].

ಚುನಾವಣೆಗಳಲ್ಲಿ ಕೆನರಾ ಕ್ರಿಶ್ಚಿಯನ್ನರ ಭಾಗವಹಿಸುವಿಕೆಯ ಬಗ್ಗೆಯೂ ಈ ಲೇಖನ ಅಂಕಿ ಅಂಶಗಳ ಮೂಲಕ ವಿಶ್ಲೇಷಿಸಿದೆ, ಮತ್ತು ಇಲ್ಲಿಯವರೆಗೆ ಯಾವ ಅಭ್ಯರ್ಥಿಯೂ ಸ್ವತಂತ್ರವಾಗಿ ಗೆಲ್ಲಲಿಲ್ಲ. ಬಹುತೇಕ ಜನರಿಗೆ ಅವರ ನಾಯಕತ್ವ ಸ್ವೀಕೃತವೆಂಬ ಅಭಿಪ್ರಾಯವನ್ನು ಮುಂದಿಟ್ಟುಕೊಂಡು ಅವರ ಸೋಲಿಗೆ ಕಾರಣವಾಗಿರುವ ಅಂಶಗಳನ್ನು ಪರಿಶೀಲಿಸಲು ಕನಿಷ್ಠ ಪ್ರಯತ್ನವನ್ನು ಮಾಡಲಿಲ್ಲವೆಂದು ಸಾಬೀತು ಮಾಡಿದೆ. ಲೋಕಸಭೆಗೆ ಆಸ್ಕರ್ ಫರ್ನಾಂಡಿಸ್, ಕರ್ನಾಟಕದ ಹೊರಗೆ ಜಾರ್ಜ್ ಫೆರ್ನಾಂಡಿಸ್ ಮುಂತಾದವರ ಸ್ಪರ್ಧೆಯ ಬಗ್ಗೆ ಲೇಖನವು ಪ್ರತಿಪಾದಿಸಿದೆ. ಇತೀಚಿನ ದಿನಗಳಲ್ಲಿ ಹಿಂದುತ್ವದ ಬೆಳವಣಿಗೆಯು ಬಿ.ಜೆ.ಪಿ. ಗೆ ಚುನಾವಣೆಗೆ ಅನುಕೂಲವಾಗಿದೆ. ಈ ದಕ್ಷಿಣ ಕನ್ನಡ ಪ್ರಾಂತ್ಯದಲ್ಲಿ ಹೆಜಿಮನಿ ಅಥವಾ ಆಧಿಪತ್ಯ ಸಿದ್ಧಾಂತಗಳು ವ್ಯಾಪಕವಾಗಿರುವುದರಿಂದ ಆದ್ಯತೆಯು ಅವುಗಳಿಂದ ಪ್ರಭಾವಿಸಲ್ಪಟಿವೆ. ಎನ್ನುವುದು ಮತ್ತು ರಾಜಕೀಯದಲ್ಲಿ ಕ್ರೈಸ್ತರಿಗೆ, ಗೌರವ, ಆಸಕ್ತಿಗಳಿವೆಯಾದರೂ, ಕ್ರೈಸ್ತ ರಾಜಕಾರಣಿಗಳು ತಮ್ಮ ಸ್ವಂತ ಕಲ್ಪನೆ–ನಂಬಿಕೆಯೊಂದಿಗೆ ಜೀವಿಸುತ್ತಾರೆ ಎನ್ನುವುದು ಲೇಖನದ ಅಂತಿಮ ತೀರ್ಮಾನಗಳಾಗಿವೆ[೬೧].

ಈ ಮೇಲಿನ ಲೇಖನವು ಸೀಮಿತ ವ್ಯಾಪ್ತಿಯಲ್ಲಿ ರೂಪುಗೊಂಡಿರುತ್ತದೆ. ಪ್ರಬಂಧಕಾರರು ಕೊಂಕಣಿ ಭಾಷೆಯನ್ನು ಮಾತನಾಡುವ ಕೆನರಾ ಕ್ರೈಸ್ತರ ಬಗೆಗಿನ ಅಧ್ಯಯನವನ್ನು ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಾಗಿದ್ದ ಸಂಧರ್ಭದಲ್ಲಿ ನಡೆಸಿದ್ದಾರೆ. ಕ್ರೈಸ್ತರ ರಾಜಕೀಯ ಪ್ರಾತಿನಿಧ್ಯತೆಯ ಬಗ್ಗೆ ಅಂಕಿ ಅಂಶಗಳಿಂದ ಲೇಖನವು ಹಲವಾರು ವಿಷಯಗಳನ್ನು ಪ್ರಸ್ತುತಪಡಿಸಿದರೂ, ಇಂದಿನ

ಸಂದರ್ಭದಲ್ಲಿ ರಾಜಕೀಯ ಸನ್ನಿವೇಶಗಳು ಬದಲಾವಣೆಗೊಂಡಿವೆ. ದಕ್ಷಿಣ ಕನ್ನಡ ಕ್ರೈಸ್ತರೆಂದರೆ ಕೇವಲ ಕೆನರಾ ಕ್ರಿಶ್ಚಿಯನ್ನರು ಮಾತ್ರವಲ್ಲ. ಇತರೇ ಕ್ರೈಸ್ತ ಜನಾಂಗದವರು ಅಲ್ಪಸಂಖ್ಯಾತ ಸಮುದಾಯಕ್ಕೆ ಸೇರಿದವರೇ ಆಗಿದ್ದಾರೆ. ಅವರ ಪ್ರಾತಿನಿಧ್ಯದ ಕುರಿತಂತೆ ಸಂಶೋಧನಾ ಅಧ್ಯಯನದ ಅಗತ್ಯವಿದೆ.

**೧.೯. ಅಧ್ಯಯನದ ವ್ಯಾಪ್ತಿ, ಅಧ್ಯಾಯಗಳು ಮತ್ತು ಇತಿಮಿತಿಗಳು**

ಈ ಸಂಶೋಧನಾ ಅಧ್ಯಯನದ ವ್ಯಾಪ್ತಿಯನ್ನು ಭೌಗೋಳಿಕವಾಗಿ ಕರ್ನಾಟಕ ರಾಜ್ಯದಲ್ಲಿನ ದಕ್ಷಿಣ ಕನ್ನಡ ಕಂದಾಯ ಜಿಲ್ಲೆಯಲ್ಲಿ ವಾಸ್ತವ್ಯವಾಗಿರುವ ಕ್ರೈಸ್ತ ಸಮುದಾಯದ ಜನರ ರಾಜಕೀಯ ಭಾಗವಹಿಸುವಿಕೆಗೆ ಸೀಮಿತ ಗೊಳಿಸಲಾಗಿದೆ. ಸಂವಿಧಾನಾತ್ಮಕವಾಗಿ ಅಲ್ಪಸಂಖ್ಯಾತರಿಗೆ ದೊರೆತ ರಾಜಕೀಯ ಹಕ್ಕುಗಳ ಹಿನ್ನಲೆಯಲ್ಲಿ ಕ್ರೈಸ್ತ ಜನರು ರಾಜಕೀಯದಲ್ಲಿ ತೊಡಗಿಸಿಕೊಳ್ಳಲು ತೋರುವ ಆಸಕ್ತಿ, ಪ್ರಾತಿನಿಧ್ಯತೆ ಮತದಾನ ಮುಂತಾದ ಪ್ರಕ್ರಿಯಗಳನ್ನು ಪರಿಶೀಲಿಸುವುದರ ಜೊತೆಗೆ, ಈ ವಲಯದಲ್ಲಿ ಎದುರಾಗುವ ಸಮಸ್ಯೆ ಸವಾಲುಗಳನ್ನು ವಿಮರ್ಶಾತ್ಮಕ ರೀತಿಯಲ್ಲಿ ವಿಶ್ಲೇಷಿಸುವುದು ಪ್ರಸ್ತುತ ಅಧ್ಯಯನದಲ್ಲಿ ಪ್ರಯತ್ನಿಸಲಾಗುತ್ತದೆ. ಈ ನಿಟ್ಟಿನಲ್ಲಿ ಐದು ಮುಖ್ಯ ಅಧ್ಯಾಯಗಳನ್ನು ರೂಪಿಸಿಕೊಳ್ಳುವ ಉದ್ದೇಶಗಳಿವೆ.

ಮೊದಲ ಅಧ್ಯಾಯವು ಪೀಠಿಕೆ–ಪ್ರಜಾಪ್ರಭುತ್ವದ ಪ್ರಾಮುಖ್ಯತೆ, ನಿರ್ಣಯಿಸುವ ಅಧಿಕಾರ ಮತ್ತು ಅಭಿವೃದ್ಧಿ, ರಾಜಕೀಯ ಭಾಗವಹಿಸುವಿಕೆಯ ವಿವಿಧ ದೃಷ್ಟಿಕೋನಗಳು, ಸಂವಿಧಾನ ಮತ್ತು ಅಲ್ಪಸಂಖ್ಯಾತರ ಸ್ಥಾನಮಾನಗಳು, ಅಲ್ಪಸಂಖ್ಯಾತ ಕ್ರೈಸ್ತ ಸಮುದಾಯದ ಪರಿಕಲ್ಪನೆ ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಕ್ರೈಸ್ತ ಸಮುದಾಯದ ಪರಿಚಯ, ಅಧ್ಯಯನಕ್ಕೆ ಮೂಲವಾಗಿರುವ ಸಮಸ್ಯೆಗಳು ಅಧ್ಯಯನದ ಉದ್ದೇಶಗಳು, ಅಧ್ಯಯನದ ಊಹೆ, ಅಧ್ಯಯನದ ಮಿತಿಗಳು, ವಿಷಯಕ್ಕೆ ಸಂಬಂಧಿಸಿದಂತೆ ಸಂಕ್ಷಿಪ್ತ ಸಾಹಿತ್ಯ ವಿಮರ್ಶೆ ಹಾಗೂ ಈ ಸಪ್ರಬಂಧದ ವಿನ್ಯಾಸಗಳನ್ನೊಳಗೊಂಡಿವೆ.

ಎರಡನೆಯ ಅಧ್ಯಾಯದಲ್ಲಿ ಜಿಲ್ಲೆಯ ಶೈಕ್ಷಣಿಕ, ಸಾಮಾಜಿಕ, ಆರ್ಥಿಕ ಅಭಿವೃದ್ಧಿಯಲ್ಲಿ ಕ್ರೈಸ್ತರ ಕೊಡುಗೆಯ ಬಗ್ಗೆ ಚರ್ಚಿಸಲಾಗುವುದು. ರಾಷ್ಟ್ರೀಯ ಸ್ವಾತಂತ್ರ್ಯ ಹೋರಾಟದಲ್ಲಿ ಕ್ರೈಸ್ತರ

ಪಾತ್ರ ಶಿಕ್ಷಣ ಕ್ಷೇತ್ರದಲ್ಲಿ ಕ್ರೈಸ್ತರ ಕೊಡುಗೆ, ಸಾಹಿತ್ಯ ನಿಘಂಟು, ವ್ಯಾಕರಣ ರಚನೆಯಲ್ಲಿ ಅವರ ಕೊಡುಗೆ ಇತ್ಯಾದಿಗಳ ಕುರಿತು ಸಂಕ್ಷಿಪ್ತ ಮಾಹಿತಿ ಒಳಗೊಂಡಿದೆ.

ಮೂರನೆಯ ಅಧ್ಯಾಯವು ಸರಕಾರದ ವಿವಿಧ ಸ್ತರಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯದ ಕುರಿತಾದ ಅಧ್ಯಯನವಾಗಿದೆ. ಇಲ್ಲಿ ಮುಖ್ಯವಾಗಿ ಗ್ರಾಮ ಪಂಚಾಯತ್‌ಗಳಲ್ಲಿ ಮತ್ತು ಜಿಲ್ಲಾ ಪಂಚಾಯತ್‌ಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯದ ಪ್ರಮಾಣ ಮಂಗಳೂರು ನಗರ ಪಾಲಿಕೆಯಲ್ಲಿ ಅವರ ಪ್ರಾತಿನಿಧ್ಯ, ಲೋಕಸಭೆಗೆ ದಕ್ಷಿಣ ಕನ್ನಡ ಕ್ರೈಸ್ತರ ಪ್ರಾತಿನಿಧ್ಯ, ವಿಧಾನ ಸಭೆಯಲ್ಲಿ ಮತ್ತು ಮಂತ್ರಿ ಮಂಡಲದಲ್ಲಿ ಕ್ರೈಸ್ತರ ಪ್ರಾತಿನಿಧ್ಯ, ಕ್ರೈಸ್ತರಲ್ಲಿ ಮಹಿಳೆಯರು ಹಾಗೂ ಪುರುಷರ ಶೇಕಡಾವಾರು ಪ್ರಾತಿನಿಧ್ಯದ ಪ್ರಮಾಣ, ಇತ್ಯಾದಿಗಳಿವೆ.

ನಾಲ್ಕನೆಯ ಅಧ್ಯಾಯವು ನೇರವಾಗಿ ಕ್ರೈಸ್ತರ ರಾಜಕೀಯ ಪಾಲುಗೊಳ್ಳುವಿಕೆಯ ಕುರಿತಾಗಿದೆ. ವಿವಿಧ ಚುನಾವಣೆಗಳಲ್ಲಿ ಕ್ರೈಸ್ತರ ಮತದಾನದ ಪ್ರಮಾಣ; ಪಕ್ಷದ ಸದಸ್ಯತ್ವ. ಪಕ್ಷಗಳಿಗೆ ದೇಣಿಗೆ ನೀಡುವುದು, ಇತ್ಯಾದಿ ಸಕ್ರಿಯ ರಾಜಕೀಯ ಭಾಗವಹಿಸುವಿಕೆ ಪ್ರಮಾಣ, ಕ್ರೈಸ್ತರಲ್ಲಿ ರಾಜಕೀಯ ಅರಿವಿನ ಪ್ರಮಾಣ, ರಾಜಕೀಯದಲ್ಲಿ ಕ್ರೈಸ್ತರ ರಾಜಕೀಯ ಪಾಲುಗೊಳ್ಳುವಿಕೆಯ ಪ್ರಾಮುಖ್ಯತೆ, ಕ್ರೈಸ್ತರ ಒಲವು ಯಾವ ರಾಜಕೀಯ ಪಕ್ಷದ ಕಡೆಗೆ, ಕ್ರೈಸ್ತರಿಗೆ ತನ್ನದೇ ಆದ ಪ್ರತ್ಯೇಕ ರಾಜಕೀಯ ಪಕ್ಷ ರೂಪಿಸುವಿಕೆಯ ಅಗತ್ಯತೆ ಇದೆಯೇ; ಕ್ರೈಸ್ತರು ರಾಜಕೀಯವಾಗಿ ಮೂಲಭೂತ ಪರಿವರ್ತಕರೊ (ರ್‍ಯಾಡಿಕಲ್ಸ್) ಅಥವಾ ಸಂಪ್ರದಾಯಸ್ಥರೋ, ಇತ್ಯಾದಿಗಳು ಒಳಗೊಂಡಿರುತ್ತವೆ.

ಐದನೆಯ ಅಧ್ಯಾಯದಲ್ಲಿ ಕ್ರೈಸ್ತರ ರಾಜಕೀಯ ಭಾಗವಹಿಸುವಿಕೆಗೆ ಎದುರಾಗುವ ಸವಾಲುಗಳು ಮತ್ತು ಅಡ್ಡಿ–ಆತಂಕಗಳ ಕುರಿತು ಅಧ್ಯಯನವಿದೆ. ಇಲ್ಲಿ ಮುಖ್ಯವಾಗಿ ಜಾತಿ ಲೆಕ್ಕಾಚಾರದ ರಾಜಕಾರಣ, ಕ್ರೈಸ್ತರು ಅಲ್ಪಸಂಖ್ಯಾತ ಸಮುದಾಯ, ಕ್ರೈಸ್ತ ಸಮುದಾಯದಲ್ಲಿ ಏಕತೆಯ ಕೊರತೆ, ಕ್ರೈಸ್ತ ಮತದಾರರು ಹಂಚಿ ಹರಡಿ ಹೋಗಿರುವುದು, ಹಾಗೂ ಒಳಗುಂಪುಗಳ ಪ್ರಾತಿನಿಧ್ಯತೆಯಲ್ಲಿ ಅಸಮಾನತೆಗಳು ಇತ್ಯಾದಿ ಒಳಗೊಂಡಿವೆ.

ಕೊನೆಯ ಅಧ್ಯಾಯ ಉಪಸಂಹಾರ

**ಅಧ್ಯಯನದ ಇತಿಮಿತಿಗಳು**

ಸಂಶೋಧಕನು ಗುರುತಿಸಿರುವಂತೆ ಪ್ರಸ್ತುತ ಅಧ್ಯಯನದ ಪ್ರಮುಖ ಮಿತಿಗಳು ವಸ್ತು – ವಿಷಯ ನಿರ್ಧಿಷ್ಠತೆ ಹಾಗೂ ಪ್ರಾದೇಶಿಕ ನಿರ್ಧಿಷ್ಠತೆ ಅಥವಾ ಮಿತಿಗಳಿಗೊಳಪಟ್ಟಂತೆ ಈ ಕೆಳಗಿನಂತೆ ಮಾಡಲಾಗಿದೆ:–

೧. ಕ್ರೈಸ್ತರ ರಾಜಕೀಯ ಭಾಗವಹಿಸುವಿಕೆಯ ಅಧ್ಯಯನದ ವ್ಯಾಪ್ತಿಯನ್ನು ದಕ್ಷಿಣ ಕನ್ನಡ ಕಂದಾಯ ಜಿಲ್ಲೆಯ ವ್ಯಾಪ್ತಿಗೆ ಸೀಮಿತಗೊಳಿಸಲಾಗಿದೆ.

೨. ಕೇವಲ ಜಿಲ್ಲೆಯ ಕ್ರೈಸ್ತ ಸಮುದಾಯದ ರಾಜಕೀಯ ಭಾಗವಹಿಸುವಿಕೆಗೆ ಸಂಬಂಧಿಸಿದಂತೆ ಮತದಾನದ ಪ್ರಮಾಣ, ಸಕ್ರಿಯ ರಾಜಕೀಯ ಪಾಲುಗೊಳ್ಳುವಿಕೆಗೆ ಸಂಬಂಧಿಸಿದಂತೆ ಪಕ್ಷದ ಸದಸ್ಯತ್ವ, ಚುನಾವಣಾ ಪ್ರಚಾರ, ದೇಣಿಗೆ ನೀಡುವುದು, ಇತ್ಯಾದಿಗಳ ಕುರಿತು ಅಧ್ಯಯನ.

೩. ಸ್ಥಳೀಯ ಸರಕಾರದ ವಿವಿಧ ಸ್ತರಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯತೆ ಅವರ ಸಂಖ್ಯಾವಾರು ಪ್ರಮಾಣಕ್ಕನುಗುಣವಾಗಿ ಲಭಿಸಿದೆಯೇ ಎಂದು ಅಧ್ಯಯನ ಮಾಡುವುದು.

೪. ಕ್ರೈಸ್ತರ ರಾಜಕೀಯ ಭಾಗವಹಿಸುವಿಕೆಗೆ ಅಡ್ಡಿಯಾಗಬಹುದಾದ ಅಂಶಗಳು ಅಥವಾ ಸಮಸ್ಯೆಗಳ ಕುರಿತಂತೆ ಮಾತ್ರ ಅಧ್ಯಯನ ಸೀಮಿತಗೊಂಡಿರುತ್ತದೆ.

**೧.೧೦. ಅಧ್ಯಯನದ ವಿಧಾನಗಳು**

(೧) ಕ್ರೈಸ್ತ ಸಮುದಾಯದ ಹಲವು ಮುಖಂಡರುಗಳು ಹಾಗೂ ಜನ ಪ್ರತಿನಿಧಿಗಳೊಡನೆ ನೇರ ಸಂದರ್ಶನ ಮೂಲಕ ಅಭಿಪ್ರಾಯ, ಮಾಹಿತಿ, ಅನುಭವಗಳ ಸಂಗ್ರಹಣೆ.

(೨) ನಮೂನಾ ವಿಧಾನದನ್ವಯ ಜಿಲ್ಲೆಯ ಐದು ತಾಲ್ಲೂಕು, ಗ್ರಾಮೀಣ ಹಾಗೂ ನಗರದ ಕ್ರೈಸ್ತ ಮತದಾರರಿಂದ ಪ್ರಶ್ನಾವಳಿಗಳ ಮೂಲಕ ಮಾಹಿತಿ ಸಂಗ್ರಹಣೆ.

(೩) ಅಧ್ಯಯನಕ್ಕೆ ಸೈದ್ಧಾಂತಿಕ ನೆಲೆಯನ್ನು ಒದಗಿಸಲು ವಿವಿಧ ಗ್ರಂಥಗಳ, ಸಂಶೋಧನಾ ಲೇಖನಗಳ ಹಾಗೂ ಸರಕಾರಿ ಮೂಲದ ದಾಖಲೆಗಳ ಪರಾಮರ್ಶೆ.

(೪) ಇತ್ತೀಚೆಗಿನ ಅಲ್ಪ ಸಂಖ್ಯಾತರ ರಾಜಕೀಯ ಭಾಗವಹಿಸುವಿಕೆಯ ಬೆಳವಣಿಗೆಯನ್ನು ಪರಿಶೀಲಿಸಲು ವೆಬ್ ಸೈಟ್‌ಗಳನ್ನು ಉಪಯೋಗಿಸುವುದು.

ಹೀಗೆ ಸಂಗ್ರಹಿಸಿದಂತಹ ಮಾಹಿತಿಗಳನ್ನು ಸೂಕ್ತ ಕೋಷ್ಟಕಗಳನ್ನಾಗಿ ವಿಂಗಡಿಸಿ. ಸರಳ ಅಂಕಿ ಅಂಶಗಳ ತಂತ್ರಗಳಾದ ಅನುಪಾತ, ಸರಾಸರಿ ಪ್ರಮಾಣ ಮತ್ತು ಶೇಕಡಾವಾರು ಪ್ರಮಾಣಗಳ ಮೂಲಕ ವಿಶ್ಲೇಷಿಸಿ ಅರ್ಥೈಸಲಾಗಿದೆ.

ಸಂವಿಧಾನವನ್ನು ರಚಿಸುವ ಸಂದರ್ಭದಲ್ಲಿ ಡಾ. ಅಂಬೇಡ್ಕರವರು ಪ್ರಜೆಗಳು ರಾಜಕೀಯದಲ್ಲಿ ಪಾಲ್ಗೊಳ್ಳಬೇಕಾದ ಅಗತ್ಯವನ್ನು ಮನಗಂಡಿದ್ದರು, ಪ್ರಾಜಾಪ್ರಭುತ್ವ ಸರ್ಕಾರವು ಜನರ ಆರ್ಥಿಕ ರಾಜಕೀಯ, ಹಾಗೂ ಸಾಮಾಜಿಕ ಬದುಕಿನಲ್ಲಿ ಪಕ್ಷಪಾತವಿಲ್ಲದೆ ಕ್ರಾಂತಿಕಾರಿ ಬದಲಾವಣೆಯನ್ನು ತರುವ ವ್ಯವಸ್ಥೆ, ಎನ್ನುವುದು ಅದರ ಮಾನವತಾ ನೀತಿಯನ್ನು ಪ್ರತಿಬಿಂಬಿಸುತ್ತದೆ. ಹಾಗಾಗಿ ಅಲ್ಪಸಂಖ್ಯಾತರಾದ ಕ್ರೈಸ್ತ ಸಮುದಾಯ ರಾಜಕೀಯ ಪ್ರಕ್ರಿಯೆಗಳಲ್ಲಿ ಭಾಗವಹಿಸುವುದು ಅನಿವಾರ್ಯ. ಇದರಿಂದ ಬಹುಸಂಖ್ಯಾತರ ಸರ್ವಾಧಿಕಾರ ಧೋರಣೆಗಳಿಂದ ಹೊರಬರಲು ಮತ್ತು ಸಮಾನತೆಯೆಂಬ ಸರ್ವಕಾಲಿಕ ಮೌಲ್ಯವನ್ನು ಅನುಷ್ಠಾನಗೊಳಿಸಲು ಸಾಧ್ಯವಾಗುತ್ತದೆ. ರಾಜಕೀಯ ಅಧಿಕಾರವನ್ನು ಪಡೆದ ಕ್ರೈಸ್ತ ಸಮುದಾಯದ ನಾಯಕರು ಸಂವಿಧಾನದಲ್ಲಿ ಅಲ್ಪಸಂಖ್ಯಾತರಿಗಿರುವ ವಿಶೇಷ ಹಕ್ಕು, ಹಾಗೂ ಸ್ಥಾನಮಾನಗಳನ್ನು ಜಾರಿಗೊಳಸುವಲ್ಲಿ ಮಹತ್ತರ ನಿರ್ಣಯಗಳ ಬಗ್ಗೆ ಚರ್ಚಿಸಲು ಮುಂದಾಗಬೇಕು. ಶಾಸಕಾಂಗ ಮತ್ತು ಕಾರ್ಯಾಂಗಳೆರಡರಲ್ಲೂ ಕ್ರೈಸ್ತ ಜನರು ಪ್ರಾತಿನಿಧ್ಯತೆಯನ್ನು ಪಡೆದು ಕಾರ್ಯ ಪ್ರವೃತ್ತರಾಗಬೇಕು ಎನ್ನುವುದನ್ನು ಈ ಸಂಶೋಧನೆಯು ಆಶಿಸುತ್ತದೆ ಮುಂದಿನ ಅದ್ಯಾಯವು ದಕ್ಷಿಣ ಕನ್ನಡ ಜಿಲ್ಲೆಗೆ ಕ್ರೈಸ್ತ ಸಮುದಾಯ ನೀಡಿದ ಶೈಕ್ಷಣಿಕ, ಸಾಮಾಜಿಕ ಹಾಗೂ ಧಾರ್ಮಿಕ ಕೊಡುಗೆಗಳ ಬಗ್ಗೆ ಪರಾಮರ್ಶಿಸುವ ಪ್ರಯತ್ನವಾಗಿದೆ.

# ಕೊನೆ ಟಿಪ್ಪಣಿಗಳು

೧. ಬಿ.ಕೆ. ಗೋಖಲೆ, "ರಾಜ್ಯಶಾಸ್ತ್ರ – ಸಿದ್ಧಾಂತ ಮತ್ತು ಸರ್ಕಾರೀ ಯಂತ್ರ" ಹಿಮಾಲಯ ಪಬ್ಲಿಷಿಂಗ್ ಹೌಸ್, ಎಂಟನೆಯ ಮುದ್ರಾಣ, ೧೯೯೪ ಪುಟ – ೩೧

೨. ಪ್ಯಾರಿ ಜೆರೈಯಂಟ್ ಯಟ್ ಅಲ್ "ಪಾರ್ಟಿಸಿಪೇಶನ್ ಇನ್ ಪಾಲಿಟಿಕ್ಸ್" ಮ್ಯಾಂಚೆಸ್ಟರ್ ಯುನಿವರ್ಸಿಟಿ ಪ್ರೆಸ್ ಲಂಡನ್ ೧೯೭೨, ಪುಟ –೩ ಕರ್ಟಿಸಿ – ಎಚ್ ಟಿ ಟಿ ಪಿ ://ಹೋಂ ಪೇಜ್. ಮಾಕ್. ಕಾಮ್/ಬರ್ಕ್ ಜೆ ಎಮ್/ಬ್ಲಾಗ್/ಸಿ ೩೭೫೪೬೭೯೩/ಇ ೧೮೨೭೫೭೪೪೭೯೩/ಇಂಡೆಕ್ಸ್ ಎಚ್‌ಟಿ ಎಮ್ ಎಲ್.

೩. ಎಲ್ಲೋರ ಪುರಿ "ಅಂಡರ್‌ಸ್ಟಾಂಡಿಂಗ್ ಪಾರ್ಟಿಸಿಪೇಶನ್ – ಥಿಯರೆಟಿಕಲ್ ಪೌಂಡೇಶನ್ಸ್ ಆ್ಯಂಡ್ ಪ್ರಾಕ್ಟಿಕಲ್ ಇಂಪ್ಲಿಕೇಶನ್ಸ್" ಪಬ್ಲಿಷ್‌ಡ್ ಇನ್ ಇಕನಾಮಿಕ್ ಆ್ಯಂಡ್ ಪೊಲಿಟಿಕಲ್ ವೀಕ್ಲಿ, ಜೂನ್ ೧೨, ೨೦೦೪, ಪುಟ ೨೫೧೧.

೪. ಮಿಲ್‌ಬ್ರಾತ್ ಲೆಸ್ಟರ್ "ಪೊಲಿಟಿಕಲ್ ಪಾರ್ಟಿಸಿಪೇಶನ್ ರ್‍ಯಾಂಡ್ ಆ್ಯಂಡ್ ಮೆಕ್‌ನಲ್ಲಿ & ಕಂಪೆನಿ, ಚಿಕಾಗೊ, ೧೯೭೧ ಪುಟ ೫೪. ಕರ್ಟಿಸಿ – ಎಚ್ ಟಿ ಟಿ ಪಿ : // ಹೋಂ ಪೇಜ್ . ಮಾಕ್ . ಕಾಮ್/ಬರ್ಕ್‌ಜೆಎಮ್/ ಐ ಬ್ಲಾಗ್/ ಸಿ ೩೭೫೪೬೭೯೩ / ಇ ೧೮೨೭೫೭೪೭೯೩ / ಇಂಡೆಕ್ಸ್. ಎಚ್‌ಟಿ ಎಮ್ ಎಲ್.

೫. ರಾಮನಾಥ ಶರ್ಮ ಬರೆದ "ಪೊಲಿಟಿಕಲ್ ಸೋಶಿಯೊಲಾಜಿ". ಲಿಲಿ ಜಯ ಸಿಂಗೇ ಅವರ ಮಿಡಿಯ ಪ್ರಮೋಟರ್ಸ್ ಮತ್ತು ಪಬ್ಲಿಷರ್ಸ್ ಪ್ರೈ. ಲಿಮಿಟೆಡ್ ೧೯೯೭ ರಲ್ಲಿ ಪ್ರಕಾಶಿತ ಪುಟ – ೨೩೫

೬. ಅದೇ, ಪುಟ– ೨೩೫.

೭. ಟೆರ್‌ಚೆಕ್ ರೊನಾಲ್ಡ್ "ಇನ್ಸೆಂಟೀವ್ಸ್ ಆ್ಯಂಡ್ ವೋಟರ್ ಪಾರ್ಟಿಸಿಪೇಶನ್ ಎ ರಿಸರ್ಚ್ ನೋಟ್" ಸ್ಪ್ರಿಂಗ್, ೧೯೭೯ ಪುಟ ೧೩೬.

೮. ಬಿ. ಕೆ. ಗೋಖಲೆ "ರಾಜ್ಯಶಾಸ್ತ್ರ – ಸಿದ್ಧಾಂತ ಮತ್ತು ಸರ್ಕಾರಿ ಯಂತ್ರ" ಹಿಮಾಲಯ ಪಬ್ಲಿಷಿಂಗ್ ಹೌಸ್, ಎಂಟನೆಯ ಮುದ್ರಣ, ೧೯೯೪ ಪುಟ – ೪೯.

೯. ೨೦೦೧ ರ ಜನಗಣತಿಯ ಅಂಕಿ ಅಂಶಗಳು ಭಾರತದಲ್ಲಿ ಧರ್ಮವಾರು ಜನಸಂಖ್ಯೆ ಕೃಪೆ ಡಬ್ಲ್ಯೂ ಡಬ್ಲ್ಯೂ ಡಬ್ಲ್ಯೂ. ಗ್ಲೋರಿಯಸ್ ಇಂಡಿಯಾ. ಓಆರ್‌ಜಿ/ ರಿಲೀಜಿಯನ್. ಪಿ ಎಚ್ ಪಿ.

೧೦. ಎಂ. ವಿ. ಪೈಲಿ "ಭಾರತದಲ್ಲಿ ಸಂವಿಧಾನಾತ್ಮಕ ಸರ್ಕಾರ", ಎಸ್ ಚಾಂದ್ ಮತ್ತು ಕಂಪನಿ ಪ್ರಕಟಿತ ಆರನೆಯ ಮುದ್ರಣ, ೨೦೦೬ ಪುಟ – ೧೪೯

೧೧. ಅದೇ, ಪುಟ ೧೪೯

೧೨. ಅದೇ, ಪುಟ ೧೪೯

೧೩. ಡಾ. ಬಿ. ಎಲ್ ಫಾಡಿಯಾ "ಇಂಡಿಯನ್ ಗವರ್ನ್‌ಮೆಂಟ್ ಆ್ಯಂಡ್ ಪಾಲಿಟಿಕ್ಸ್" ಸಾಹಿತ್ಯಭವನ ಪಬ್ಲಿಕೇಶನ್ಸ್ ಆರನೆಯ ಮುದ್ರಣ ೨೦೦೫ ಪುಟ, ೮೭೭ ರಿಂದ ೮೭೮.

೧೪. ಶಿಫಾಲಿ ಝಾ "ರೈಟ್ಸ್ ವರ್ಸಸ್ ರೆಪ್ರೆಸೆಂಟೇಶನ್ – ಡಿಫೆಂಡಿಂಗ್ ಮೈನಾರಿಟಿ ಇಂಟರೆಸ್ಟ್ ಇನ್ ದಿ ಕಾನ್‌ಸ್ಟಿಟ್ಯೂಯೆಂಟ್ ಅಸೆಂಬ್ಲಿ" ಇಕನಾಮಿಕ್ ಆ್ಯಂಡ್ ಪೊಲಿಟಿಕಲ್ ವೀಕ್ಲಿ, ಎಪ್ರಿಲ್ ೧೯, ೨೦೦೩ ಪುಟ ೧೫೭೯.

೧೫. ರೊವೇನಾ ರೊಬಿನ್‌ಸನ್, "ಕ್ರಿಶ್ಚಿಯನ್ಸ್ ಆಫ್ ಇಂಡಿಯಾ" ಸೇಜ್ ಪಬ್ಲಿಕೇಶನ್ಸ್ ನ್ಯೂ ಡೆಲ್ಲಿ, ೨೦೦೩,
ಪುಟ ಸಂಖ್ಯೆ–೨೯

೧೬. ವೆ. ರೆ. ಥೋಮಸ್ ಪಿ. ಮುಂಡುಕುಯಿ "ಕಥೋಲಿಕೇಟ್ ಚರ್ಚ್ ಹಿಸ್ಟರಿ ಎಟ್ ಎ ಗ್ಲಾನ್ಸ್" ಜಾನ್‌ಸನ್ ಪ್ರಿಂಟರ್ಸ್ ಕೇರ್ ಅಫ್ ಗ್ಲಾರಿ ಗ್ರಾಫಿಕ್ಸ್ ಪ್ರೈವೇಟ್ ಲಿಮಿಟೆಡ್ ಗೌತಮ್ ನಗರ್, ದೆಹಲಿ – ೪೯, ೨೦೦೫ ಪುಟ –೧೨.

೧೭. ರೆ. ಡಾ. ಪಿಯುಸ್ ಫಿಡೆಲಿಸ್ ಪಿಂಟೊ, "ಕರಾವಳಿ ಕರ್ನಾಟಕ ಕ್ರೈಸ್ತರ ಇತಿಹಾಸ" ಸಮನ್ವಯ ಪ್ರಕಾಶನ, ಮಂಗಳೂರು ೧೯೯೯ ಪುಟ ೧೦೯ – ೧೭೨.

೧೮. ಬಿ. ಎಸ್ ತಲ್ವಾಡಿ, "ಕರ್ನಾಟಕ ಕ್ರೈಸ್ತರ ಇತಿಹಾಸ" ಕನ್ನಡ ಕಥೋಲಿಕ ಸಂಘದಿಂದ ಪ್ರಕಾಶಿತ, ೧೯೮೯ ಪುಟ ೫೮.

೧೯. ರೆ. ಫಾ. ಮಾರ್ಕ್ ವಾಲ್ಡರ್ "ಜಿಲ್ಲೆಯ ಬೆಳವಣಿಗೆಯಲ್ಲಿ ಕ್ರೈಸ್ತ ಧರ್ಮ ಸಭೆಯ ಪಾತ್ರ", ಅಡ್ಯನಡ್ಕ ಕೃಷ್ಣಭಟ್ ಸಂಪಾದಿತ ಸುದರ್ಶನ ಗ್ರಂಥದಿಂದ, ವಿಜಯ ಕಾಲೇಜ್ ಟ್ರಸ್ಟ್ ಮುಲ್ಕಿ ಪ್ರಕಾಶಿತ ೧೯೭೭, ಪುಟ ೩೮೭.

೨೦. "ಏಕತ" ದಿ ಡೈರೆಕ್ಟರಿ ಆಫ್ ಕ್ರಿಶ್ಚಿಯನ್ ಚರ್ಚ್‌ಸ್ ಇನ್ ದಕ್ಷಿಣ ಕನ್ನಡ ಆ್ಯಂಡ್ ಉಡುಪಿ ಡಿಸ್ಟ್ರಿಕ್ಟ್ಸ್ ಸಂಪಾದಕರು ರೆವರೆನ್ ಡಾ. ರೊನಾಲ್ಡ ಕುಟಿನ್ಹ. ಪ್ರಕಾಶನ ಎಪ್ರಿಲ್, ೨೦೦೩

೨೧. ಪ್ರಜಾವಾಣಿ ದಿನಪತ್ರಿಕೆ, ಕರಾವಳಿ ಅಂಕಣ ೧೫ನೇ ಏಪ್ರಿಲ್, ೨೦೦೯.

೨೨. ಪ್ರೊ. ವಲೇರಿಯನ್ ರಾಡ್ರಿಗಸ್‌ರ "ಕೆನರಾ ಕ್ರೈಸ್ತರು ಮತ್ತು ಅವರ ರಾಜಕೀಯ ಹಂಬಲ" ಜಾಗತಿಕ ಕೆನರಾ ಕೊಂಕಣಿ ಕಥೋಲಿಕ್ ಸಮುದಾಯದ ಜಾಗತಿಕ ಸಮ್ಮೆಳನ ಡಿ. ೨೬ ರಿಂದ ೨೯ ರ ೨೦೦೪ ರಲ್ಲಿ ಮಂಡಿಸಿದ ಪ್ರಬಂಧ ಪುಟ ೭೮ ರಿಂದ ೯೧.

೨೩. ಮಹಮ್ಮದ್ ಅರಿಫ್ ಪಡುಬಿದ್ರಿ "ಕಡಲತಡಿಯಲ್ಲಿ ರಾಜಕೀಯದ ಹೊಸ ಅಲೆ" ವಿಜಯ ಕರ್ನಾಟಕ ದಿನಪತ್ರಿಕೆ ಕ್ಷೇತ್ರ ದರ್ಶನ ಮಾಲಿಕೆ, ೨೩ ಮಾರ್ಚ್ ೨೦೦೯ ಪುಟ – ೧೨.

೨೪. ಪ್ರಜಾವಾಣಿ ವಾರ್ತೆ, ಪ್ರಜಾವಾಣಿ ದಿನಪತ್ರಿಕೆ ಕರಾವಳಿ ಅಂಕಣ ೭ನೇ ಜುಲಾಯಿ ೨೦೦೯.

೨೫. ದಿ। ಹಿಂದೂ ದಿನ ಪತ್ರಿಕೆ, "ಮೈನಾರಿಟೀಸ್ ಡ್ರಾ ಎ ಬ್ಲಾಂಕ್ ಇನ್ ಲೋಕ ಸಭಾ ಪೋಲ್ಸ್" ೨೨ನೇ ಮೇ ೨೦೦೯ ಪುಟ ಸಂಖ್ಯೆ ೦೪.

೨೬. ಟರ್ಚೆಕ್ ರೊನಾಲ್ಡ್ "ಇನ್ಸೆಂಟೀವ್ಸ್ ಆ್ಯಂಡ್ ವೋಟರ್ ಪಾರ್ಟಿಸಿಪೇಶನ್: ಎ ರಿಸರ್ಚ್ ನೋಟ್" ಸ್ಪ್ರಿಂಗ್, ೧೯೭೯ ಪುಟ ೧೩೬.

೨೭. ಸುಹಾಸ್ ಪಲ್‌ಶೀಕರ್ ಮತ್ತು ಸಂಜಯ್ ಕುಮಾರ್ "ಪಾರ್ಟಿಸಿಪೇಟರಿ ನಾರ್ಮ್ : ಹೌ ಬ್ರೋಡ್ ಬೇಸ್ಡ್ ಇಟ್" ಇಕನಾಮಿಕ್ ಆ್ಯಂಡ್ ಪೊಲಿಟಿಕಲ್ ವೀಕ್ಲಿ ಡಿಸೆಂಬರ್೧೮, ೨೦೦೪ ಪುಟ ೫೪೧೨.

೨೮. ಅದೇ, ಪುಟ ಸಂಖ್ಯೆ ೫೪೧೨.

೨೯. ಗಾಡ್ವಿನ್ ಶಿರಿ, ''ಕರ್ನಾಟಕ ಕ್ರಿಶ್ಚಿಯನ್ಸ್ ಆ್ಯಂಡ್ ಪಾಲಿಟಿಕ್ಸ್'' ಪಬ್ಲಿಷ್ಡ್ ಬೈದಿ ಕ್ರಿಶ್ಚಿಯನ್ ಲಿಟರೇಚರ್ ಸೊಸೈಟಿ, ಮದ್ರಾಸ್, ೧೯೭೮ ಪುಟ ೫೯ ರಿಂದ ೭೨ ರ ತನಕ.

೩೦. ಪ್ರೊ. ವಲೇರಿಯನ್ ರಾಡ್ರಿಗಸ್‌ರ ''ಕೆನರಾ ಕ್ರೈಸ್ತರು ಮತ್ತು ಅವರ ರಾಜಕೀಯ ಹಂಬಲ ೨೦೦೪ ನೇ ಡಿ. ೨೪ ರಿಂದ ೨೯ರ ವರೆಗೆ ನಡೆದ ಜಾಗತಿಕ ಕೊಂಕಣಿ ಕಥೋಲಿಕ ಸಮುದಾಯದ ಜಾಗತಿಕ ಸಮ್ಮೇಳನದ ಸ್ಮರಣ ಸಂಚಿಕೆಯ ಪುಟಗಳು ೭೮ ರಿಂದ ೯೧ರ ತನಕ.

೩೧. ಅದೇ, ಪುಟಗಳು ೯೦ ಮತ್ತು ೯೧

೩೨. ಡಾ. ಎಂ. ಚಂದ್ರ ಪೂಜಾರಿ, ''ಕರಾವಳಿ ಕರ್ನಾಟಕದ ಕೋಮುವಾದ'' ಪ್ರಸಾರಾಂಗ ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ೨೦೦೮, ಪುಟಸಂಖ್ಯೆ – ೨.

# ಅಧ್ಯಾಯ ೨

# ಜಿಲ್ಲೆಯ ಬೆಳವಣಿಗೆಯಲ್ಲಿ ಕ್ರೈಸ್ತರು ನೀಡಿದ ಕೊಡುಗೆಗಳು

## ೨.೧. ದಕ್ಷಿಣ ಕನ್ನಡ ಜಿಲ್ಲೆ

ವಸಾಹತುಶಾಹಿ ಬರವಣಿಗೆಗಳಲ್ಲಿ ದಕ್ಷಿಣ ಕನ್ನಡವು ಕೆನರಾ ಅಥವಾ ಸೌತ್ ಕೆನರಾ ಎಂದೆ ಪರಿಚಿತವಾಗಿದೆ[೧]. ಡಾ. ಪಿ. ಗುರುರಾಜ ಭಟ್ಟರ ಪ್ರಕಾರ ಪೋರ್ಚುಗೀಸರು ಈ ಪ್ರದೇಶಕ್ಕೆ ಬಂದಾಗ ಸಾಮಾನ್ಯ ಭಾಷೆಯಾದ ಕನ್ನಡವನ್ನು ಮಾತನಾಡುವ ಜನರನ್ನು ಕಂಡು, ಈ ಪ್ರದೇಶವನ್ನು 'ಕೆನರಾ' ಎಂದು ಕರೆದರು. ಪೋರ್ಚುಗೀಸರಲ್ಲಿ ಇಂಗ್ಲೀಷಿನ ಡಿ (ಜ) ಎಂಬ ಅಕ್ಷರದ ಬಳಕೆ ಬಹಳ ಕಡಿಮೆಯಾಗಿದ್ದು ಈ ರೀತಿ ಕರೆದರು. ನಂತರ ಬ್ರಿಟೀಷರೂ ಕರ್ನಾಟಕದ ಸಮಗ್ರ ಕರಾವಳಿ ಪ್ರದೇಶಕ್ಕೆ ಈ ಹೆಸರನ್ನು ಕೊಟ್ಟರು. ದಕ್ಷಿಣ ಕನ್ನಡ ಜಿಲ್ಲೆಯು ಕರ್ನಾಟಕದ ಕಡಲ ಕಿನಾರೆಯನ್ನು ಹೊಂದಿದ ಜಿಲ್ಲೆಗಳ ಪೈಕಿ ಒಂದಾಗಿದೆ[೨]. ಜಿಲ್ಲೆಯು ಸುಮಾರು ೬೦ ಕಿ.ಮೀ ಉದ್ದದ ಅರಬ್ಬಿ ಸಮುದ್ರದ ಕಡಲ ತೀರವನ್ನು ಹೊಂದಿದ್ದು, ತನ್ನದೇ ಆದ ಇತಿಹಾಸವನ್ನೂ ಹೊಂದಿದೆ[೩]. ೧೩೬೦ ರಲ್ಲಿ ಈ ಜಿಲ್ಲೆಯು ವಿಜಯನಗರದ ಅರಸರ ಆಳ್ವಿಕೆಗೆ ಒಳಪಟ್ಟಿತು. ಕೆಳದಿ ನಾಯಕರ ಆಡಳಿತಾವಧಿಯಲ್ಲಿ ಕ್ರೈಸ್ತರು, ವೀರಶೈವರು ಮತ್ತು ಗೌಡಸಾರಸ್ವತರು ಈ ಜಿಲ್ಲೆಯ ಸಾಮಾಜಿಕ ಜೀವನದಲ್ಲಿ ಹೊಸದಾಗಿ ಬಂದವರಾಗಿದ್ದಾರೆ[೪]. ಆ ನಂತರ ೧೭೬೩ ರಲ್ಲಿ ಹೈದರಾಲಿಯು ಮೈಸೂರು ರಾಜ್ಯಕ್ಕೆ ಈ ಜಿಲ್ಲೆಯನ್ನು ಸೇರಿಸಿದನು. ಆ ಬಳಿಕ ಆತನ ಮಗನಾದ ಟಿಪ್ಪು ಸುಲ್ತಾನನು ಈ ಜಿಲ್ಲೆಯನ್ನು ಆಳುತ್ತಿದ್ದು ೧೭೯೯ ರ ನಾಲ್ಕನೆ ಆಂಗ್ಲೋ ಮೈಸೂರು ಯುದ್ಧದ ನಂತರ ಈ ಜಿಲ್ಲೆಯು ಬ್ರಿಟಿಷ್ ಸಾಮ್ರಾಜ್ಯದ ಒಂದು ಅಂಗವಾಯಿತು. ಇಂಗ್ಲೀಷ್ ಸೈನ್ಯದಲ್ಲಿ ಕೇಪ್ಟನ್ ಆಗಿದ್ದ ಥೋಮಸ್ ಮನ್ರೋ ಈ ಜಿಲ್ಲೆಯ ಮೊದಲ ಕಲೆಕ್ಟರನಾಗಿದ್ದನು[೫].

ಸ್ವಾತಂತ್ರ್ಯಾ ನಂತರ ೧೯೫೬ ರಲ್ಲಿ ಭಾಷಾವಾರು ಪ್ರಾಂತ್ಯದ ರಚನೆಯ ಬಳಿಕ ಇದು ಕರ್ನಾಟಕದ ೨೦ ಜಿಲ್ಲೆಗಳಲ್ಲಿ ಒಂದಾಗಿ ಅಸ್ತಿತ್ವಕ್ಕೆ ಬಂತು. ೧೯೯೭ ರಲ್ಲಿ ಜಿಲ್ಲೆಯು ವಿಭಜಿಸಲ್ಪಟ್ಟು ಪ್ರತ್ಯೇಕ ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಾಗಿ ರೂಪುಗೊಂಡಿತು[೬].

ಜಿಲ್ಲೆಯ ಪೂರ್ವ ದಿಕ್ಕಿನಲ್ಲಿ ಹಾಸನ ಹಾಗೂ ಚಿಕ್ಕಮಗಳೂರು ಜಿಲ್ಲೆಗಳಿವೆ. ದಕ್ಷಿಣದಲ್ಲಿ ಕೇರಳದ ಕಾಸರಗೋಡು ಜಿಲ್ಲೆ ಮತ್ತು ಕೊಡಗು ಜಿಲ್ಲೆಗಳಿವೆ. ಉತ್ತರದಲ್ಲಿ ಉಡುಪಿ ಜಿಲ್ಲೆಯಿದೆ. ಹಾಗೂ ಪಶ್ಚಿಮದಲ್ಲಿ ಅರಬ್ಬೀ ಸಮುದ್ರವಿದೆ. ಜಿಲ್ಲೆಯ ಒಟ್ಟು ವಿಸ್ತೀರ್ಣ ೪,೮೬೬ ಚ. ಕಿ. ಮೀ ಆಗಿದೆ[೬].

ಜಿಲ್ಲೆಯನ್ನು ಆಡಳಿತಾತ್ಮಕವಾಗಿ ೨ ಉಪವಿಭಾಗಗಳನ್ನಾಗಿಯೂ ಮತ್ತು ೫ ತಾಲ್ಲೂಕುಗಳನ್ನಾಗಿಯೂ ಮತ್ತು ೧೬ ಹೋಬಳಿಗಳನ್ನಾಗಿಯೂ ವಿಂಗಡಿಸಲಾಗಿದೆ[೮]. ೨೦೦೧ ರ ಜನಗಣತಿಯ ಪ್ರಕಾರ ಜಿಲ್ಲೆಯಲ್ಲಿ ೩೫೪ ಜನವಸತಿ ಗ್ರಾಮಗಳು, ೧ ಮಹಾ ನಗರ ಪಾಲಿಕೆ, ೨ ಪುರ ಸಭೆ ಹಾಗೂ ೫ ನಗರ ಪಂಚಾಯತುಗಳಿವೆ[೯]. ಪ್ರಸ್ತುತ ಜಿಲ್ಲೆಯ ವ್ಯಾಪ್ತಿಗೆ ಒಳಪಟ್ಟಂತೆ ಒಂದು ಲೋಕಸಭಾ ಕ್ಷೇತ್ರ ಹಾಗೂ ೮ ವಿಧಾನ ಸಭಾ ಕ್ಷೇತ್ರಗಳಿವೆ.

ದಕ್ಷಿಣ ಕನ್ನಡ ಜಿಲ್ಲೆಯನ್ನು ಪ್ರಾಕೃತಿಕವಾಗಿ ಕರಾವಳಿ ಪ್ರದೇಶ, ಒಳನಾಡು ಪ್ರದೇಶ ಹಾಗೂ ಪಶ್ಚಿಮ ಘಟ್ಟಗಳ ಪ್ರದೇಶವೆಂದು ೩ ವಿಭಾಗಗಳಾಗಿ ವಿಂಗಡಿಸಬಹುದು[೧೦]. ಕರಾವಳಿ ಪ್ರದೇಶದಲ್ಲಿ ಸಾರಿಗೆ ಸೌಲಭ್ಯ, ಉದ್ಯೋಗ ಅವಕಾಶ ಇತ್ಯಾದಿ ಮೂಲಭೂತ ಸೌಕರ್ಯಗಳು ಹೆಚ್ಚಾಗಿರುವುದರಿಂದ ಜನಸಾಂಧ್ರತೆ ಹೆಚ್ಚಾಗಿರುತ್ತದೆ. ಇಲ್ಲಿ ಭತ್ತ ದ್ವಿದಳ ಧಾನ್ಯಗಳು ಕಬ್ಬು, ತೆಂಗು, ಇತ್ಯಾದಿ ಬೆಳೆಗಳನ್ನು ಬೆಳೆಯಲಾಗುತ್ತದೆ. ಮಂಗಳೂರು ತಾಲ್ಲೂಕು ಕರಾವಳಿ ಪ್ರದೇಶದಲ್ಲಿದೆ. ಒಳನಾಡು ಪ್ರದೇಶವು ಏರು ತಗ್ಗುಗಳಿಂದ ತುಂಬಿದ ಪ್ರದೇಶವಾಗಿದೆ. ಬಂಟ್ವಾಳ, ಪುತ್ತೂರು ಹಾಗೂ ಬೆಳ್ತಂಗಡಿ ತಾಲ್ಲೂಕಿನ ಕೆಲ ಭಾಗಗಳು ಈ ಪ್ರದೇಶದಲ್ಲಿರುತ್ತದೆ. ಇಲ್ಲಿ ತೆಂಗು, ಅಡಿಕೆ ರಬ್ಬರ್, ಇತ್ಯಾದಿ ಬೆಳೆಗಳನ್ನು ಹೆಚ್ಚಾಗಿ ಬೆಳೆಯಲಾಗುತ್ತದೆ. ಪಶ್ಚಿಮ ಘಟ್ಟ ಪ್ರದೇಶವು ಕಾಡುಗಳಿಂದ ಆವರಿಸಲ್ಪಟ್ಟಿದ್ದು ಸದಾ ಕಾಲವು ಹಚ್ಚ ಹಸುರಾಗಿ ಕಂಗೊಳಿಸುತ್ತಿರುತ್ತದೆ. ಸುಳ್ಯ ಹಾಗೂ ಬೆಳ್ತಂಗಡಿ ತಾಲ್ಲೂಕಿನ ಹೆಚ್ಚಿನ ಪ್ರದೇಶಗಳು ಈ ಪ್ರದೇಶದಲ್ಲಿವೆ[೧೧].

೨೦೦೧ ರ ಜನಗಣತಿಯ ಪ್ರಕಾರ ದಕ್ಷಿಣ ಕನ್ನಡ ಜಿಲ್ಲೆಯ ಒಟ್ಟು ಜನ ಸಂಖ್ಯೆ ೧೮.೯೬ ಲಕ್ಷ ಆಗಿದ್ದು, ಇದರಲ್ಲಿ ೯.೩೮ ಲಕ್ಷ ಗಂಡಸರು ಹಾಗೂ ೯.೫೯ ಲಕ್ಷ ಮಹಿಳೆಯರು. ಅತ್ಯಂತ ಹೆಚ್ಚಿಗೆ ಜನಸಂಖ್ಯೆ ಮಂಗಳೂರು ತಾಲ್ಲೂಕಿನಲ್ಲಿ (೮.೮೨ ಲಕ್ಷ)ದ್ದರೆ, ಅತ್ಯಂತ ಕಡಿಮೆ ಜನಸಂಖ್ಯೆ ಸುಳ್ಯ ತಾಲ್ಲೂಕಿನಲ್ಲಿದೆ. (೧.೪೧ ಲಕ್ಷ)[೧೨]. ಜನ ಸಾಂಧ್ರತೆಯಲ್ಲಿ ಜಿಲ್ಲೆಯು ರಾಜ್ಯದಲ್ಲಿ ದ್ವಿತೀಯ ಸ್ಥಾನಿಯಾಗಿದ್ದು ಪ್ರತೀ ಚ.ಕಿ.ಮೀಗೆ ೪೧೬ ಜನರಿದ್ದಾರೆ[೧೩]. ೨೦೦೧ರ ಜನಗಣತಿಯ ಅಂಕಿ

ಅಂಶಗಳ ಪ್ರಕಾರ ಜಿಲ್ಲಾ ಸಾಕ್ಷರತಾ ಪ್ರಮಾಣ ಶೇ. ೮೩.೪ ಆಗಿದ್ದು ಒಟ್ಟು ಅಕ್ಷರಸ್ಥರ ಸಂಖ್ಯೆ ೧೩.೯೨ ಲಕ್ಷವಿರುತ್ತದೆ. ಜನಗಣತಿ ೨೦೦೧ ರ ಪ್ರಕಾರ ದಕ್ಷಿಣ ಕನ್ನಡ ಜಿಲ್ಲೆಯ ಒಟ್ಟು ಜನಸಂಖ್ಯೆಯಲ್ಲಿ ಶೇ. ೮.೬೯ ಕ್ರೈಸ್ತರಿದ್ದು ಅವರ ಒಟ್ಟು ಸಂಖ್ಯಾಬಲ ೧,೬೪,೯೮೨. ಕರ್ನಾಟಕ ರಾಜ್ಯದಲ್ಲೆ ಶೇಕಡವಾರು ಲೆಕ್ಕದಲ್ಲಿ ಅತ್ಯಂತ ಹೆಚ್ಚಿನ ಪ್ರಮಾಣದಲ್ಲಿ ಕ್ರೈಸ್ತರು ನೆಲೆಸಿರುವ ಜಿಲ್ಲೆ ದಕ್ಷಿಣ ಕನ್ನಡವಾಗಿದೆ.

### ೨.೨. ಕ್ರೈಸ್ತರ ಸಂಕ್ಷಿಪ್ತ ಇತಿಹಾಸ:

ಯೇಸು ಕ್ರಿಸ್ತನ ಅನುಯಾಯಿಗಳಿಗೆ ಕ್ರೈಸ್ತರೆನ್ನುವರು. ಯೇಸು ಕ್ರಿಸ್ತನನ್ನು ಶಿಲುಬೆಗೇರಿಸಿದ ಮೇಲೆ ಪಾಶ್ಚಾತ್ಯ ಜಗತ್ತಿನಲ್ಲಿ ಕ್ರೈಸ್ತ ಧರ್ಮವು ಪ್ರಬಲವಾಗಿ ಬೆಳೆಯಿತು. ಭಾರತದಲ್ಲಿ ಕ್ರೈಸ್ತ ಧರ್ಮದ ತಳಹದಿಯನ್ನು ಯೇಸು ಕ್ರಿಸ್ತನ ಶಿಷ್ಯನಾದ ಅಪೋಸ್ತಲ ಸಂತ ಥೋಮಸನು ಸ್ಥಾಪಿಸಿದನೆಂದು ಇತಿಹಾಸದಲ್ಲಿ ಕಂಡು ಬರುತ್ತದೆ. ಅವನು ಕ್ರಿ. ಶ. ೫೨ ರಲ್ಲಿ ಸಮುದ್ರ ಮಾರ್ಗವಾಗಿ ಕೇರಳದ ಕ್ರಾಂಗನೂರಿಗೆ ಬಂದಿಳಿದರು[೧೪]. ಅಲ್ಲಿ ಉನ್ನತ ವರ್ಗದ ಕುಟುಂಬಗಳನ್ನು ಕ್ರೈಸ್ತ ಧರ್ಮದೆಡೆಗೆ ಆಕರ್ಷಿಸಿದನಲ್ಲದೆ, ಮತಾಂತರ ಹೊಂದಿದವರು ಕ್ರೈಸ್ತ ಧರ್ಮದ ಕಟ್ಟು ಪಾಡುಗಳಂತೆ ನಡೆದುಕೊಳ್ಳಲು ಉನ್ನತ ವರ್ಗದ ಜನರ ಪೈಕಿಯಲ್ಲಿ ಪಾದ್ರಿಗಳನ್ನು ಆರಿಸಿ ಜವಾಬ್ದಾರಿಯನ್ನು ನೀಡಿರುವುದು ಮತ್ತು ಪ್ರಾರ್ಥನೆಗಾಗಿ ೮ ಆರಾಧನಾ ಮಂದಿರಗಳನ್ನು ಕಟ್ಟಿರವುದು ಕಂಡು ಬರುತ್ತದೆ. ಆ ನಂತರ ಕೋರಮಂಗಲವೆಂಬಲ್ಲಿ ನೆಲೆಸಿದ ಸಂತ ಥೋಮಸರು ಹತಸಾಕ್ಷಿ ಮರಣವನ್ನು ಹೊಂದಿದ ನಂತರ ಅವರೇ ಕಟ್ಟಿಸಿದ ಪ್ರಾರ್ಥನಾ ಮಂದಿರವೊಂದರಲ್ಲಿ ಸಮಾಧಿ ಮಾಡಲಾಯಿತು ಎನ್ನಲಾಗಿದೆ[೧೫]. ಈ ವಿವರಗಳು ಪೋರ್ಚುಗೀಸರು ಆಗಮಿಸುವುದಕ್ಕಿಂತ ಮೊದಲೇ ಕ್ರೈಸ್ತ ಧರ್ಮ ಭಾರತದಲ್ಲಿ ನೆಲೆಸಲ್ಪಟ್ಟಿತ್ತು ಎಂಬುವುದನ್ನು ಸಾಕ್ಷೀಕರಿಸುತ್ತದೆ.

ಕರ್ನಾಟಕದ ಕರಾವಳಿ ಪ್ರದೇಶದಲ್ಲಿ ವಿಜಯನಗರ ಮತ್ತು ಕೆಳದಿಯ ಅರಸರ ಆಡಳಿತ ವ್ಯಾಪ್ತಿಯಲ್ಲಿ 'ರೋಮನ್ ಕೆಥೋಲಿಕ್ ಪಂಥವು ಪ್ರಸರಿಸಿತು. ಹದಿನಾರನೆಯ ಶತಮಾನದ ಮೂವತ್ತರ ದಶಕದಲ್ಲಿ ಪ್ರಾನ್ಸಿಸ್ಕನ್ ಕ್ರೈಸ್ತ ಕೆಥೋಲಿಕ ಸನ್ಯಾಸಿಗಳು ಜಿಲ್ಲೆಯಲ್ಲಿ ಮೂರು ಇಗರ್ಜಿಗಳನ್ನು ಸ್ಥಾಪಿಸಿದರು. ಈ ಇಗರ್ಜಿಗಳು ಮಂಗಳೂರಿನಲ್ಲಿರುವ ಬೋಳಾರ್ ಸಮೀಪದ

ಹ್ಯೊಗೆ ಬಜಾರ್‌ನಲ್ಲಿ ರೊಸಾರಿಯೋ ಎಂಬ ಹೆಸರಿನಲ್ಲಿ, ಕಡಲತಡಿಯ ಉಳ್ಳಾಲದಲ್ಲಿ ಮತ್ತು ಮಂಗಳೂರು ನಗರದ ಆಸು ಪಾಸಿನಲ್ಲಿರುವ ಫರಂಗಿಪೇಟೆ ಎಂಬ ಸ್ಥಳದಲ್ಲಿ ಕಟ್ಟಲ್ಪಟ್ಟಿವೆ ಎನ್ನುವುದು ಇತಿಹಾಸದ ಮೂಲಗಳು ತಿಳಿಸುತ್ತವೆ[೧೬]. ನಂತರದ ವರುಷಗಳಲ್ಲಿ ಪೋರ್ಚುಗೀಸರ ಪ್ರಭಾವ ಇಲ್ಲಿ ಇನ್ನಷ್ಟು ಬೆಳೆದಾಗ ಹೆಚ್ಚಿನ ಸಂಖ್ಯೆಯಲ್ಲಿ ಕ್ರೈಸ್ತ ಮಿಶನರಿಗಳು ಇಲ್ಲಿಗಾಗಮಿಸಿ ಕರಾವಳಿಯ ಉದ್ದಕ್ಕೂ ಹಲವು ಇಗರ್ಜಿಗಳನ್ನು ಕಟ್ಟಿ ಮತ ಪ್ರಚಾರಗೈದರು. ಕ್ರಿ. ಶ. ೧೫೬೦ ರ ತರುವಾಯ ಗೋವಾ ಪ್ರಾಂತ್ಯದಲ್ಲಿ 'ಇನ್‌ಕ್ವಿಜಿಶನ್' ಎಂಬ ಮತೀಯ ನ್ಯಾಯಾಲಯವೊಂದರ ಸ್ಥಾಪನೆಯಾಗಿ ಹಿಂದು ಮತದಿಂದ ಕ್ರೈಸ್ತ ಮತಕ್ಕೆ ಮತಾಂತರ ಹೊಂದಿದವರು, ತಮ್ಮ ಸಂಸ್ಕೃತಿ, ಭಾಷೆ, ಆಚಾರ ವಿಚಾರ, ರೀತಿ ನೀತಿ, ಸಂಪ್ರದಾಯ ಪದ್ಧತಿಗಳೆಲ್ಲವನ್ನು ತಿರಸ್ಕರಿಸಿ ಪಾಶ್ಚಾತ್ಯ ಭಾಷೆ (ಪೋರ್ಚುಗೀಸ್) ಮತ್ತು ಸಂಸ್ಕೃತಿಯನ್ನು ಕಡ್ಡಾಯವಾಗಿ ಸ್ವೀಕರಿಸಬೇಕೆಂದು ಬಲಾತ್ಕರಿಸಿದಾಗ ಸಾವಿರಾರು ಕ್ರೈಸ್ತರು ದಕ್ಷಿಣಕ್ಕೆ ಪಲಾಯನ ಮಾಡಿದ ದಾಖಲೆಗಳಿವೆ. ಅವರಲ್ಲಿ ಅನೇಕ ಮಂದಿ ಆಗಿನ ದಕ್ಷಿಣ ಕನ್ನಡದ ಗಂಗೊಳ್ಳಿ, ಕುಂದಾಪುರ, ಬಸ್ರೂರು, ಮೂಲ್ಕಿ, ಶಿರ್ವ, ಕಿರೆಂ, ಮಂಗಳೂರು, ಬಂಟ್ವಾಳ ಮುಂತಾದ ಊರುಗಳಲ್ಲಿ ಬಂದು ನೆಲೆಸಿದರು[೧೭]. ಪೋರ್ಚುಗೀಸರ ಅವೈಜ್ಞಾನಿಕ ತೆರಿಗೆ ನೀತಿ, ದಮನಕಾರಿ ಆರ್ಥಿಕ, ರಾಜಕೀಯ ಧೋರಣೆಗಳಿಂದಾಗಿ ಭ್ರಮ ನಿರಸನಗೊಂಡ ದೊಡ್ಡ ಸಂಖ್ಯೆಯ ಕೊಂಕಣಿ ಕ್ರೈಸ್ತರು ಕರ್ನಾಟಕದ ಕರಾವಳಿಗೆ ವಲಸೆ ಬಂದಿರುವುದನ್ನು ಅಧ್ಯಯನಗಳು ಧೃಡಪಡಿಸಿದೆ[೧೮]. ಕೆಳದಿಯ ಅರಸರುಗಳ ಆಡಳಿತವು ಇವರ ವಲಸೆಗೆ ಸಹಕಾರಿಯಾಗಿತ್ತು. ಕೊಂಕಣಿ ಕ್ರೈಸ್ತರಿಗೆ ಕೆಳದಿಯ ನಾಯಕರ ಸಹಕಾರದಿಂದಾಗಿ ಕೃಷಿ ಭೂಮಿ ಲಭಿಸಿದ್ದು, ಪ್ರಮುಖವಾಗಿ ಬೇಸಾಯವನ್ನೇ ಜೀವಿಸುವ ವೃತ್ತಿಯನ್ನಾಗಿ ಮಾಡಿಕೊಂಡಿರುವ ನಿದರ್ಶನಗಳು ಲಭ್ಯ. ಈ ಸಮುದಾಯಕ್ಕೆ ೧೭೮೪ ರಿಂದ ೧೭೯೯ ರೊಳಗಿನ ಟಿಪ್ಪು ಸುಲ್ತಾನರ ಆಡಳಿತ ಕಾಲವು ಸಾಕಷ್ಟು ದುರಂತಗಳನ್ನು, ಸೃಷ್ಟಿಸಿದ್ದು ಯಾತನಾಮಯವಾದ ಜೀವನವನ್ನು ನಡೆಸುವಂತೆ ಮಾಡಿದ ದಾಖಲೆಗಳಿವೆ[೧೯]. ಟಿಪ್ಪುವಿನ ಮರಣಾನಂತರ ದಕ್ಷಿಣ ಕನ್ನಡದಲ್ಲಿ ನೆಲೆಸಿದ ಕ್ರೈಸ್ತ ಜನರಿಗೆ ಬ್ರಿಟಿಷ್ ವಸಾಹತುಶಾಹಿ ಆಡಳಿತದಿಂದ ಹೊಸ ಆಯಾಮವೊಂದು ಲಭಿಸಿತು.

ಟಿಪ್ಪುವಿನ ಸೆರೆಯಿಂದ ಅಳಿದುಳಿದ ಕ್ರೈಸ್ತರು ಮರಳಿ ಬಂದಾಗ ಅನೇಕರಿಗೆ ತಮ್ಮ ಬದುಕನ್ನು ಪುನರಾರಂಭಿಸುವುದಕ್ಕೆ ಆಗಿನ ಬ್ರಿಟಿಷ್ ಆಡಳಿತ ನೆರವಾಯಿತು. ಕ್ರೈಸ್ತರಲ್ಲಿ ಅನೇಕರು

ಬ್ರಿಟೀಷರ ಕಾಲದಲ್ಲಿ ಸರಕಾರಿ ನೌಕರಿಗಳನ್ನು ಹೊಂದುವಲ್ಲಿ ಯಶಸ್ವಿಗಳಾದರು ಎನ್ನುವುದು ಗಮನಾರ್ಹ.

ಕೊಂಕಣಿ ಕ್ರೈಸ್ತ ಸಮುದಾಯದ ಜೊತೆಗೆ, ದಕ್ಷಿಣ ಕನ್ನಡದ ಜಿಲ್ಲೆಗೆ ಸೇರ್ಪಡೆಯಾದ ಇನ್ನೊಂದು ಜನಾಂಗದವರು ಪ್ರೊಟೆಸ್ಟಾಂಟ್ ಸಂಪ್ರದಾಯದ ಕ್ರಿಶ್ಚಿಯನ್ನರು. ಇವರನ್ನು ಬಾಸೆಲ್ ಮಿಶನ್ನಿನ ಕ್ರೈಸ್ತರೆಂದು, ಪ್ರಸ್ತುತ ದಕ್ಷಿಣ ಭಾರತ ಕ್ರೈಸ್ತ ಸಭೆಯವರೆಂದು ಗುರುತಿಸಲಾಗುತ್ತಿದೆ[೨೦]. ಮಂಗಳೂರಿನ ಪ್ರೊಟೆಸ್ಟಾಂಟ್ ಸಮುದಾಯಕ್ಕೆ ಸುಮಾರು ೧೭೫ ವರ್ಷಗಳ ಚರಿತ್ರೆಯಿದೆ. ಬಾಸೆಲ್ ಮಿಶನನ್ನು ಮಂಗಳೂರಿನಲ್ಲಿ ಸ್ಥಾಪಿಸಿದವರು ಜರ್ಮನ್ ಮೂಲದ ಜೋನ್ ಕ್ರಿಸ್ತೋಪ್ ಲೆಸ್ನಾರ್, ಕ್ರಿಸ್ತೋಪ್ ಲಿಯೋನರ್ಡ್ ಗ್ರೇನರ್ ಮತ್ತು ಸಾಮ್ಯುವೆಲ್ ಹೆಬಿಕ್ ಎಂಬ ಮೂವರು ಮಿಶನರಿಗಳು. ಇವರು ೧೮೩೪ ರಲ್ಲಿ ಮಂಗಳೂರಿಗೆ ಬಂದು ಬಲ್ಮಠದಲ್ಲಿ ಶಾಂತಿ ದೇವಾಲಯವನ್ನು ಸ್ಥಾಪಿಸಿದರು. ಮಂಗಳೂರಿನಲ್ಲಿ ಅವರು ಸ್ಥಳೀಯ ಭಾಷೆಗಳಾದ ಕನ್ನಡ, ತುಳು, ಕೊಂಕಣಿಗಳನ್ನು ಕಲಿತು ಕ್ರಿಸ್ತನ ಸುವಾರ್ತೆಯನ್ನು ಸಮರ್ಥವಾಗಿ ಈ ಪರಿಸರದಲ್ಲಿ ಪ್ರಚಾರ ಮಾಡಿದರು[೨೧]. ಬಡವರು, ಉತ್ತಮ ಕುಲದವರು, ಬುದ್ಧಿ ಜೀವಿಗಳು, ಹಿಂದೂ ಶಾಸ್ತ್ರ ಪಾರಂಗತರೂ ಕ್ರೈಸ್ತ ಧರ್ಮವನ್ನು ಅಂಗೀಕರಿಸಿದರು. ದಕ್ಷಿಣ ಕನ್ನಡದಲ್ಲಿ ಮಂಗಳೂರು, ಮೂಲ್ಕಿ, ಪುತ್ತೂರು ಮುಂತಾದ ಸ್ಥಳಗಳಲ್ಲಿ ದೇವಾಲಯಗಳನ್ನು ಸ್ಥಾಪಿಸಿದರು[೨೨]. ಮಂಗಳೂರಿನ ಪ್ರೊಟೆಸ್ಟಾಂಟ್ ಸಮುದಾಯಕ್ಕೆ ಸುಮಾರು ೧೭೫ ವರುಷಗಳ ಚರಿತ್ರೆಯಿದೆ[೨೩]. ಪ್ರಸ್ತುತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸಿ.ಎಸ್.ಐ ಕ್ರೈಸ್ತರ ಒಟ್ಟು ಸಂಖ್ಯೆ ೧೧,೮೨೫ ರಷ್ಟಿದೆ.

ಭಾಷೆಯ ನೆಲೆಯಲ್ಲಿ ದಕ್ಷಿಣ ಕನ್ನಡದ ಕ್ರೈಸ್ತ ಸಮುದಾಯದಲ್ಲಿ ಇನ್ನೊಂದು ಪ್ರಭೇದವನ್ನು ಗುರುತಿಸಬಹುದು. ಅವರೇ ಮಲಯಾಳಿ ಕ್ರೈಸ್ತರು. ಸುಮಾರು ಐದಾರು ದಶಕಗಳಿಂದ ಕೇರಳದ ವಿವಿಧ ಭಾಗಗಳಿಂದ ಇಲ್ಲಿಗೆ ಬಂದು ನೆಲೆಸಿದವರು. ಪುತ್ತೂರು, ಸುಳ್ಯ, ಬೆಳ್ತಂಗಡಿಯಂತಹ ಮಲೆನಾಡು ತಾಲ್ಲೂಕುಗಳಲ್ಲಿ ನೆಲೆಸಿರುವ ಇವರಲ್ಲಿ ಹೆಚ್ಚಿನವರು ಕೃಷಿಕರಾಗಿದ್ದಾರೆ. ಜಿಲ್ಲೆಯಲ್ಲಿ ಪ್ರಸ್ತುತ ಇವರ ಸಂಖ್ಯೆಯು ಒಂದು ಲಕ್ಷ ಮಿಕ್ಕಿದೆ[೨೪]. ಜಿಲ್ಲೆಯಲ್ಲಿ ಈ ಸಮುದಾಯದ ಅಡಿಯಲ್ಲಿ ನಡೆಸಲ್ಪಡುವ ಶಿಕ್ಷಣ ಸಂಸ್ಥೆಗಳು ಕೇವಲ ಬೆರಳೆಣಿಕೆಗೆ ಸೀಮಿತವಾಗಿದೆ.

ಈ ಮೇಲಿನ ಪರಿಶೀಲನೆಗಳಿಂದ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ವಾಸ್ತವ್ಯವಿರುವ ಕ್ರೈಸ್ತ ಸಮುದಾಯವು ಒಂದೇ ಸಜಾತೀಯ ಹಾಗೂ ಸಮರೂಪದವರಾಗಿರದೆ, ಭಾಷೆ, ಆಚರಣೆಯಲ್ಲಿ,

ವಿಭಿನ್ನವಾಗಿರುವುದನ್ನು ಗುರುತಿಸಲು ಸಾಧ್ಯವಾಗುತ್ತದೆ. ಒಟ್ಟು ಸಮಾಜದ ಕೊಡುಗೆಗಳೂ ಭಿನ್ನವಾಗಿರುತ್ತದೆ. ಅವುಗಳನ್ನು ಮುಂದೆ ವಿಶ್ಲೇಷಿಸಲಾಗುತ್ತದೆ.

### ೨.೩. ಜಿಲ್ಲೆಯ ಬೆಳವಣಿಗೆಯಲ್ಲಿ ಕ್ರೈಸ್ತರ ಪಾತ್ರ

ಜಿಲ್ಲೆಯ ಸರ್ವಾಂಗೀಣ ಅಭಿವೃದ್ಧಿಗೆ ಕ್ರೈಸ್ತರ ಕೊಡುಗೆಗಳನ್ನು ಹಲವು ಆಯಾಮಗಳಲ್ಲಿ ಕಂಡುಕೊಳ್ಳುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಕಳೆದ ೨ ಶತಮಾನಗಳಲ್ಲಿ ಶಿಕ್ಷಣ ಮತ್ತು ವೈದ್ಯಕೀಯ ರಂಗಗಳಲ್ಲಿ ಅವರ ಕೊಡುಗೆಗಳು ಅಪಾರವೆನ್ನುವುದು ಹಲವು ದಾಖಲೆಗಳು ಸಾಕ್ಷೀಕರಿಸಿವೆ. ‘‘ಶಿಕ್ಷಣ ಮತ್ತು ವೈದ್ಯಕೀಯ ರಂಗಗಳಲ್ಲಿ ಕ್ರೈಸ್ತಾನುಯಾಯಿಗಳು ಕಳೆದ ಎರಡು ಶತಮಾನಗಳಲ್ಲಿ ಮಾಡಿದ ಸೇವೆ ಅಮೋಘವಾದುದು. ಈ ಕ್ರೈಸ್ತ ಕಾನ್ವೆಂಟ್ ಮತ್ತು ಇತರ ಶಿಕ್ಷಣ ಸಂಸ್ಥೆಗಳು ಉನ್ನತ ಗುಣಮಟ್ಟದ ಶಿಕ್ಷಣಕ್ಕೆ ಪ್ರಸಿದ್ಧವಾಗಿದೆ. ತುಳುನಾಡಿನ ಉದ್ದಗಲಕ್ಕೂ ಕ್ರೈಸ್ತ ಶಿಕ್ಷಣ ಸಂಸ್ಥೆಗಳು ಹರಡಿವೆ. ಸರಕಾರಿ ಶಾಲೆಗಳನ್ನು ಬಿಟ್ಟರೆ ನಮ್ಮ ಜಿಲ್ಲೆಯಲ್ಲಿ ಕ್ರೈಸ್ತ ಕೊಂಕಣಿ ಶಿಕ್ಷಣ ಸಂಸ್ಥೆಗಳು ಅತ್ಯಧಿಕ ಸಂಖ್ಯೆಯಲ್ಲಿದ್ದು ಈ ನಾಡಿನ ಜನಜೀವನದಲ್ಲಿ ಕ್ರಾಂತಿಕಾರಕ ಬದಲಾವಣೆ ತರಲು ಅಮೋಘ ಸೇವೆ ಸಲ್ಲಿಸಿವೆ ಎಂದರೆ ಅತಿಶಯೋಕ್ತಿಯಲ್ಲ’’[೨೫]. ಜಿಲ್ಲೆಯ ಅಭಿವೃದ್ಧಿಗೆ ಕಾರಣವಾದ ಕ್ರೈಸ್ತ ಧರ್ಮದ ಸೇವೆಯನ್ನು ಮುಖ್ಯವಾಗಿ ವಿದ್ಯಾಕ್ಷೇತ್ರ, ಆರೋಗ್ಯ ಕ್ಷೇತ್ರ, ಕೈಗಾರಿಕಾ ಕ್ಷೇತ್ರ, ಸಮಾಜ ಸೇವೆ ಮತ್ತು ಆರ್ಥಿಕ ಅಭಿವೃದ್ಧಿ ಯೋಜನೆಗಳೆಂಬ ಶೀರ್ಷಿಕೆಯಡಿಯಲ್ಲಿ ಚರ್ಚಿಸಬಹುದಾಗಿದೆ.

#### ೨.೩.೧. ಶಿಕ್ಷಣ ಕ್ಷೇತ್ರ

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಆಧುನಿಕ ಮಾದರಿಯ ಶಾಲೆಗಳನ್ನು ಮೊತ್ತಮೊದಲು ಸ್ಥಾಪಿಸಿದ ಕೀರ್ತಿ ಕ್ರೈಸ್ತರಿಗೆ ಸಲ್ಲುತ್ತದೆ. ಕರ್ನಾಟಕದಲ್ಲಿ ಇಂದು ದಕ್ಷಿಣ ಕನ್ನಡ ಜಿಲ್ಲೆಯು ಸಾಕ್ಷರತೆಯಲ್ಲೂ ವಿದ್ಯಾ ಮಟ್ಟದಲ್ಲಿಯೂ ಅತ್ಯಂತ ಮುಂದುವರಿದ ಜಿಲ್ಲೆಯೆಂಬ ಮಹತ್ವದ ಸಾಧನೆಗೆ ಅಡಿಪಾಯವನ್ನು ಹಾಕಿದವರು ಬಾಸೆಲ್ ಮಿಶನ್ನಿನವರು. ಆ ದಿನಗಳಲ್ಲಿ ವಿದ್ಯಾಭ್ಯಾಸವು ಮೇಲ್ ಜಾತಿಯವರಿಗೂ ಪುರುಷವರ್ಗಕ್ಕೂ ಸೀಮಿತವಾಗಿದ್ದ ಕಾಲವದು. ಸ್ತ್ರೀಯರಿಗೆ, ಸಮಾಜದ ಕೆಳಮಟ್ಟದಲ್ಲಿದ್ದ ಜನರಿಗೆ

ವಿದ್ಯಾಭ್ಯಾಸದ ಲಭ್ಯತೆ ನಮ್ಮ ಸಮಾಜದ ಪ್ರಗತಿಯಲ್ಲಿ ಒಂದು ಮಹತ್ತರ ಹೆಜ್ಜೆ. ಸಹಸ್ತಾರು ಮಂದಿ ಈ ವಿದ್ಯಾ ಸಂಸ್ಥೆಗಳಲ್ಲಿ ಕಲಿತರು ಮಾತ್ರವಲ್ಲದೆ ಸಮಾಜದ ಉನ್ನತ ಸ್ಥಾನದಲ್ಲಿರುವವರು ಈಗಲೂ ಈ ಶಾಲೆಗಳನ್ನು ಕೃತಜ್ಞತೆಯಿಂದ ಸ್ಮರಿಸಿಕೊಳ್ಳುವುದುಂಟು[೨೬].

೧೮೩೬ ನೆಯ ಇಸವಿಯಲ್ಲಿ ಬಾಸೆಲ್ ಮಿಶನ್ನಿನ ಸಾಮುವೆಲ್ ಹೆಬಿಕ್‌ರವರು ಮಂಗಳೂರಿನ ಮಿಶನ್ ಹೈಸ್ಕೂಲನ್ನೂ ಸ್ಥಾಪಿಸಿದರು. "೧೮೩೪ ರಲ್ಲಿ ದಕ್ಷಿಣಕನ್ನಡ ಜಿಲ್ಲೆಗೆ ಬಂದ ಪ್ರೋಟೆಸ್ಟಾಂಟ್ ಬಾಸೆಲ್ ಮಿಶನ್ನಿನವರು ಶಿಕ್ಷಣಪ್ರಸಾರ ಮುದ್ರಣ, ಸಮಾಜ ಸೇವೆಗಳ ಕ್ಷೇತ್ರದಲ್ಲಿ ತೋರಿದ ಉತ್ಸಾಹ, ಹಲವು ಶತಮಾನಗಳಿಂದ ಇಲ್ಲಿ ನೆಲೆ ನಿಂತ ಕೆಥೋಲಿಕರ ಚಟುವಟಿಕೆಗೂ ಚಾಲನೆ ನೀಡಿತು[೨೭]. ೧೮೫೦ ನಂತರದ ವರ್ಷಗಳಲ್ಲಿ ಮಂಗಳೂರಿನ ರುಜಾರಿಯೋ ಚರ್ಚ್, ಮಿಲಾಗ್ರಿಸ್ ಚರ್ಚ್, ಕಲ್ಯಾಣಪುರ ಚರ್ಚ್, ಕಿರೆಂ, ಬಜ್ಪೆ, ಪೇಜಾವರ ಮುಂತಾದ ಕಡೆಗಳಲ್ಲಿ ಪ್ರಾಥಮಿಕ ಶಾಲೆಗಳನ್ನು ಆರಂಭಿಸಿದರು. ಆದರೆ ಒಂದು ವ್ಯವಸ್ಥಿತ ರೀತಿಯಲ್ಲಿ ಆಧುನಿಕ ಮಾದರಿಯ ಶಾಲೆಗಳನ್ನು ತೆರೆದು ವಿದ್ಯಾಕ್ಷೇತ್ರದಲ್ಲಿ ದುಡಿಯಲು ಕೆಥೋಲಿಕ್ ಕ್ರೈಸ್ತರು ಆರಂಭಿಸಿದ್ದು ೧೮೭೦ರ ನಂತರ. ೧೮೭೦ ರಲ್ಲಿ "ಅಪೋಸ್ತಾಲಿಕ್ ಕಾರ್ಮೆಲ್" ಎಂಬ ಸ್ತ್ರೀಯರ ಧಾರ್ಮಿಕ ಸಂಸ್ಥೆಯು ಬೋಳಾರಿನಲ್ಲಿರುವ 'ಸೈಂಟ್ ಆ್ಯನ್‌ಸ್ಕೂಲ್' ಸ್ಥಾಪಿಸಿದರು. ಇದು ಇಂಗ್ಲಿಷ್ ಮಾಧ್ಯಮದಲ್ಲಿ ಪ್ರಥಮ ಹೆಮ್ಮಕ್ಕಳ ಶಾಲೆ. ನಂತರದ ದಿನಗಳಲ್ಲಿ ೧೮೮೫ರಲ್ಲಿ ಡೊಂಗರಕೇರಿಯಲ್ಲಿ ವಿಕ್ಟೋರಿಯಾ ಗರ್ಲ್ಸ್ ಹೈಸ್ಕೂಲ್, ಫಳ್ನೀರಿನಲ್ಲಿರುವ ಸೈಂಟ್ ಮೇರಿಸ್ ಹೈಸ್ಕೂಲು ೧೮೯೯ರಲ್ಲಿ ಪ್ರಾರಂಭಿಸಿಲಾಯಿತು. ೧೯೨೧ರಲ್ಲಿ ಬೆಂದೂರಿನಲ್ಲಿ ಭಾರತದಲ್ಲೇ ಸ್ತ್ರೀಯರ ಮೊದಲನೆಯ ಪ್ರಥಮ ದರ್ಜೆಯ ಕಾಲೇಜು – ಸೈಂಟ್ ಆಗ್ನೆಸ್ ಕಾಲೇಜು ಸ್ಥಾಪಿಸಲ್ಪಟ್ಟಿತು. ಹೀಗೆ ದಕ್ಷಣ ಕನ್ನಡ ಜಿಲ್ಲೆಯಲ್ಲಿ ಮಹಿಳೆಯರ ವಿದ್ಯಾಭ್ಯಾಸಕ್ಕೆ ಬುನಾದಿ ಹಾಕಿದ ಖ್ಯಾತಿ ಅಪೋಸ್ತೋಲಿಕ್ ಕಾರ್ಮೆಲ್ ಸಂಸ್ಥೆಗೆ ಸಲ್ಲುತ್ತದೆ[೨೮].

ದಕ್ಷಿಣ ಕನ್ನಡ ಜಿಲ್ಲೆಯ ಜನತೆಗೆ ಕಾಲೇಜು ವಿದ್ಯಾಭ್ಯಾಸದ ಅವಕಾಶವನ್ನು ಕಲ್ಪಿಸಿಕೊಟ್ಟವರು ಈಗ ಮಂಗಳೂರಿನ ಜೆಸ್ವಿಟ್ ಧರ್ಮ ಗುರುಗಳು. ಇವರು ೧೮೮೦ ರಲ್ಲಿ ಸಂತ ಅಲೋಶಿಯಸ್ ಕಾಲೇಜ್, ಹೈಸ್ಕೂಲು ಮತ್ತು ಪ್ರಾಥಮಿಕ ಶಾಲೆಗಳನ್ನು ಆರಂಭಿಸಿದರು. ೧೯೩೨ ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಉದ್ದಗಲಕ್ಕೆ ಕೆಥೋಲಿಕರು ನಡೆಸುವ ೧೦೩ ಪ್ರಾಥಮಿಕ, ೦೮ ಪ್ರೌಢ

ಪ್ರಾಥಮಿಕ, ೦೫ ಹೈಸ್ಕೂಲುಗಳು ಮತ್ತು ೨ ಕಾಲೇಜುಗಳು ಆಸ್ತಿತ್ವದಲ್ಲಿದ್ದವು[೬೯]. ೨೦೦೬ ರಲ್ಲಿ ಕಥೋಲಿಕ್ ಶಿಕ್ಷಣ ಮಂಡಳಿಯ (ರಿ) ಮಂಗಳೂರು ಇದರ ನೇರ ಆಡಳಿತಕ್ಕೊಳಪಟ್ಟಂತೆ ಆವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ವ್ಯಾಪ್ತಿಯ ಅಡಿಯಲ್ಲಿ ಒಟ್ಟು ೨೨೬ ಶಿಕ್ಷಣ ಸಂಸ್ಥೆಗಳಿದ್ದು ಸುಮಾರು ೬೦,೦೦೦ ಕ್ಕಿಂತ ಮಿಕ್ಕಿ ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದಾರೆ. ಮತ್ತು ಸುಮಾರು ೨,೨೦೦ ಶಿಕ್ಷಕರು ಮತ್ತು ೧೨೫ ಜನ ಶಿಕ್ಷಕೇತರೂ ಕಾರ್ಯ ನಿರ್ವಹಿಸುತ್ತಿದ್ದಾರೆ[೭೦]. ಈ ಪಟ್ಟಿಯಲ್ಲಿ ಸಂತ ಅಲೋಶಿಯಸ್ ಶಿಕ್ಷಣ ಸಂಸ್ಥೆಗಳು, ಸಂತ ಆಗ್ನೇಸ್ ಶಿಕ್ಷಣ ಸಂಸ್ಥೆಗಳು ರೋಶನಿ ನಿಲಯ ಕಾಲೇಜು, ಸಂತ ಜೋಸೆಫರ ಇಂಜಿನಿಯರಿಂಗ್ ಕಾಲೇಜು ವಾಮಂಜೂರು ಮತ್ತು ಫಾದರ್ ಮುಲ್ಲರ್ಸ್ ವೈದ್ಯಕೀಯ ಕಾಲೇಜಿಗಳು ಮೇಲಿನ ಪಟ್ಟಿಯಲ್ಲಿ ಸೇರಿಸಲಾಗಿಲ್ಲ. ಪ್ರಸ್ತುತ ಜಿಲ್ಲೆಯಲ್ಲಿ ಪ್ರೊತೆಸ್ತಾಂತ ಕ್ರೈಸ್ತರಿಂದ ನಡೆಸಲ್ಪಡುವ ಶಿಕ್ಷಣ ಸಂಸ್ಥೆಗಳ ಒಟ್ಟು ಸಂಖ್ಯೆ ೧೫ ಅದರಲ್ಲಿ ೧೧ ಪ್ರಾಥಮಿಕ ಶಾಲೆಗಳು, ೩ ಪ್ರೌಢ ಶಾಲೆಗಳು ಹಾಗೂ ಒಂದು ಜೂನಿಯರ್ ಕಾಲೇಜು ಸೇರಿವೆ. ಇದಲ್ಲದೆ ಪುರುಷರಿಗಾಗಿ ಹೆಬಿಕ್ ಟೆಕ್ನಿಕಲ್ ಟ್ರೈನಿಂಗ್ ಇನ್‌ಸ್ಟಿಟ್ಯೂಟ್ ಎಂಬ ಶ್ರೇಷ್ಠ ಮಟ್ಟದ ತಾಂತ್ರಿಕ ವಿದ್ಯಾಲಯವನ್ನು ಅವರು ನಡೆಸುತ್ತಾರೆ. ಪ್ರೊಟೆಸ್ಟಾಂಟ್ ಕ್ರೈಸ್ತರ ವಿದ್ಯಾ ಸಂಸ್ಥೆಗಳು ಕರ್ನಾಟಕ ಕ್ರಿಶ್ಚನ್ ಎಜ್ಯುಕೇಶನ್ ಸೊಸೈಟಿ ಎಂಬ ಸಂಸ್ಥೆಯ ಆಡಳಿತಕ್ಕೊಳಪಟ್ಟಿದೆ.

ಈ ಮೇಲಿನ ವಿವರಗಳಿಂದ ಶಿಕ್ಷಣ ಕ್ಷೇತ್ರಕ್ಕೆ ಕ್ರೈಸ್ತರ ಕೊಡುಗೆ ಅದ್ವಿತೀಯವೆನ್ನುವುದು ಒಪ್ಪಿಕೊಳ್ಳಲೇ ಬೇಕು. ಸ್ವಾತಂತ್ರ್ಯ ಪೂರ್ವದಲ್ಲಿ ಮಿಶನರಿ ಶಾಲೆಗಳಡಿಯಲ್ಲಿ ದೊರೆತಂತಹ ಪಾಶ್ಚಾತ್ಯ ಶಿಕ್ಷಣ ಕ್ರಮದಿಂದಾಗಿ ಈ ಜಿಲ್ಲೆಯ ಸಮಾಜದಲ್ಲಿ ತನ್ನತನದ ಜಾಗೃತಿಗೆ ಕಾರಣವಾಗಿದೆ. ಪಾಶ್ಚಾತ್ಯ ಶಿಕ್ಷಣದಿಂದ ನವೋದಯ, ಉದಾರವಾದ ಮತ್ತು ಪ್ರಜಾತಂತ್ರದ ಕಲ್ಪನೆಯ ಪ್ರಸಾರಕ್ಕೆ ಅನುಕೂಲಕರವಾದ ವಾತಾವರಣದ ಸೃಷ್ಟಿಯಾಯಿತು[೭೧]. ಅಂದು ಮೇಲ್ ಜಾತಿಯವರಿಗಷ್ಟೆ ಮೀಸಲಾಗಿದ್ದ ವಿದ್ಯಾಭ್ಯಾಸವು ಜಾತಿಭೇದ, ಲಿಂಗ ಭೇಧವಿಲ್ಲದೆ ಎಲ್ಲರಿಗೂ ದೊರೆಯುವಂತಾದುದು ಬಾಸೆಲ್ ಮಿಷನ್ನಿನವರಿಂದ ಎನ್ನುವುದು ಗಮನಾರ್ಹ. ಕ್ರೈಸ್ತ ಶಿಕ್ಷಣ ಸಂಸ್ಥೆಗಳು ೧೮೫೦ ರಿಂದ ಇಲ್ಲಿಯ ತನಕ ಜಾತಿ, ಮತ, ಧರ್ಮಗಳ ಭೇದವಿಲ್ಲದೆ ಸಮಾಜದ ಎಲ್ಲಾ ವರ್ಗದ ಜನರಿಗೆ ಶಿಕ್ಷಣದ ಅವಕಾಶವನ್ನು ಒದಗಿಸಿ ಕೊಡುತ್ತಾ ಬಂದಿದೆ. ಸಾಮಾನ್ಯ ಶಿಕ್ಷಣದಿಂದ ತಾಂತ್ರಿಕ ಶಿಕ್ಷಣ ಅಥವಾ ವೃತ್ತಿ ಆಧಾರಿತ ಶಿಕ್ಷಣದ ಸೌಲಭ್ಯಗಳು ಇವರಿಂದ ಪ್ರಾರಂಭಿತಗೊಂಡವು. ೧೯೮೦ ಹಾಗೂ

೯೦ ರ ದಶಕದಲ್ಲಿ ಜಿಲ್ಲೆಯಲ್ಲಿ ಉನ್ನತ ಶಿಕ್ಷಣದ ಮೇಲೆ ಕ್ರೈಸ್ತರು ತಮ್ಮ ಹತೋಟಿಯನ್ನು ಕಳೆದು ಕೊಂಡಿದ್ದಾರೆ. ಏಕೆಂದರೆ ಈ ದಿನಗಳಲ್ಲಿ ಲಿಬರಲ್ ಎಜ್ಯುಕೇಶನ್‌ಗಿಂತ ವೃತ್ತಿಯಾಧಾರಿತ (ಮೆಡಿಕಲ್ ಇಂಜಿನಿಯರ್‌ನಂತಹ) ಶಿಕ್ಷಣಕ್ಕೆ ಹೆಚ್ಚಿಗೆ ಮಹತ್ವ ಬಂತು. ಹಾಗೂ ಈ ದಿನಗಳಲ್ಲಿ ಶಿಕ್ಷಣದ ವ್ಯಾಪಾರೀಕರಣವಾಗುತ್ತಿದೆ. ಈ ರೀತಿಯ ಲಾಭದಾಯಕ ಶಿಕ್ಷಣ ಸಂಸ್ಥೆಗಳು ಖಾಸಗಿ ರಂಗದ ಹಿಡಿತದಲ್ಲಿರುವುದನ್ನು ಕಾಣುತ್ತೇವೆ. ಇಂಥಹ ಶಿಕ್ಷಣ ಸಂಸ್ಥೆಗಳನ್ನು ನಡೆಸಲು ಸರಕಾರದ ಅನುದಾನವೇ ಬೇಕಿಲ್ಲ. ಜಾಗತೀಕರಣದ ಸಂದರ್ಭದಲ್ಲಿ ಸರಕಾರದ ಉನ್ನತ ಶಿಕ್ಷಣ ನೀತಿಯಲ್ಲಿ ಬದಲಾವಣೆಯನ್ನು ಇಲ್ಲಿ ಗಮನಿಸಬೇಕಾಗುತ್ತದೆ. ದಕ್ಷಿಣ ಕನ್ನಡದ ಮಟ್ಟಿಗೆ ಹೇಳುವುದಾದರೆ ಶಿಕ್ಷಣ ಕ್ಷೇತ್ರದಲ್ಲಿ ಕ್ರೈಸ್ತರು ಒಂದು ಕ್ರಾಂತಿಕಾರಕ ಕೊಡುಗೆ ನೀಡಿದ್ದಾರೆ, ಮಾತ್ರವಲ್ಲದೆ ಇತರ ಶಿಕ್ಷಣ ಸಂಸ್ಥೆಗಳಿಗೆ ಒಂದು ಅನುಕರಣೀಯ ಮಾದರಿಯಾಗಿದ್ದವು ಎಂದರೆ ಅತಿಶಯೋಕ್ತಿಯಲ್ಲ. ಕ್ರೈಸ್ತ ಮಿಶನರಿಗಳು ಅನಕ್ಷರತೆಯನ್ನು ಹೋಗಲಾಡಿಸಿ, ಮೂಢ ನಂಬಿಕೆಗಳಿಂದ ಮುಕ್ತವಾದ ಹಾಗೂ ನೈತಿಕ ಮೌಲ್ಯಗಳಿಂದ ಸತ್ವಭರಿತವಾದ ಸಮಾಜ ನಿರ್ಮಾಣ ಮಾಡುವ ಸದುದ್ದೇಶದಿಂದ ಶಿಕ್ಷಣಕ್ಕೆ ಹೆಚ್ಚಿನ ಒತ್ತನ್ನು ನೀಡಿದ್ದರು ಎನ್ನುವುದು ಶೈಕ್ಷಣಿಕ ಸಂಸ್ಥೆಗಳು ಸಾಕ್ಷೀಕರಿಸಿದೆ. ಶಿಕ್ಷಣ ಕ್ಷೇತ್ರಕ್ಕೆ ಅವರು ನೀಡಿದ ಚಾಲನೆ ಆಧುನಿಕ ದಕ್ಷಿಣ ಕನ್ನಡವನ್ನು ರೂಪಿಸುವಲ್ಲಿ ಬಹಳಷ್ಟು ಪ್ರಾಮುಖ್ಯ ಪಾತ್ರವನ್ನು ನಿಭಾಯಿಸಿದೆ ಎಂದರೆ ತಪ್ಪಾಗಲಾರದು.

**೨.೩.೨. ಸಾಹಿತ್ಯ ಕ್ಷೇತ್ರ**

ಹೊಸಗನ್ನಡದ ಅರುಣೋದಯಕ್ಕೆ ಬಾಸೆಲ್ ಮಿಷನ್ನಿನ ಕೊಡುಗೆ ಅಪಾರ. ಕನ್ನಡದ ಸರ್ವಕಾಲಿಕ ಶ್ರೇಷ್ಠವಾದ ನಿಘಂಟನ್ನು ಡಾ. ಫರ್ಡಿನೆಂಡ್ ಕಿಟ್ಟೆಲ್ ರಚಿಸಿದ್ದಾರೆ. ಹಾಗೇ ತುಳು ಭಾಷೆಯ ನಿಘಂಟನ್ನು ರೆ.ಎ. ಮೇನರ್ ರಚಿಸಿದ್ದಾರೆ. ನಮ್ಮ ಪುರಾಣ ಇತಿಹಾಸಗಳನ್ನು ಪ್ರಥಮವಾಗಿ ವೈಜ್ಞಾನಿಕವಾಗಿ ಅಚ್ಚು ಹಾಕಿಸಿದ ಕೀರ್ತಿ ಸಹ ಅವರಿಗೆ ಸಲ್ಲುತ್ತದೆ. ಕನ್ನಡದಲ್ಲಿ ಪತ್ರಿಕೋದ್ಯಮವನ್ನು ಪ್ರಥಮವಾಗಿ ಆರಂಭಿಸಿದವರೂ ಅವರೇ ಆಗಿದ್ದಾರೆ[೩೨]. ಕನ್ನಡ ಭಾಷೆಯ ಮೊತ್ತ ಮೊದಲಿನ ವಾರ್ತಾ ಪತ್ರಿಕೆ "ಮಂಗಳೂರು ಸಮಾಚಾರ" ಎಂಬ ಶಿರೋನಾಮೆಯಲ್ಲಿ ಬಾಸೆಲ್ ಮಿಷನ್ನಿನವರಿಂದ ೧೮೪೩ ರಲ್ಲಿಯೇ ಪ್ರಕಟವಾಯಿತು. ಕ್ರಿಸ್ತಾನುಜಾ ವಾತ್ಸಾ ಎಂಬ

ಸಂಸ್ಕೃತ ಪಂಡಿತರೂ ದೇಶೀಯ ಕ್ರೈಸ್ತ ಬೋಧಕರೂ ೧೮೮೦ ರಲ್ಲಿ ಪ್ರಪ್ರಥಮ ಸಂಸ್ಕೃತ ವ್ಯಾಕರಣ ಗ್ರಂಥವನ್ನು ಕನ್ನಡದಲ್ಲಿ ಪ್ರಕಟಿಸಿದರು.

ಕನ್ನಡದ ಲಿಪಿ ಸುಧಾರಣೆಯಲ್ಲೂ ಡಾ. ಮೋಗ್ಲಿಂಗ್‌ರವರ ಪ್ರಯತ್ನ ಸ್ಮರಣೀಯ. "ದಾಸರ ಪದಗಳು" ಎಂಬ ಕಾವ್ಯ ಪುಸ್ತಕ ೧೮೫೦ ರಲ್ಲಿ ಕಲ್ಲಚ್ಚಿನಲ್ಲಿ ಮುದ್ರಿಸಲ್ಪಟ್ಟಿತು. ಇದೇ ರೀತಿ 'ಕನ್ನಡ ಗಾದೆಗಳು', 'ಬಸವ ಪುರಾಣ' ಇನ್ನೂ ಅನೇಕ ಕನ್ನಡದ ಪ್ರಾಚೀನ ಸಾಹಿತ್ಯಗಳನ್ನು ಬಾಸೆಲ್ ಮಿಷನರಿಗಳಿಂದ ಬಾಸೆಲ್ ಮಿಷನ್ ಪ್ರೆಸ್ಸಿನಲ್ಲಿ ಮುದ್ರಿಸಲ್ಪಟ್ಟವು. ಇಷ್ಟೊಂದು ಅಮೋಘವಾದ ಸೇವೆಯನ್ನು ಮಾಡಲು ಅವರಿಗೆ ನೆರವಾದುದು ಅವರು ಮಂಗಳೂರಿನಲ್ಲಿ ೧೮೪೧ ರಲ್ಲಿ ಸ್ಥಾಪಿಸಿದ ಬಾಸೆಲ್ ಮಿಷನ್ ಮುದ್ರಣಾಲಯ. ೧೮೫೧ ರಲ್ಲಿ ಮುದ್ರಣಕಾರ ಪ್ಲೆಬೆಸ್ಟ್‌ನ ನೇತೃತ್ವದಲ್ಲಿ ಆಧುನಿಕ ಮುದ್ರಣ ವಿಧಾನಗಳನ್ನು ಅಳವಡಿಸಿದ ಬಾಸೆಲ್ ಮಿಷನ್ ಮುದ್ರಣಾಲಯ ತನ್ನ ಉತ್ಕೃಷ್ಟ ಮಟ್ಟದ ಮುದ್ರಣದಿಂದಾಗಿ ದೇಶದಲ್ಲೆಲ್ಲಾ ಖ್ಯಾತಿಯನ್ನು ಪಡೆಯಿತು. ಅಂದಿನ ಬ್ರಿಟೀಷ್ ಸರಕಾರ ತಮ್ಮ ವಿದ್ಯಾ ಶಾಲೆಗಳಿಗೆ ಬೇಕಾದ ಪಠ್ಯಪುಸ್ತಕಗಳನ್ನು ಇಲ್ಲಿಯೇ ಛಾಪಿಸುತಿತ್ತು. ದಕ್ಷಿಣ ಕನ್ನಡ ಹಾಗೂ ಉಡುಪಿ ಜಿಲ್ಲೆಗಳ 'ಅಕ್ಷರ ಕ್ರಾಂತಿ' ಗೆ ಬಾಸೆಲ್ ಮಿಷನ್ ಮುದ್ರಣ ಮತ್ತು ಪ್ರಕಾಶನ ಕಾರ್ಯ ಸರಿಸಾಟಿಯಿಲ್ಲದ ಕೊಡುಗೆ ನೀಡಿದೆಯೆಂಬುದರಲ್ಲಿ ಸಂದೇಹವಿಲ್ಲ[೩೩].

ಪ್ರಕಾಶನ ಕ್ಷೇತ್ರದಲ್ಲಿ ಬಾಸೆಲ್ ಮಿಷನ್ ಅಂದಿನ ದಕ್ಷಿಣ ಕನ್ನಡ ಜಿಲ್ಲೆಯಲ್ಲೇ ಮೊದಲನೆಯದು, ಪಂಚಾಂಗದಿಂದ ಕೋಷ್ಟಕದವರೆಗೆ, ಕಾವ್ಯದಿಂದ ವಿಜ್ಞಾನದವರೆಗೆ ಅವರ ಪ್ರಕಟನಾ ವ್ಯವಸಾಯ ಮುಂದುವರೆದಿತ್ತು. ಇವರು ಅನುವಾದ ಸಾಹಿತ್ಯ, ಪ್ರಾಚೀನ ಕಾವ್ಯ, ಶಬ್ದಕೋಶ ಛಂದಸ್ಸು, ವ್ಯಾಕರಣ. ನಾನಾರ್ಥ ಕೋಶ ಸಂಕಲನಗಳು, ಚಿತ್ರಮಯ ಪ್ರದೇಶ–ಪರಿಚಯ, ಪಠ್ಯ ಪುಸ್ತಕಗಳು, ಚಿತ್ರಗಳು, ಬಾಲ ಸಾಹಿತ್ಯ, ಹೀಗೆ ಹಲವಾರು ಬಗೆಯ ಪ್ರಕಟಣೆಗಳು ಇವರಿಂದ ಹೊರ ಬಂದವು[೩೪].

ತುಳು ಸಾಹಿತ್ಯಾಭಿವೃದ್ಧಿಗೂ ಬಾಸೆಲ್ ಮಿಷನ್ ಅಪೂರ್ವ ಕೊಡುಗೆಯನ್ನಿತ್ತಿದೆ. ಡಾ. ಹಾವನೂರ್‌ರವರು ಹೇಳುವಂತೆ ತುಳು ಭಾಷೆಗೆ ಗ್ರಂಥ ಸ್ವರೂಪವನ್ನಿತ್ತು ಸಾಹಿತ್ಯಕ್ಕೆ ಮನ್ನಣೆಯನ್ನು ಒದಗಿಸಿ ಕೊಟ್ಟ ಶ್ರೇಯಸ್ಸು ಬಾಸೆಲ್ ಮಿಷನ್‌ವರಿಗೆ ಸಲ್ಲಬೇಕು. ೧೮೭೨ರಲ್ಲಿ ಬಾಸೆಲ್ ಮಿಷನ್ನಿನ ವತಿಯಿಂದ ತುಳು ವ್ಯಾಕರಣ ಗ್ರಂಥ ರಚಿಸಲ್ಪಟ್ಟಿತು ಮತ್ತು ೧೮೮೮ರಲ್ಲಿ

ತುಳು – ಇಂಗ್ಲೀಷ್ ನಿಘಂಟನ್ನು ಪ್ರಕಟಿಸಿದರು. ತುಳು ಪಾಡ್ದನದ ಬಗ್ಗೆ ಮ್ಯಾನರನ ಸಂಶೋಧನೆ ಅತಿ ಮಹತ್ವವುಳ್ಳದ್ದಾಗಿದೆ[೬೫].

ದಿವಂಗತ ಡಾ. ಹಾ. ಮಾ, ನಾಯಕರ ನುಡಿಗಳಲ್ಲಿ ಹೇಳುವುದಾದರೆ "ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ೧೯ ನೆಯ ಶತಮಾನದ ಚಟುವಟಿಕೆಗಳು ವಿಶಿಷ್ಟವಾದುವು. ಮಿಷನರಿಗಳ ಕಾರ್ಯ ಚಟುವಟಿಕೆಗಳೇ ಈ ವೈಶಿಷ್ಟ್ಯಕ್ಕೆ ಕಾರಣ. ಪ್ರಾಚೀನ ಗ್ರಂಥಗಳ ಶುದ್ಧ ಪಾಠಗಳನ್ನು ಸಂಪಾದಿಸಿ ಪ್ರಕಟಿಸುವುದು, ಪಾಂಡಿತ್ಯದ ಪರಿಕರಗಳಾದ ನಿಘಂಟು, ವ್ಯಾಕರಣಗಳನ್ನು ಸಿದ್ದಪಡಿಸುವುದು, ಭಾಷಾ ಭೋದನೆಗೆ ಅಗತ್ಯವಾದ ಪಠ್ಯ ಪುಸ್ತಕಗಳನ್ನು ರೂಪಿಸುವುದು, ಸಾಹಿತ್ಯೇತರ ಗ್ರಂಥಗಳನ್ನು ದೇಶ ಭಾಷೆಗಳಲ್ಲಿ ಹೊರತರುವುದು, ಸಾಹಿತ್ಯ ಸಂಸ್ಕೃತಿ ಸಂಬಂಧವಾದ ಪುಸ್ತಕಗಳನ್ನು ಪ್ರಕಟಿಸುವುದು ಇವೇ ಮುಂತಾದ ಕನ್ನಡ ಅವೆರೆಗೆ ಕಂಡರಿಯದ ಕೆಲಸಗಳನ್ನು ಈ ಮಿಷನರಿಗಳು ಹಾಗೂ ವೀದೇಶೀ ಅಧಿಕಾರಿಗಳು ಶ್ರದ್ಧೆ ನಿಷ್ಠೆಗಳಿಂದ ಕೈಗೊಂಡರು. ಅವರು ಮಾಡಿದ ಕೆಲಸಗಳನ್ನು ಮೀರುವುದು ನೂರು ವರ್ಷಗಳ ನಂತರವೂ ನಮಗೆ ಸಾಧ್ಯವಾಗಿಲ್ಲವೆನ್ನುವುದು ಅವರ ಕೆಲಸದ ಘನ ಮಹತ್ವವನ್ನು ತೋರಿಸುತ್ತದೆ. ಹೊಸ ವಿಚಾರ ಧಾರೆಗಳನ್ನು ಹರಡುವುದರೊಂದಿಗೆ ಹೊಸ ಕೆಲಸಗಳನ್ನು ಕೈಗೊಂಡಿದ್ದೂ ಅವರ ಹೆಗ್ಗಳಿಕೆ[೬೬]". ಹೀಗೆ ಕ್ರೈಸ್ತ ಮಿಷನರಿಗಳು ಅವರ ಅಪಾರ ಸೇವೆಯನ್ನು ವಿದ್ಯಾ ಕ್ಷೇತ್ರದ ಮೂಲಕ ಸಾಹಿತ್ಯ ಕ್ಷೇತ್ರಕ್ಕೂ ನೀಡಿದ್ದಾರೆ.

### ೨.೩.೩. ವೈದ್ಯಕೀಯ ಕ್ಷೇತ್ರ

ವೈದ್ಯಕೀಯ ಕ್ಷೇತ್ರದಲ್ಲೂ ಕ್ರೈಸ್ತ ಮಿಷನರಿಗಳ ಉತ್ತಮ ಸೇವೆಗಳು ಕಂಡುಬರುತ್ತವೆ. ದಕ್ಷಿಣ ಕನ್ನಡದ ಜನತೆಗೆ ಕ್ರೈಸ್ತರ ವೈದ್ಯಕೀಯ ಸೇವೆಯ ಫಲ ಧಾರಳ ಲಭಿಸಿದೆ. ೧೮೮೦ ರಲ್ಲಿ ಫಾದರ್ ಮುಲ್ಲರ್‌ರವರಿಂದ ಆರಂಭಗೊಂಡ ಕಂಕನಾಡಿಯಲ್ಲಿರುವ ಫಾದರ್ ಮುಲ್ಲರ್ಸ್ ಆಸ್ಪತ್ರೆಗಳ ಸಮೂಹ, ಈ ಶತಮಾನದ ಆದಿಯಲ್ಲಿ ಸ್ಥಾಪಿಸಿಲ್ಪಟ್ಟಿರವ ಉಡುಪಿಯ ಕ್ರಿಶ್ಚಿಯನ್ ಆಸ್ಪತ್ರೆ ಕಿನ್ನಿಗೋಳಿಯ ಕೊನ್ಸೆಪ್ತಾ ಆಸ್ಪತ್ರೆ ಪುತ್ತೂರಿನ ಪತ್ರಾವೋ ಆಸ್ಪತ್ರೆಗಳು ಕ್ರೈಸ್ತರ ವೈದ್ಯಕೀಯ ಸೇವೆಗೆ ಸಾಕ್ಷಿಗಳಾಗಿವೆ. ಈ ಆಸ್ಪತ್ರೆಗಳಲ್ಲಿ ವರ್ಷಕ್ಕೆ ಒಳರೋಗಿಗಳಾಗಿ ಸಾವಿರಾರು ಜನರು ಹಾಗೂ ಹೊರ ರೋಗಿಗಳಾಗಿ ಲಕ್ಷಾಂತರ ಜನರು ಉಚಿತ ಅಥವಾ ಕಡಿಮೆ ಖರ್ಚಿನಲ್ಲಿ ವೈದ್ಯಕೀಯ ಸೇವೆ

ಪಡೆಯುತ್ತಿರುವುದು ಇಂದೂ ವಾಸ್ತವ ಸತ್ಯವಾಗಿದೆ. ಆರಂಭದಲ್ಲಿ ತೀರಾ ಸಣ್ಣ ಪ್ರಮಾಣದಲ್ಲಿ ಪರಿಮಿತ ಉದ್ದೇಶಗಳಿಗಾಗಿ ಪ್ರಾರಂಭವಾದ ಮಂಗಳೂರಿನ ಫಾದರ್ ಮುಲ್ಲರ್ಸ್ ಆಸ್ಪತ್ರೆ ಇಂದು ಜಗತ್ಪ್ರಸಿದ್ಧ ವೈದ್ಯಕೀಯ ಸಂಸ್ಥೆಗಳ ಒಂದು ಬೃಹತ್ ಒಕ್ಕೂಟವಾಗಿ ಬೆಳೆದಿದೆ ಇಂದು ಈ ಸಂಸ್ಥೆಯ ಆಶ್ರಯದಲ್ಲಿ ಔಷಧಿ, ಶಸ್ತ್ರ ಚಿಕಿತ್ಸೆ, ಸ್ತ್ರೀರೋಗ ವಿಜ್ಞಾನ ಮತ್ತು ಪ್ರಸೂತಿ ವಿಜ್ಞಾನ, ಕಿವಿ ಮೂಗು ಗಂಟಲು, ನೇತ್ರ ಚಿಕಿತ್ಸೆ, ಶಿಶು ಆರೋಗ್ಯ ಮತ್ತು ಹೃದಯ ಚಿಕಿತ್ಸೆ, ನರ ಚಿಕಿತ್ಸೆ ಮತ್ತು ಶಸ್ತ್ರಕ್ರಿಯೆ, ಕುಷ್ಠ, ಕ್ಷಯ, ಮಾನಸಿಕ ಚಿಕಿತ್ಸೆ ಮುಂತಾದ ವಿಭಾಗಗಳಿವೆ. ಈ ಎಲ್ಲಾ ವಿಭಾಗಗಳಿಗೂ ಪ್ರತ್ಯೇಕ ಕಟ್ಟೋಣಗಳಿದ್ದು ಉತ್ತಮ ಹಾಗೂ ತಜ್ಞ ಸೇವೆ ಒದಗಿಸಲಾಗುತ್ತದೆ. ಇಲ್ಲಿಯ ಸೈಕ್ಯಾಟ್ರೀಕ್/ ಮಾನಸಿಕ ಚಿಕಿತ್ಸೆಯ ವಾರ್ಡ್ ಜಿಲ್ಲೆಯಲ್ಲೇ ಅದ್ವಿತೀಯ. ಈ ಸಂಸ್ಥೆಯ ಆಶ್ರಯದಲ್ಲಿ ನಡೆಯುವ ಸೈಂಟ್ ಜೋಸೆಫ್ಸ್ ಲೆಪ್ರಸಿ ಆಸ್ಪತ್ರೆಯೂ ಸಹ ಜಿಲ್ಲೆಯಲ್ಲಿ ಪ್ರಸಿದ್ಧಿ ಪಡೆದಿದೆ. ಫಾದರ್ ಮುಲ್ಲರ್ಸ್ ಚಾರಿಟೇನಲ್ ಸಂಸ್ಥೆಯವರು ಒಂದು ಸ್ಕೂಲ್ ಆಫ್ ನರ್ಸಿಂಗ್ ಮತ್ತು ಆಸ್ಪತ್ರೆ ಸಹಾಯಕ ಸಂಸ್ಥೆಗಳಾದ ಕ್ಷ – ಕಿರಣ ಚಿಕಿತ್ಸೆ / ಎಕ್ಸ್ – ರೇ ಮತ್ತು ರೋಗ ವೈಜ್ಞಾನಿಕ ಪ್ರಯೋಗಾಲಯ ಬ್ಲಡ್ ಬ್ಯಾಂಕ್, ಫಾರ್ಮಸಿ ಮುಂತಾದವುಗಳನ್ನೂ ನಡೆಸುತ್ತಾರೆ.[೩೭] ಇವಕ್ಕೆಲ್ಲ ಮುಕುಟ ಪ್ರಾಯದಂತೆ ಫಾದರ್ ಮುಲ್ಲರ್ಸ್ ವೈದ್ಯಕೀಯ ಕಾಲೇಜೊಂದನ್ನೂ ಇತ್ತೀಚೆಗೆ ತೆರೆಯಲಾಗಿದೆ.

### ೨.೩.೪. ಕೈಗಾರಿಕಾ ಕ್ಷೇತ್ರ

ಹೊಸದಾಗಿ ಕ್ರೈಸ್ತ ಮತಕ್ಕೆ ಸೇರಿದವರಿಗೆ ಜೀವನೋಪಾಯ ಹಾಗೂ ಉದ್ಯೋಗ ಅವಕಾಶಗಳನ್ನು ಕಲ್ಪಿಸುವ ದೃಷ್ಟಿಯಿಂದ ಆನೇಕ ಕೈಗಾರಿಕೋದ್ಯಮಗಳನ್ನು ಸ್ಥಾಪಿಸಿದ್ದು ಬಾಸೆಲ್ ಮಿಷನ್‌ನ ಹೆಗ್ಗಳಿಕೆ. ಉದ್ದೇಶ ಪರಿಮಿತವಾದದ್ದಾದರೂ, ಲಾಭ ಮಾತ್ರ ಎಲ್ಲರಿಗೂ ದೊರಕಿತು. ಇದರಿಂದ ಮುಖ್ಯವಾಗಿ ದಕ್ಷಿಣ ಕನ್ನಡ ಜಿಲ್ಲೆಯ ಕೈಗಾರಿಕಾಭಿವೃದ್ಧಿಗೆ ಇಂಬು ದೊರಕಿತು[೩೮]. ದಕ್ಷಿಣ ಕನ್ನಡ ಜಿಲ್ಲೆಯ ಪ್ರಮುಖ ಹಾಗೂ ಹೆಮ್ಮೆಯ ಉದ್ಯಮವಾಗಿ ಬೆಳೆದ ಹಂಚಿನ ಕಾರ್ಖಾನೆಗಳನ್ನು ಮೊತ್ತಮೊದಲಾಗಿ ಇಲ್ಲಿ ಸ್ಥಾಪಿಸಿದ ಕೀರ್ತಿ ಬಾಸೆಲ್ ಮಿಷನ್ನಿಗೆ ಸಲ್ಲುತ್ತದೆ. ೧೮೬೫ ರಲ್ಲಿ ಪ್ಲೆಬೆಟ್ ಎಂಬ ಜರ್ಮನ್ ಮಿಷನರಿ ಬಾಸೆಲ್ ಮಿಷನ್‌ನ ಪರವಾಗಿ ಕೋಮನ್‌ವೆಲ್ತ್ ಟೈಲ್ ಫ್ಯಾಕ್ಟರಿಯನ್ನೂ ಸ್ಥಾಪಿಸಿದರೆಂದು ಹೇಳಲಾಗಿದೆ[೩೯]. ನಂತರ ೧೮೬೭ ರಲ್ಲಿ ಈಗ "ಅಲ್ಬುಕರ್ಕ್

ಎಂಡ್ ಸನ್ಸ್'' ಎಂಬ ಎರಡನೆಯ ಹಂಚಿನ ಕಾರ್ಖಾನೆಯನ್ನು ಕೆಥೋಲಿಕ್ ಪಂಥದವರಿಂದ ಸ್ಥಾಪಿಸಲ್ಪಟ್ಟಿತು. ಜಗತ್ಪ್ರಸಿದ್ಧವಾಗಿರುವ ಹಾಗೂ ವಿಶ್ವದಾದ್ಯಂತ ಬೇಡಿಕೆಯಿರುವ ಮಂಗಳೂರಿನ ಹಂಚು ಉದ್ಯಮವು ಇಂದಿಗೂ ದಕ್ಷಿಣ ಕನ್ನಡ ಜಿಲ್ಲೆಯ ಪ್ರಮುಖ ಕೈಗಾರಿಕೆಗಳಲ್ಲೊಂದಾಗಿದೆ.

ಇಂದು ಜಗತ್ಪ್ರಸಿದ್ಧವಾಗಿರುವ ಖಾಕಿ ಬಟ್ಟೆಯ ವಿಶಿಷ್ಟ ಬಣ್ಣವನ್ನು ಕಂಡು ಹಿಡಿದು ಖಾಕಿ ಬಟ್ಟೆಯನ್ನು ಆವಿಷ್ಕಾರಗೊಳಿಸಿದವರು ಬಾಸೆಲ್ ಮಿಷನರಿಗಳೆಂಬ ಸಂಗತಿ ನಮ್ಮಲ್ಲಿ ಬಹು ಮಂದಿಗೆ ತಿಳಿದಿರಲಾರದು. ಭಾರತದಾದ್ಯಂತ ಪೊಲೀಸರ, ಸೈನಿಕರ ಹಾಗೂ ಎಲ್ಲ ಸರಕಾರಿ ಸಿಬ್ಬಂಧಿಗಳ ಸಮವಸ್ತ್ರಗಳಿಗಾಗಿ ಬಳಕೆಯಾಗುತ್ತಿರುವ ಖಾಕಿ ಬಟ್ಟೆಯು ಇಂಗ್ಲೀಷ್ ಭಾಷೆಯನ್ನು ಮಾತನಾಡುವ ಪ್ರದೇಶಗಳಲೆಲ್ಲಾ ಜನಪ್ರಿಯವಾಗಿದೆ.[೪೦]

೧೮೫೩ ರಲ್ಲಿ ಬಾಸೆಲ್ ಮಿಷನ್ ಸಂಘವು ಕೈಮಗ್ಗದ ಕೈಗಾರಿಕೆಯನ್ನೂ ಸ್ಥಾಪಿಸಿತು. ಜರ್ಮನ್ ತಂತ್ರಜ್ಞಾನವನ್ನು ಬಳಸಿಕೊಂಡು ಬಳಕೆಗೆ ತರಲಾದ ವೇಗವಾಗಿ ತಿರುಗುವ ಲಾಳಿಯಿಂದ ಕೂಡಿದ 'ಮಿಷನ್ ಮಗ್ಗವು' ಸುಪ್ರಸಿದ್ಧವಾಗಿದೆ. ಇಂದಿಗೂ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕೈ ಮಗ್ಗದ ಕೈಗಾರಿಕೆಯು ಉಚ್ಛ್ರಾಯ ಸ್ಥಿತಿಯಲ್ಲಿದೆ.[೪೧]

ಬಾಸೆಲ್ ಮಿಷನ್ನಿನವರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮೊಟ್ಟ ಮೊದಲನೆಯ ಕಬ್ಬಿಣ ಎರಕ ಹೊಯ್ಯುವ ಕಾರ್ಖಾನೆಯನ್ನೂ ಸ್ಥಾಪಿಸಿದರು[೪೨]. ಇವರು ತಯಾರು ಮಾಡುತ್ತಿದ್ದ ಕಬ್ಬಿಣದ ಪೆಟ್ಟಿಗೆಗಳನ್ನು ಅಂದಿನ ಮದ್ರಾಸಿನ ಬ್ರಿಟಿಷ್ ಸರಕಾರ ತನ್ನ ಎಲ್ಲಾ ಖಜಾನೆಗಳಲ್ಲಿಯೂ ಬ್ಯಾಂಕುಗಳಲ್ಲಿಯೂ ಉಪಯೋಗ ಮಾಡುತ್ತಿತ್ತು.

ಜಿಲ್ಲೆಯ ಇನ್ನೊಂದು ಪ್ರಮುಖ ಉದ್ಯಮವಾಗಿರುವ ಗೇರುಬೀಜ ಕಾರ್ಖಾನೆಗಳು ಮೊತ್ತಮೊದಲು ಸ್ಥಾಪಿಸಿದವರು ಬಾಸೆಲ್ ಮಿಷನ್ನಿನ ಕ್ರೈಸ್ತರು ಎನ್ನುವುದನ್ನ ಕೆಲವು ದಾಖಲೆಗಳಲ್ಲಿ ಉಲ್ಲೇಖಿಸಿದೆ.[೪೩] ೧೯೨೪ರಲ್ಲಿ ಅವರು ಪಿಯರ್ಸ್‌ಲೆಸ್ಸಿ ಆಂಡ್ ಕಂಪೆನಿ ಲಿಮಿಟೆಡ್ ಎಂಬ ಹೆಸರಿನಲ್ಲಿ ಗೇರು ಬೀಜ ಕಾರ್ಖಾನೆಯೊಂದನ್ನು ಪ್ರಾರಂಭಿಸಿದ್ದರು. ೧೯೪೦ ರಲ್ಲಿ ಶ್ರೀ ಬಲ್ತಾಜರ ಫೆರ್ನಾಂಡಿಸ್ ಎಂಬವರು 'ಫೆರ್ನಾಂಡಿಸ್ ಬ್ರದರ್ಸ್' ಎಂಬ ಹೆಸರಿನಲ್ಲಿ ಇನ್ನೊಂದು ದೊಡ್ಡ ಗೇರುಬೀಜ ಕಾರ್ಖಾನೆಯನ್ನು ಸ್ಥಾಪಿಸಿದರು ಎನ್ನಲಾಗಿದೆ.

ಇದಲ್ಲದೆ ಬಾಸೆಲ್ ಮಿಷನ್ನಿನವರು ದಕ್ಷಿಣ ಕನ್ನಡ ಜಿಲ್ಲೆಯಲ್ಲೇ ಪ್ರಥಮ ಛಾಪಖಾನೆಯನ್ನು ೧೮೪೧ರಲ್ಲಿ ಬಲ್ಮಠ ಎಬ ಸ್ಥಳದಲ್ಲಿ ಪ್ರಾರಂಭಿಸಿದರು[೪೪]. ಇದು ಇತ್ತೀಚೆಗಿನ ತನಕ ಜಿಲ್ಲೆಯ ಶ್ರೇಷ್ಠ ಛಾಪಖಾನೆಗಳಲ್ಲಿ ಒಂದಾಗಿ ದೇಶದಾದ್ಯಂತ ಕೀರ್ತಿ ಗಳಿಸಿತ್ತು. ಅದೇ ರೀತಿ ಕೆಥೊಲಿಕ್ ಕ್ರೈಸ್ತರು ಮಂಗಳೂರು ಧರ್ಮ ಪ್ರಾಂತ್ಯದ ವತಿಯಿಂದ ನಡೆಸಿಕೊಂಡು ಬರುತ್ತಿರುವ ಕೊಡಿಯಾಲ್‌ಬೈಲ್ ಛಾಪಖಾನೆ ೧೮೮೨ರಲ್ಲಿ ಸ್ಥಾಪನೆಯಾಯಿತು. ಬಾಸೆಲ್ ಮಿಷನ್ ಪ್ರೆಸ್‌ನಂತೆ ಕೊಡಿಯಾಲ್ ಬೈಲ್ ಪ್ರೆಸ್ ಸಹ ಕರ್ನಾಟಕದಲ್ಲಿ ಖ್ಯಾತಿವೆತ್ತ ಛಾಪಖಾನೆಗಳಲ್ಲೊಂದಾಗಿದೆ.

ಇಷ್ಟು ಮಾತ್ರವಲ್ಲದೆ ನಿಟ್ಟಿಂಗ್, ಹೊಸೈರಿ ಇಂಡಸ್ಟ್ರಿ, ಕಿಸೆ ಗಡಿಯಾರಗಳನ್ನು ತಯಾರಿಸುವ ಕೈಗಾರಿಕೆಗಳನ್ನು ಸ್ಥಾಪಿಸಿ ಜನರಿಗೆ ಬಾಸೆಲ್ ಮಿಷನ್ನಿನವರು ತಮ್ಮ ಜೀವನವನ್ನು ತಾವೇ ರೂಪಿಸಿಕೊಳ್ಳಲು ಸಹಾಯ ಮಾಡಿತು.

**೨.೩.೫. ಸಮಾಜ ಸೇವೆ ಮತ್ತು ಆರ್ಥಿಕ ಅಭಿವೃದ್ಧಿ ಯೋಜನೆಗಳು**

ಸಮಾಜ ಸೇವಾ ಕ್ಷೇತ್ರದಲ್ಲಿ ಕ್ರೈಸ್ತರ ಕೊಡುಗೆ ಗಮನಾರ್ಹವಾಗಿದೆ. ಕ್ರೈಸ್ತ ಧರ್ಮದ ತತ್ವ ಮತ್ತು ಆಚರಣೆಗಳಲ್ಲಿ ಸಮಾಜ ಸೇವೆಗೆ ಪ್ರಾಧಾನ್ಯತೆ ಬಹಳಷ್ಟಿದೆ. ದಕ್ಷಿಣ ಕನ್ನಡ ಜಿಲ್ಲೆಗೆ ಮತ ಪ್ರಚಾರಕ್ಕಾಗಿ ಪರ ಊರಿನಿಂದ ಬಂದ ಮಿಷನರಿಗಳೂ, ಸ್ಥಳೀಯ ಧರ್ಮಗುರುಗಳೂ ಕ್ರೈಸ್ತ ಧರ್ಮದ ತತ್ವಗಳಿಗನುಸಾರವಾಗಿ ತಾವು ಹೋದೆಡೆಗಳಲ್ಲಿ ಅನಾಥಾಲಯಗಳನ್ನು, ಆಸ್ಪತ್ರೆ, ಶಾಲೆ, ವಯೋವೃದ್ಧಾಶ್ರಮಗಳು ಮುಂತಾದುವುಗಳನ್ನು ಸ್ಥಾಪಿಸುತ್ತಾ ಬಂದರು. ಮಂಗಳೂರು ಧರ್ಮ ಪ್ರಾಂತ್ಯದ ಆಶ್ರಯದಲ್ಲಿ ಈಗ ೨೦ ಅನಾಥಾಲಯಗಳು, ಐದು ಆಸ್ಪತ್ರೆಗಳು, ಆರು ಆರೋಗ್ಯ ಕೇಂದ್ರಗಳು, ಏಳು ವೃದ್ಧಾಶ್ರಮಗಳು, ಎರಡು ಕುಷ್ಠರೋಗಿಗಳ ಆಶ್ರಿತ ಕೇಂದ್ರಗಳು, ೧೪ ಸಮಾಜ ಸಹಾಯ ಕೇಂದ್ರಗಳು, ೧೩ ಸಮಾಜ ಕಲ್ಯಾಣ ಕೇಂದ್ರಗಳು ಹಾಗೂ ಎಂಟು ಪ್ರಕಾಶನ ಕೇಂದ್ರಗಳು ನಡೆಸಲ್ಪಡುತ್ತವೆ[೪೫]. ಪ್ರೊಟೆಸ್ಟೆಂಟ್ ಸಮುದಾಯದ ವತಿಯಿಂದ ೨ ಅನಾಥಾಲಯಗಳು ಹಾಗೂ ೨ ವೃತ್ತಿ ತರಬೇತಿ ಕೇಂದ್ರಗಳು ನಡೆಸಲ್ಪಡುತ್ತವೆ.

೧೯೬೫ನೇ ಇಸವಿ ತನಕ ದಕ್ಷಿಣ ಕನ್ನಡ ಜಿಲ್ಲೆಯ ಕ್ರೈಸ್ತರ ಸಮಾಜ ಸೇವೆ ಹೆಚ್ಚಾಗಿ ಶಾಲೆ, ಕಾಲೇಜು, ಆಸ್ಪತ್ರೆ ಮತ್ತು ಅನಾಥಾಲಯಗಳನ್ನು ಸ್ಥಾಪಿಸಿ ನಡೆಸಿಕೊಂಡು ಬರುವುದರಲ್ಲೇ ಸೀಮಿತವಾಗಿತ್ತು. ನಂತರದ ವರ್ಷಗಳಲ್ಲಿ ಈ ಧರ್ಮ ಪ್ರಾಂತ್ಯದ ವ್ಯಾಪ್ತಿಯಲ್ಲಿ ಸಮಾಜ ಸೇವೆಯ

ಚಟುವಟಿಕೆಗಳನ್ನು ಸುವ್ಯವಸ್ಥಿತವಾಗಿ ನಿರ್ವಹಿಸಲು ಮತ್ತು ಆರ್ಥಿಕ ಅಭಿವೃದ್ಧಿ ಕಾರ್ಯಕ್ರಮಗಳನ್ನು ರೂಪಿಸಿ ಕಾರ್ಯಗತಗೊಳಿಸಲು ಎರಡು ಸಂಸ್ಥೆಗಳನ್ನು ರೂಪಿಸಲಾಯಿತು.

* ಕಾರಿತಾಸ್ ಇಂಡಿಯಾ ಸಂಸ್ಥೆ ಹಾಗೂ

* ಶಾಂತಿಗಾಗಿ ಕೆನರಾ ಸಂಘಟನೆ

ಈ ಎರಡು ಸಂಸ್ಥೆಗಳಡಿಯಲ್ಲಿ ಅಗಾಧ ಸಮಾಜ ಸೇವಾ ಕಾರ್ಯಕ್ರಮಗಳು ಅನುಷ್ಟಾನಿಸಲ್ಪಟ್ಟಿತು[೪೬]. ಈ ಯೋಜನೆಗಳಡಿಯಲ್ಲಿ ಬೆಳ್ತಂಗಡಿ ಪ್ಯಾಕೇಜ್ ಪ್ಲಾನ್ – ಇಡೀ ಬೆಳ್ತಂಗಡಿ ತಾಲೂಕಿನ ಸರ್ವತೋಮುಖ ಅಭಿವೃದ್ಧಿ ಸಾಧಿಸುವ ನಿಟ್ಟಿನಲ್ಲಿ ಕಾರ್ಯಕ್ರಮಗಳನ್ನು ರೂಪಿಸಿ ಕಾರ್ಯಗತಗೊಳಿಸುವ ಯೋಜನೆಯೂ ಒಳಗೊಂಡಿತ್ತು. ಕೃಷಿ, ನೀರಾವರಿ, ಮತ್ಸ ಸಂಪಾದನೆ, ಹಾಲು ಉತ್ಪಾದನೆ, ಹೊಲಗಳ ಮತ್ತು ತೋಟಗಳ ಅಭಿವೃದ್ಧಿ, ವಸತಿ ನಿರ್ಮಾಣ, ಕೋಳಿ ಮತ್ತು ಹಂದಿ ಸಾಕಣೆ ಮುಂತಾದ ವಿಷಯಗಳನ್ನೊಳಗೊಂಡಿರುವ ಈ ಯೋಜನೆಗಳಿಗೆ ಯುರೋಪ್, ಅಮೇರಿಕ, ಕೆನಡ ಮುಂತಾದ ರಾಷ್ಟ್ರಗಳಿಂದ ಹಲವಾರು ಲಕ್ಷ ರೂಪಾಯಿಗಳ ನೆರವು ದೊರೆತಿದೆ. ಈ ಸಮಾಜ ಸೇವೆ ಸಂಘಟನೆಗಳವರು ಜನರೊಂದಿಗೆ ಬೆರೆತು ಕೆಲಸ ಮಾಡಿ ಜನರನ್ನು ಸ್ವಾವಲಂಬಿಗಳನ್ನಾಗಿ ಮಾಡುವುದರೊಂದಿಗೆ ಜನತೆಯ ಸಮಸ್ಯೆಗೆ ಜನರಿಂದಲೇ ಪರಿಹಾರ ಕಂಡುಹಿಡಿಯುವ ಪ್ರವೃತ್ತಿಯನ್ನು ಬೆಳೆಸುವ ಗುರಿಯನ್ನು ಹೊಂದಿದ್ದರು ಎನ್ನುವುದನ್ನು ಈ ಯೋಜನೆಯ ವಿವರಗಳು ನೀಡುತ್ತವೆ.

೧೯೭೪ನೆ ಇಸವಿಯ ಜುಲಾಯಿ ತಿಂಗಳಲ್ಲಿ ಬಂದ ಭೀಕರ ನೆರೆಯಿಂದಾಗಿ ಮನೆ ಮಠಗಳನ್ನು ಕಳೆದುಕೊಂಡ ನಿರಾಶ್ರಿತರಾದ ನೂರಾರು ಕುಟುಂಬಗಳಿಗೆ ಒಟ್ಟಿಗೆ ೨೦೦ ಮನೆಗಳನ್ನು ಕಟ್ಟಿಸಿ ಕೊಡಲಾಗಿತ್ತು. ಸ್ಥಳೀಯ ಕ್ರೈಸ್ತರ ದೇಣಿಗೆಗಳು ಮತ್ತು ಇತರೇ ಮೂಲಗಳಿಂದ ಸಂಗ್ರಹಿಸಿದ ಸುಮಾರು ೨ ಲಕ್ಷ ರೂಪಾಯಿ ಮತ್ತು ಬಟ್ಟೆಬರೆ ಹಾಗೂ ಇನ್ನಿತರ ನಿತ್ಯ ಬಳಕೆಯ ವಸ್ತುಗಳನ್ನು ಜಿಲ್ಲೆಯ ಹನ್ನೊಂದು ಕೇಂದ್ರಗಳಲ್ಲಿ ನೆರೆ ನಿರಾಶ್ರಿತರಿಗೆ ಹಂಚಲಾಗಿತ್ತು. ಪ್ರೊಟೆಸ್ಟಾಂಟ್ ಸಮುದಾಯದವರೂ ೧೯೭೪ರ ನೆರೆಯಿಂದ ನಿರಾಶ್ರಿತರಾದವರಿಗೆ ಪುನರ್ವಸತಿ ಒದಗಿಸಲು ನೇತ್ರಾವತಿಯ ಪಕ್ಕದಲ್ಲಿರುವ ಹರೇಕಳ ಗ್ರಾಮದಲ್ಲಿ ೪೦ ಹೊಸ ಮನೆಗಳನ್ನು, ಹೊಸ ರಸ್ತೆ ಮತ್ತು ಬಾವಿಗಳನ್ನು ನಿರ್ಮಿಸಿ ಕೊಡುವುದರ ಮೂಲಕ ಸಮಾಜ ಸೇವಾ ಕಾರ್ಯದಲ್ಲಿ ಸಕ್ರಿಯರಾಗಿದ್ದರು[೪೭].

ಕೃಷಿ ಕ್ಷೇತ್ರಕ್ಕೆ ಕ್ರೈಸ್ತರ ಕೊಡುಗೆ ಗಮನಾರ್ಹವಾಗಿದೆ. ಕ್ರೈಸ್ತ ಸಮುದಾಯ ಮೂಲತಃ ಕೃಷಿಕರಾಗಿದ್ದು ಜಿಲ್ಲೆಯಲ್ಲಿ ಕೃಷಿಯ ಅಭಿವೃದ್ಧಿಗೆ ತಮ್ಮದೇ ಆದ ರೀತಿಯಲ್ಲಿ ಶ್ರಮಿಸಿರುವುದು ಕಾಣುತ್ತದೆ. ಕೆಳದಿ ನಾಯಕರ ಸಂಸ್ಥಾನದಲ್ಲಿ ಕೃಷಿಗೆ ಕ್ರೈಸ್ತರ ಕೊಡುಗೆ ಶ್ಲಾಘನೆಗೆ ಪಾತ್ರವಾಗಿದೆ[೪೮]. ಬ್ರಿಟಿಷರ ಆಡಳಿತಾವಧಿಯಲ್ಲೂ ಕೃಷಿ ಕ್ಷೇತ್ರದಲ್ಲಿ ಉತ್ತಮ ಕೊಡುಗೆಯನ್ನೀಯಲು ಕ್ರೈಸ್ತರಿಗೆ ಒಳ್ಳೆಯ ಅವಕಾಶಗಳು ಲಭ್ಯವಾಗಿತ್ತು. ವೀಳ್ಯದೆಲೆಯ ಕೃಷಿ, ಮಲ್ಲಿಗೆ ಹೂವಿನ ಕೃಷಿ ಹಾಗೂ ತರಕಾರಿ ಮತ್ತು ಕಾಯಿಪಲ್ಲೆಗಳ ಕೃಷಿಯಲ್ಲಿ ದಕ ಜಿಲ್ಲೆಯಲ್ಲಿ ಕ್ರೈಸ್ತರು ಇಂದಿಗೂ ಪ್ರವೀಣರಿದ್ದಾರೆ. ಕ್ರೈಸ್ತ ಸಮಾಜ ಸೇವಾ ಸಂಸ್ಥೆಯಾದ "ಕಾರಿತಾಸ್" ಆಶ್ರಯದಲ್ಲಿ ವಾಮಂಜೂರಿನಲ್ಲಿ ಒಂದು ಕೃಷಿ ಆಭಿವೃದ್ಧಿ ಶಾಲೆಯನ್ನು ತೆರೆದು ಅನೇಕ ಕೃಷಿಕರಿಗೆ ತರಬೇತಿ ನೀಡಿ ಕೃಷಿ ಉತ್ಪಾದನೆಗೆ ಜಿಲ್ಲೆಯಲ್ಲಿ ಚಾಲನೆ ನೀಡಿರುವುದು ಗಮನಾರ್ಹ.

ಸ್ವಾತಂತ್ರ್ಯಾನಂತರ ದಕ್ಷಿಣ ಕನ್ನಡದ ಕ್ರೈಸ್ತರು ಸಹಕಾರಿ ರಂಗ ಮತ್ತು ಬ್ಯಾಂಕಿಂಗ್ ಉದ್ಯಮಗಳನ್ನು ಅಟೋಮೊಬೈಲ್ ಟ್ರಾನ್ಸ್‌ಪೋರ್ಟೇಷನ್ ಮತ್ತು ಶಿಪ್ಪಿಂಗ್ ಉದ್ಯಮಗಳನ್ನು ಪ್ರಾರಂಭಿಸಿ ಯಶಸ್ವಿಯಾಗಿ ನಿರ್ವಹಿಸಿಕೊಂಡು ಬಂದಿದ್ದಾರೆ. ಸಾಕಷ್ಟು ಸಂಖ್ಯೆಯಲ್ಲಿ ಇಲ್ಲಿನ ಕ್ರೈಸ್ರರು ಮುಂಬಯಿ ಮತ್ತು ವಿದೇಶಗಳಲ್ಲಿ ಉದ್ಯೋಗಿಗಳಾಗಿ ಹಾಗೂ ಉದ್ಯಮಿಗಳಾಗಿ ತಮ್ಮ ಉದ್ಯಮಶೀಲತೆಯನ್ನು ಮೆರೆದಿರುವುದು ಕಾಣುತ್ತದೆ[೪೯]. ವಾಸ್ತು ಶಿಲ್ಪಕ್ಕೆ ಹಾಗೂ ಚಿತ್ರಕಲೆಗೂ ದಕ್ಷಿಣ ಕನ್ನಡದ ಕ್ರೈಸ್ತರ ಕೊಡುಗೆ ಅಪಾರವೆಂದರೆ ತಪ್ಪಾಗಲಾರದು.

ಹೀಗೆ ದಕ್ಷಿಣ ಕನ್ನಡ ಜಿಲ್ಲೆಯ ಸರ್ವಾಂಗೀಣ ಅಭಿವೃದ್ಧಿಗೆ ಇಲ್ಲಿನ ಕ್ರೈಸ್ತ ಸಮುದಾಯದ ಕೊಡುಗೆ ಅಪಾರ ಹಾಗೂ ಅಭಿನಂದನೀಯವೂ ಆಗಿದೆ ಎನ್ನುವುದು ವಿವಿಧ ಕ್ಷೇತ್ರಗಳಲ್ಲಿ ಅವರ ಸೇವೆಗಳನ್ನು ಪರಿಶೀಲಿಸಿದ ನಂತರ ತಿಳಿಯುತ್ತದೆ. ಜಿಲ್ಲೆಯ ಇತರ ಸಮುದಾಯಗಳ ಉದಾತ್ತ ಹಾಗೂ ಸಂಪೂರ್ಣ ಸಹಕಾರದಿಂದಲೇ ಅಲ್ಪ ಸಂಖ್ಯಾತರಾದ ಕ್ರೈಸ್ತರು ಇಷ್ಟು ದೊಡ್ಡ ಪ್ರಮಾಣದಲ್ಲಿ ಸಮಾಜ ಸೇವೆಯನ್ನೂ ಆಭಿವೃದ್ಧಿ ಕಾರ್ಯಕ್ರಮಗಳನ್ನೂ ನಡೆಸಲು ಸಾಧ್ಯವಾಗಿದೆ ಎಂಬುವುದು ನಿಜ. ಮುಂದಿನ ಅಧ್ಯಾಯಗಳಲ್ಲಿ ಅವರ ಸ್ಥಿತಿಗತಿಗಳು ರಾಜಕೀಯ ಕ್ಷೇತ್ರದಲ್ಲಿ ಹೇಗಿದೆಯೆಂಬುದನ್ನು ಪರಿಶೀಲಿಸಲಾಗುವುದು.

## ೨.೪. ಸ್ವಾತಂತ್ರ್ಯ ಹೋರಾಟದಲ್ಲಿ ಜಿಲ್ಲೆಯ ಕ್ರೈಸ್ತರ ಪಾತ್ರ

ದೇಶದಾದ್ಯಂತ ಬ್ರಿಟೀಷ್ ದಬ್ಬಾಳಿಕೆಯ ವಿರುದ್ದ ನಡೆದ ಸ್ವಾತಂತ್ರ್ಯ ಹೋರಾಟದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಜನತೆ ಸಕ್ರಿಯವಾಗಿ ಭಾಗವಹಿಸಿರುವುದು ಇತಿಹಾಸದಲ್ಲಿ ಕಂಡು ಬರುತ್ತದೆ. ಭಾರತೀಯ ರಾಷ್ಟೀಯ ಕಾಂಗ್ರೆಸ್‌ನ ಮುಂದಾಳತ್ವಕ್ಕಿಂತ ಮೊದಲೇ ಜಿಲ್ಲೆಯಲ್ಲಿ ಅಲ್ಲಲ್ಲಿ ಬ್ರಿಟಿಷ್ ಆಳ್ವಿಕೆಯ ವಿರುದ್ಧ ದಂಗೆಗಳು, ಹೋರಾಟಗಳು ನಡೆದ ಘಟನೆಗಳಿವೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲೂ ಸಹ ಭಾರತೀಯ ರಾಷ್ಟ್ರೀಯ ಕಾಂಗ್ರೆಸನ ಸ್ಥಾಪನೆ ಅದರಲ್ಲೂ ಮುಖ್ಯವಾಗಿ ಗಾಂಧಿಯುಗದ ಸ್ವಾತಂತ್ರ್ಯ ಹೋರಾಟ (೧೯೨೦–೪೭) ದ ಕಾಲಘಟ್ಟದಲ್ಲಿ ತನ್ನ ತೀವ್ರತೆಯನ್ನು ಪಡೆಯಿತು. ಜಿಲ್ಲೆಯಲ್ಲಿ ಕಾರ್ನಾಡ್ ಸದಾಶಿವರಾಯರು, ಕಮಲಾ ದೇವಿ ಚಟ್ಟೋಪಾಧ್ಯಾಯ ಕೆ. ಆರ್. ಕಾರಂತ್, ಯು. ಶ್ರೀನಿವಾಸ್ ಮಲ್ಯ, ಡಾ. ಆರ್ ಎಸ್ ಶೆಣೈ, ಸತ್ಯಮಿತ್ರಾ ಬಂಗೇರ, ಸೇಥ್ ನಯಂಪಲ್ಲಿ ಆನಂದ ರಾವ್, ಕುಬೇರ ಪಾಂಡುರಂಗ ರಾವ್, ಎಂ. ಅಬ್ದುಲ್ ಕಾದರ್, ಕೆ.ಕೆ. ಶೆಟ್ಟಿ, ಬಿ.ವಿ. ಬಾಳಿಗ ಮತ್ತಿತರುಗಳು ಸ್ವಾತಂತ್ರ್ಯ ಹೋರಾಟದಲ್ಲಿ ಖ್ಯಾತರಾಗಿದ್ದಾರೆ. ಕಮಲಾದೇವಿ ಚಟ್ಟೋಪಾಧ್ಯಾಯರಲ್ಲದೆ ಇನ್ನೂ ಅನೇಕ ಮಹಿಳೆಯರಾದ ಕೃಷ್ಣಾ ಬಾಯಿ ಪಣಜಿಕಾರ್, ಶ್ರೀಮತಿ ರತ್ನಾಬಾಯಿ, ಸುಂದರೀ ಬಾಯಿ, ಕಾಮಾಕ್ಷಿ ಬಾಯಿ, ಕಾರ್ನಾಡ್ ಸದಾಶಿವರಾಯರ ಮಗಳಂದಿರಾದ ಸುಗುಣ ಮತ್ತು ರಾಧಾರಂಥವರು ಮಹಿಳಾ ಸ್ವಾತಂತ್ರ್ಯ ಹೋರಾಟಗಾರರಲ್ಲಿ ಪ್ರಸಿದ್ಧರು[೫೦]. ಎಂ. ಅಬ್ದುಲ್ ಕಾದರ್, ಬಿ.ಎಂ. ಇದಿನಬ್ಬ ,ಶೇಕ್ ಯೂಸಫ್ ಸಾಹೇಬ್, ಶೇಕ್ ಫರೀದ್ ಸಾಹೇಬ್ ,ಎಫ್ ಯಚ್. ವೊಡೆಯರ್ ಮತ್ತು ಎಂ. ಎಚ್ ಕಲ್ಲಾಡ್ ಇವರುಗಳು ಮುಸ್ಲೀಮರನ್ನು ಹೆಚ್ಚಿನ ಸಂಖ್ಯೆಯಲ್ಲಿ ರಾಷ್ಟ್ರೀಯ ಸ್ವಾತಂತ್ರ್ಯ ಹೋರಾಟದಲ್ಲಿ ಒಟ್ಟುಗೂಡಿಸಲು ಪ್ರಯತ್ನಿಸಿದವರಲ್ಲಿ ಮುಖ್ಯ ನಾಯಕತ್ವವನ್ನು ವಹಿಸಿರುವುದು ಕಂಡುಬರುತ್ತದೆ. ವಿವಿಧತೆಯಲ್ಲಿ ಏಕತೆಯನ್ನು ಹೊಂದಿರುವ ನಾಡನ್ನು ಕಟ್ಟುವ ತೀರ್ಮಾನವನ್ನು ಸ್ವಾತಂತ್ರ್ಯ ಹೋರಾಟದ ಸಂಧರ್ಭದಲ್ಲಿ ತೆಗೆದುಕೊಳ್ಳಲಾಗಿತ್ತು. ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸದವರಿಗೆ ಈ ಮೊದಲು ಕಂಡಿರದಂತಹ ರೀತಿಯ ಸೋಶಿಯಲ್ ಕ್ಯಾಪಿಟಲ್ ಸಂಪಾದಿಸಲು ಸಾಧ್ಯವಾಯಿತೆಂಬುದಾಗಿ ಅಭಿಪ್ರಾಯ ಪಡೆಯಲಾಗಿದೆ[೫೧].

೧೮೩೪ ರಲ್ಲಿ ದಕ್ಷಿಣ ಕನ್ನಡ ಜಿಲ್ಲೆಗೆ ಬಂದ ಪ್ರೋಟೆಸ್ಟಾಂಟ್ ಬಾಸೆಲ್ ಮಿಷನ್‌ನವರು ಶಿಕ್ಷಣ ಪ್ರಸಾರ, ಮುದ್ರಣ, ಸಮಾಜ ಸೇವೆಗಳ ಕ್ಷೇತ್ರಗಳಲ್ಲಿ ತೋರಿದ ಉತ್ಸಾಹ ಹಲವು

ಶತಮಾನಗಳಿಂದ ಇಲ್ಲಿ ನೆಲೆನಿಂತ ಕೆಥೋಲಿಕರ ಚಟುವಟಿಕೆಗಳಿಗೂ ಚಾಲನೆ ನೀಡಿತು. ಪಾಶ್ಚಾತ್ಯ ಶಿಕ್ಷಣದ ವ್ಯಾಪ್ತಿ, ಕ್ರೈಸ್ತಮಿಷನರಿಗಳ ಚಟುವಟಿಕೆ ಇವೆರಡೂ ಈ ಜಿಲ್ಲೆಯ ಸಮಾಜದಲ್ಲಿ ತನ್ನತನದ ಜಾಗೃತಿಗೆ ಕಾರಣವಾಗಿದೆ[೫೨]. ಪಾಶ್ಚಾತ್ಯ ಶಿಕ್ಷಣ ಕ್ರಮದಿಂದಾಗಿ ನವೋದಯ, ಉದಾರವಾದ ಮತ್ತು ಪ್ರಜಾತಂತ್ರದ ಕಲ್ಪನೆಯ ಪ್ರಸಾರಕ್ಕೆ ಅನುಕೂಲಕರವಾದ ವಾತಾವರಣದ ಸೃಷ್ಟಿಯಾಯಿತು[೫೩]. ಕನ್ನಡ ಮುದ್ರಣ ಕ್ಷೇತ್ರದಲ್ಲಿ ಗಣನೀಯ ಕೊಡುಗೆ ನೀಡಿದ ಮಿಷನರಿಗಳೂ ೧೮೪೨ ರಲ್ಲಿ ಪ್ರಥಮ ಕನ್ನಡ ಪತ್ರಿಕೆ 'ಮಂಗಳೂರು ಸಮಾಚಾರ' ಎಂಬ ಪಾಕ್ಷಿಕವನ್ನೂ ಆರಂಭಿಸಿದರು. ನಂತರದ ದಿನಗಳಲ್ಲಿ ಪ್ರಕಟಗೊಂಡಂತಹ ಸ್ವದೇಶಾಭಿಮಾನಿ, ನವಯುಗ, ರಾಷ್ಟ್ರಬಂಧು ಮುಂತಾದ ಪತ್ರಿಕೆಗಳು ರಾಷ್ಟ್ರಪ್ರೇಮದ ಕಿಡಿಯನ್ನು ಹತ್ತಿಸಿ ಜನರು ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಳ್ಳುವಂತೆ ಪ್ರೇರಿಸಿತು. ಹೋಂ ರೂಲು ಚಳುವಳಿಯನ್ನು ಬೋಧಿಸಲು ೧೮೧೭ರಲ್ಲಿ ಆನಿಬೆಸೆಂಟರು ಮಂಗಳೂರಿಗೆ ಬೇಟಿ ನೀಡಿದರೆಂಬುದಾಗಿ ಮಂಗಳೂರಿನ ಥಿಯೋಸೋಫಿಕಲ್ ಸೊಸೈಟಿಯ ಪ್ರಕಟನೆಯಿಂದ ತಿಳಿದು ಬರುತ್ತದೆ. ೧೯೨೦ರ ವೇಳೆಗೆ ಗಾಂಧೀಜಿಯವರು ಮೌಲಾನಾ ಶೌಕತ್ ಆಲಿಯ ಜತೆಗೆ ಕೆನರಾ ಜಿಲ್ಲೆಗೆ ಬೇಟಿ ನೀಡಿದ್ದರು. ಈ ಎಲ್ಲಾ ನಾಯಕರುಗಳ ಬೇಟಿಗಳು ಈ ಪರಿಸರದ ಜನರ ಸ್ವಾತಂತ್ರ್ಯ ಹೋರಾಟದ ಕಾವನ್ನೂ ಹೆಚ್ಚಿಸಿತು. ೧೯೩೭ ರಲ್ಲಿ ಜವಾಹರಲಾಲ್ ನೆಹರೂ ಮಂಗಳೂರಿಗೆ ಭೇಟಿ ನೀಡಿದಂತಹ ಸಂಧರ್ಭದಲ್ಲಿ ಜೆ. ಝೆಡ್. ಸಲ್ಡಾನ್ಹರವರ ನೇತೃತ್ವದಲ್ಲಿ ಕೆಥೋಲಿಕ್ ಕ್ಲಬ್ ವತಿಯಿಂದ ಪಳ್ನೀರಿನಲ್ಲಿ ದೊಡ್ಡ ಸ್ವಾಗತವನ್ನು ನೀಡಲಾತಯಿತು. ಮಾತ್ರವಲ್ಲದೆ ದೊಡ್ಡ ಪ್ರಮಾಣದಲ್ಲಿ ಜಿಲ್ಲೆಯ ಕ್ರೈಸ್ತರು ಕಾಂಗ್ರೆಸ್ಸಿಗೆ ತಮ್ಮ ಸಹಕಾರ ನಿಷ್ಠೆಯನ್ನು ವ್ಯಕ್ತಪಡಿಸಿದರು.[೫೪] ಬ್ರಾಹ್ಮಣ, ಬಂಟ, ಮುಸಲ್ಮಾನ, ಮೊಗೇರ, ಬಿಲ್ಲವ, ಕ್ರೈಸ್ತ ಹರಿಜನ ಹಾಗೆ ಸಕಲ ಜಾತಿಯ ಜನರು ಭುಜಕ್ಕೆ ಭುಜಕೊಟ್ಟು ದುಡಿದು ಸಮಾಜವು ರಾಷ್ಟ್ರೀಯ ಭಾವನೆಯಿಂದಾಗಿ ಐಕ್ಯವನ್ನು ಕಾಣುವಂತೆ ಸ್ವಾತಂತ್ರ್ಯ ಹೋರಾಟವು ಅವಕಾಶ ಒದಗಿಸಿತು[೫೫].

ದಕ್ಷಿಣ ಕನ್ನಡದ ಕ್ರೈಸ್ತರು ರಾಷ್ಟ್ರೀಯ ಸ್ವಾತಂತ್ರ್ಯ ಹೋರಾಟದಲ್ಲಿ ಭಾರೀ ಪ್ರಮಾಣದಲ್ಲಿಯಲ್ಲದಿದ್ದರೂ ತಮ್ಮದೇ ಅದ ರೀತಿಯಲ್ಲಿ ಭಾಗವಹಿಸಿದ್ದಾರೆ. ಗಾಂಧೀಜಿಯವರು ಸ್ವಾತಂತ್ರ್ಯ ಹೋರಾಟದ ಮುಂಚೂಣಿಗೆ ಬಂದನಂತರ ಅಂದರೆ ೧೯೨೦ ರಿಂದ ೧೯೪೭ ರ ಕಾಲಘಟ್ಟದಲ್ಲಿ ಕ್ರೈಸ್ತರ ಭಾಗವಹಿಸುವಿಕೆಯು ರಾಷ್ಟ್ರೀಯ ಸ್ವಾತಂತ್ರ್ಯ ಹೋರಾಟದಲ್ಲಿ ಸಕ್ರಿಯವಾಗಿತ್ತು ಎಂದು ಅಭಿಪ್ರಾಯ ಪಡೆಯಲಾಗಿದೆ[೫೬]. ಮಹಾತ್ಮಾ ಗಾಂಧೀಜಿಯವರು ಕರೆಕೊಟ್ಟ ಅಸಹಕಾದ

ಚಳುವಳಿ ಸಿವಿಲ್ ಡಿಸ್–ಒಬೇಡಿಯನ್ಸ್ ಆಂದೋಳನ, ಚಲೇಜಾವ್ ಚಳುವಳಿಗಳಲ್ಲಿ ಈ ಭಾಗದ ಕ್ರೈಸ್ತರೂ ಸಹ ಸಕ್ರಿಯವಾಗಿ ಪಾಲ್ಗೊಂಡಿದ್ದಾರೆ ಎಂಬುದಾಗಿ ಅಭಿಪ್ರಾಯ ತಳೆಯಲಾಗಿದೆ ಮತ್ತು ಮಹಾತ್ಮ ಗಾಂಧೀಜಿಯವರ ತತ್ವಗಳಾದ, ಖಾದಿ, ಗ್ರಾಮೀಣ ಗುಡಿಕೈಗಾರಿಕೆಗಳು ಹಾಗೂ ಪಾನ ನೀಷೇದಗಳಿಗೆ ಇಲ್ಲಿನ ಕ್ರೈಸ್ತರೂ ಸಹ ತಮ್ಮ ಬೆಂಬಲವನ್ನು ವ್ಯಕ್ತಪಡಿಸಿದ್ದರು. ಬಂಟ, ಬಿಲ್ಲವ, ಸಮುದಾಯಗಳಂತೆ ಕೆನರಾ ಕ್ರೈಸ್ತರೂ ಸಹ "ಕೆಥೋಲಿಕ್ ಅಸೋಸಿಯೇಶನ್ ಆಫ್ ಸೌತ್ ಕೆನರಾ" ವನ್ನು ೧೯೧೪ ರಲ್ಲಿ ಪ್ರಾರಂಭಿಸಿದರು. ಇದರ ಪದಾದಿಕಾರಿಗಳು ಸಮುದಾಯದ ಸಾಮಾನ್ಯ ಸದಸ್ಯರ ಜತೆ ಅಷ್ಟಾಗಿ ಬೆರೆಯುತ್ತಿರಲ್ಲಿಲ್ಲವಾದ ಕಾರಣ ಅಸಾಧಾರಣ ಸಾಧನೆಗಳನ್ನು ಸಾಧಿಸಲು ಅದಕ್ಕೆ ಆ ದಿನಗಳಲ್ಲಿ ಸಾಧ್ಯವಾಗಲಿಲ್ಲ[೫೭].

೧೯೮೫ರಲ್ಲಿ ಮುಂಬೈನಲ್ಲಿ ನಡೆದ ಪ್ರಥಮ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್‌ನ ಸಭೆಗೆ ಇಲ್ಲಿನ ಜನರ ಪ್ರತಿನಿಧಿಯಾಗಿ ಜಾರ್ಜ್ ವಾಸ್ ಭಾಗವಹಿಸಿದ್ದರು[೫೮]. ಸ್ವಾತಂತ್ರ್ಯ ಹೋರಾಟದಲ್ಲಿ ಪಾಲುಗೊಂಡಂತಹ ಕ್ರೈಸ್ತ ಸಮುದಾಯದ ಆರಂಭಿಕ ನಾಯಕರುಗಳಲ್ಲಿ ಎಲ್. ಸಿ. ಫೆರ್ನಾಂಡೀಸ್. ಸಿ.ಜೆ. ವರ್ಕಿ, ಎಂ, ಎಸ್. ಶ್ರೇಷ್ಟ, ಫೆಲಿಕ್ಸ್ ಅಲ್ಬುಕರ್ಕ್ ಪೈ, ಜೆ.ಪಿ. ರೇಗೋ, ಇ. ಎ. ಪೈ, ಮೇರಿ ಬ್ರಿಟ್ಟೋ, ಜೆಫ್ರೀ ಸಲ್ದಾನ್ಹ, ಎಫ್, ಎಕ್ಸ್ ಡಿ. ಪಿಂಟೊ ಮತ್ತು ಜೋಕಿಮ್ ಆಳ್ವಾ ಪ್ರಮುಖರು. ಜೆ. ಎ, ಸಲ್ದಾನ್ಹ ಎಂಬುವವರು ೧೯೨೮ ರಲ್ಲಿ ಜಿಲ್ಲಾ ಕಾಂಗ್ರೇಸ್ ಸಮಿತಿ ಮಟ್ಟದಲ್ಲಿ ಸಕ್ರಿಯ ಕಾರ್ಯಕರ್ತರಾಗಿದ್ದರು. ಇನ್ನೊಬ್ಬರು ಎ.ಜೆ ಗೊನ್ಸಾಲ್ವಿಸ್ ೧೯೩೬ ರಲ್ಲಿ ಜಿಲ್ಲಾ ಸಮಿತಿಯ ಉಪಾಧ್ಯಕ್ಷರಾಗಿ ಆಯ್ಕೆಯಾಗಿದ್ದರು. ಕ್ರೈಸ್ತರ ಮುಂದಾಳುವಾಗಿ ಜೆ.ಝುಡ್ ಸಲ್ದಾನ್ಹ ಕೆಥೋಲಿಕ್ ಕ್ಲಬ್‌ನ ವತಿಯಿಂದ ಪಳ್ನೀರಿನಲ್ಲಿ ನೆಹರೂರವರನ್ನು ೧೯೩೭ ರಲ್ಲಿ ಬರಮಾಡಿಕೊಂಡು ಭಾರತೀಯ ರಾಷ್ಟೀಯ ಕಾಂಗ್ರೆಸ್ಸಿಗೆ ತಮ್ಮ ಸಮುದಾಯದ ಬೆಂಬಲದ ಭರವಸೆಯನ್ನು ನೀಡಿದರು. ಪ್ರೊ. ಸಿ. ಜೆ ವರ್ಕಿಯವರು ೧೯೩೭ರಲ್ಲಿ ಮಂಗಳೂರು ಚುನಾವಣಾ ಕ್ಷೇತ್ರದಿಂದ ಕೇಂದ್ರೀಯ ಶಾಸನ ಸಭೆಗೆ ಆಯ್ಕೆಯಾಗಿದ್ದು ಮಾತ್ರವಲ್ಲದೆ, ರಾಜಾಜಿಯವರ ಮಂತ್ರಿ ಮಂಡಲದಲ್ಲಿ ಮಂತ್ರಿಗಳೂ ಸಹ ಆಗಿದ್ದರು. ೧೯೪೬ರಲ್ಲಿ ಎಲ್. ಸಿ. ಪಾಯಸ್ ಮಂಗಳೂರು ಚುನಾವಣಾ ಕ್ಷೇತ್ರದಿಂದ ಕೇಂದ್ರೀಯ ಶಾಸನ ಸಭೆಗೆ ಆಯ್ಕೆಯಾಗಿದ್ದರು. ೧೯೪೭–೪೯ರ ಅವಧಿಗೆ ಎಫ್.ಎಕ್ಸ್.ಡಿ ಪಿಂಟೋರವರು ಜಿಲ್ಲೆಯ ಕಾಂಗ್ರೆಸ್ ಅಧ್ಯಕ್ಷರಾಗಿ ಆಯ್ಕೆ ಆದ ಮೊದಲ ಕ್ರೈಸ್ತರೆನ್ನಿಸಿಕೊಂಡಿದ್ದಾರೆ[೫೯].

ಆರಂಭದಿಂದಲೂ ಬ್ರಿಟೀಷರ ಜೊತೆಗಿನ ಕೆನರಾ ಕ್ರೈಸ್ತರ ಸಂಬಂಧ ಬಹಳ ಅನ್ಯೋನ್ಯವಾಗಿತ್ತು. ಕೆಥೋಲಿಕರ ಒಳ್ಳೆಯ ಕೆಲಸಗಳಿಗೆ ಹಾಗೂ ನಡೆತೆಗೆ ಬ್ರಟೀಷರು ಮೆಚ್ಚುಗೆ ವ್ಯಕ್ತಪಡಿಸುತ್ತಿದ್ದರು. ಬ್ರಟೀಷರೊಂದಿಗೆ ಹೊಂದಾಣಿಕೆ ಮಾಡುವ ಸ್ವಭಾವವನ್ನು ಕಥೋಲಿಕ್ ಸಮಾಜ ಪಾಲಿಸಿತ್ತು ಹಾಗೂ ಧರ್ಮಾಧಿಕಾರಿಗಳು ಬ್ರಿಟೀಷರ ಮೇಲೆ ನಂಬಿಕೆ ಇಟ್ಟಿದ್ದರಿಂದ ಕ್ರೈಸ್ತರು ೧೮೫೭ರ ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗಿಗಳಾಗಲು ಸಿದ್ಧರಿರಲಿಲ್ಲ[೬೦].

೨೦ನೇ ಶತಮಾನದಲ್ಲಿ ಸ್ವಾತಂತ್ರ್ಯ ಚಳುವಳಿ ಬಲಿಷ್ಠವಾಗುವುದನ್ನು ಗಮನಿಸಿದ ಕೆಲವು ಕೆಥೋಲಿಕರು ಇದರಲ್ಲಿ ಭಾಗವಹಿಸಿದರು. ಇವರಲ್ಲಿ ಶ್ರೀ ಮಾರ್ಸಲ್ ಸೋಜ್ (೧೮೮೭–೧೯೨೫) ರವರು ಮೊದಲಿಗರೆನ್ನಬಹುದು. ಇವರು ಕಾರ್ನಾಡ್ ಸದಾಶಿವರಾವ್ ಇವರ ಸಹವರ್ತಿಯಾಗಿದ್ದರು. ಬಿಜಯ್ ಚರ್ಚಿನ ಕದ್ರಿ ವಾರ್ಡಿನ ಸೋಜಾತೀನ್‌ನಲ್ಲಿ ಇವರ ಮನೆ. ೧೯೧೯ರಲ್ಲಿ ಮಹಾತ್ಮ ಗಾಂಧಿಯವರು ಪ್ರಾರಂಭಿಸಿದ ಸತ್ಯಾಗ್ರಹ ಹಾಗೂ ಅಸಹಕಾರ ಚಳುವಳಿಯಲ್ಲಿ ಭಾಗವಹಿಸಿದ ಇವರು ಮಂಗಳೂರಿನ ಪ್ರಥಮ ಕೆಥೋಲಿಕರೆನ್ನಬಹುದು. ಇವರು ಕದ್ರಿಯಲ್ಲಿ ''ಗಾಂಧಿ ಸ್ಕೂಲ್'' ಎಂಬ ಶಾಲೆಯನ್ನು ಪ್ರಾರಂಭಿಸಿದರು. ಗಾಂಧಿ ಟೋಪಿ ಹಾಗೂ ಖಾದಿಬಟ್ಟೆ ಬಳಸುತಿದ್ದುದರಿಂದ ಇವರನ್ನು 'ಗಾಂಧಿ ಮಾರ್ಸೆಲ್ ಸೋಜ್' ಎನ್ನುತ್ತಿದ್ದರು. ಇವರ ಮಗನಾದ ವಿಕ್ಟರ್ ೧೯೪೨ರ 'ಕ್ವಿಟ್ ಇಂಡಿಯ' ಚಳುವಳಿಯಲ್ಲಿ ಮಂಗಳೂರಿನಲ್ಲಿ ಬಾಗವಹಿಸಿದರು. ಇವರು ಬ್ರಟೀಷ್ ಸರಕಾರ ವಿರೋಧಿ ಪತ್ರಿಕೆ ಆರಂಭಿಸಿದ್ದರಿಂದ ಅವರನ್ನು ಬಂಧಿಸಲಾಯಿತು[೬೧].

ಸರ್ದಾರ್ ಡೆನಿಸ್ ಪೀಂತ್ (೧೯೦೬–೧೯೭೪) ಇವರು ಬೋಳಾರದಲ್ಲಿ ಜನಿಸಿದರು. ಭಾರತದ ಸ್ವಾತಂತ್ರ್ಯ ಚಳವಳಿಯ ಸಂಧರ್ಭದಲ್ಲಿ ಕಾಂಗ್ರೇಸ್ ಪಕ್ಷದ ಮೂಲಕ ದುಡಿದರು. ಇವರ ಸೇವೆಯನ್ನು ಗುರುತಿಸಿ ೧೯೫೭ ರಲ್ಲಿ ಕಾಪುವಿನಿಂದ ಮದ್ರಾಸಿನ, ನಂತರ ಕರ್ನಾಟಕದ ಶಾಸನ ಸಭೆಗೆ ಆಯ್ಕೆ ಮಾಡಲಾಯಿತು[೬೨].

ಶ್ರೀ ಜೋಕಿಮ್ ಆಳ್ವಾ (೧೯೦೭–೧೯೭೯) ರವರು ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಉಡುಪಿಯಲ್ಲಿ ಜನಿಸಿದರು. ಬೊಂಬಾಯಿಯಲ್ಲಿರುವಾಗ ಇವರು ಗಾಂಧೀಜಿಯವರಿಂದ ಪ್ರಭಾವಿತರಾಗಿ ಕಾಂಗ್ರೆಸ್ ಯುವದಳವನ್ನು ಸೇರಿದರು. ಸ್ವಾತಂತ್ರ್ಯ ಚಳುವಳಿಯಲ್ಲಿ

ಪಾಲ್ಗೊಂಡಿರುವುದಕ್ಕೆ ಹಲವು ಬಾರಿ ಬಂಧನಕ್ಕೊಳಗಾದರು. ಈ ಹೋರಾಟದ ಸಂಧರ್ಭದಲ್ಲಿ ಇವರ ಪತ್ನಿಯಾದ ಶ್ರೀಮತಿ ವಾಯ್ಲೆಟ್ ಆಳ್ವಾರವರು ತಮ್ಮ ಐದು ತಿಂಗಳ ಮಗುವಿನೊಂದಿಗೆ ಬಂಧನಕ್ಕೆ ಒಳಗಾಗಿದ್ದರು[೬೩].

ಶ್ರೀ ಸಿಪ್ರೀಯನ್ ಆಲ್ವಾರೀಸ್ ಇವರು ೧೯೦೭ರಲ್ಲಿ ಮಂಗಳೂರು ಸಮೀಪದ ಬಿಜಯಿ ಲಾಲ್ ಬಾಗ್ ನಲ್ಲಿ ಜನಿಸಿದರು. ಇವರು ಮುಂಬಯಿಯಲ್ಲಿರುವಾಗ ರಾಜಕೀಯ ಮತ್ತು ಸಮಾಜ ಸೇವೆ ಕಡೆಗೆ ಆಕರ್ಷಿತರಾದರು. ೧೯೨೭ರ ಹಿಂದೂ ಮುಸ್ಲಿಮ್ ಘರ್ಷಣೆವೇಳೆಯಲ್ಲಿ ಶಾಂತಿ ಸ್ಥಾಪಿಸುವುದಕ್ಕಾಗಿ ಜವಾಹರಲಾಲ್ ನೆಹರೂರವರ ಸಹೋದರಿ ಶ್ರೀಮತಿ ವಿಜಯ ಲಕ್ಷ್ಮಿ ಪಂಡಿತ್ ಹಾಗೂ ಶ್ರೀಮತಿ ಸರೋಜಿನಿ ನಾಯ್ಡುರವರ ಸಂಗಡ ಶ್ರಮಿಸಿದರು. ೧೯೩೦ರಲ್ಲಿ ಉಪ್ಪಿನ ಸತ್ಯಾಗ್ರಹದಲ್ಲಿ ಭಾಗವಹಿಸಿದ ಇವರನ್ನು ಬಂಧಿಸಲಾಯಿತು. ಇವರು ೧೯೪೧ರಲ್ಲಿ ಕದ್ರಿಯ ಆಲಿಸ್ ಸಿಕೋರಿರವರನ್ನು ವಿವಾಹವಾದರು. ಇವರು ೧೯೪೨ರಲ್ಲಿ ಕ್ವಿಟ್ ಇಂಡಿಯಾ ಚಳವಳಿಯಲ್ಲಿ ಭಾಗವಹಿಸಿದರು. ಇವರನ್ನು ನವೆಂಬರಿನಲ್ಲಿ ಬಂಧಿಸಲಾಯಿತು. ಶ್ರೀಮತಿ ಆಲ್ವಾರಿಸ್ ರವರು ಬಂಧನದಿಂದ ತಪ್ಪಿಸಿಕೊಂಡು ದಾಮನ್‌ಗೆ ಹೋದರು. ಶ್ರೀ ಆಲ್ವಾರಿಸ್‌ರವರು ೧೯೪೩ ರ ವರೆಗೆ ಬಂಧನದಲ್ಲಿದ್ದರು[೬೪].

ಶ್ರೀ ಫ್ರೆಡ್‌ರಿಕ್ ಮೈಕೆಲ್ ಪೀಂತ್ ಇವರು ಮುಂಬಯಿಯಲ್ಲಿ ೧೯೩೦ರಲ್ಲಿ ಸ್ವಾತಂತ್ರ್ಯ ಚಳವಳಿಗಿಳಿದು ಸುಮಾರು ನಾಲ್ಕುವರೆ ವರ್ಷ ಸೆರೆವಾಸ ಅನುಭವಿಸಿದರು. ನಂತರ ೧೯೩೪ರಿಂದ ಶ್ರೀ ಜಯ ಪ್ರಕಾಶ್ ನಾರಾಯಣ್ ಜೊತೆ ಸಮಾಜವಾದಿ ಪಕ್ಷದಲ್ಲಿ ಕಾರ್ಯನಿರ್ವಹಿಸಿದರು. ಹಾಗೂ ಇವರು ಸಮಾಜವಾದಿ ಪಕ್ಷದ ಸ್ಥಾಪಕ ಸದಸ್ಯರೂ ಹೌದು. ಇವರು ಕಾರ್ಮಿಕ ಚಳುವಳಿಯಲ್ಲೂ ತಮ್ಮನ್ನು ಗುರುತಿಸಿಕೊಂಡಿದ್ದರು. ಇವರು ಗಾಂಧಿಜೀಯವರ ತತ್ವಗಳನ್ನು ತನ್ನ ನಿಜ ಜೀವನದಲ್ಲಿ ಪಾಲಿಸುತ್ತಿದ್ದರು[೬೫].

ಶ್ರೀ ಪಾವ್ಲ ಫ್ರೆಡ್ರಿಕ್ ರೊಡ್ರಿಗ್ಸ್ ೧೯೨೪ ರಲ್ಲಿ ಗುರುಪುರದ ಬಳಿ ಜನಿಸಿದ ಇವರು ಸೈಂಟ್ ಲುವಿಸ್ ಕಾಲೇಜಿನ ವಿದ್ಯಾರ್ಥಿಯಾಗಿದ್ದ ಸಂಧರ್ಭದಲ್ಲಿ ಕಾಂಗ್ರೆಸ್ ಮೂಲಕ ಸ್ವಾತಂತ್ರ್ಯ ಚಳುವಳಿಗಿಳಿದರು. ಇವರು ೧೯೪೨ರ ಕ್ವಿಟ್ ಇಂಡಿಯಾ ಚಳುವಳಿಯಲ್ಲೂ ಭಾಗವಹಿಸಿದ್ದರು[೬೬].

ಪ್ರೊಟೆಸ್ಟಾಂಟ್ ಸಮುಧಾಯಕ್ಕೆ ಸೇರಿದ ದಿ. ಸತ್ಯಮಿತ್ರ ಬಂಗೇರ (೧೮೭೮–೧೯೪೦) ಕೊಣಾಜೆಯಲ್ಲಿ ಕ್ರಿಶ್ಚಿಯನ್ ಬಂಗೇರ ಮತ್ತು ರಾಹೇಲ್ ದಂಪತಿಗಳ ಮಗನಾಗಿ ಜನಿಸಿದರು.

ಮಂಗಳೂರಿನಲ್ಲಿ ಶಿಕ್ಷಕ ತರಬೇತಿ ಪಡೆದ ಇವರು ಆನಂದ ಪುರ ( ಕೊಡಗು) ಬಸ್ರೂರು, ಬಲ್ಮಠ ಮತ್ತು ಪಾಣೆಮಂಗಳೂರುಗಳ ಶಾಲೆಗಳಲ್ಲಿ ಶಿಕ್ಷಕರಾಗಿ ದುಡಿದಿದ್ದರು. ೧೯೨೦ರಲ್ಲಿ ಪಾಣೆಮಂಗಳೂರು ಶಾಲೆಯಲ್ಲಿ ಶಿಕ್ಷಕನಾಗಿ ದುಡಿಯುತ್ತಿದ್ದಾಗ ತನ್ನ ಮೇಷ್ಟ್ರು ಕೆಲಸಕ್ಕೆ ರಾಜಿನಾಮೆಯಿತ್ತು ಸ್ವಾತಂತ್ರ್ಯ ಹೋರಾಟಕ್ಕೆ ಧುಮಿಕಿದರು. ೧೯೩೦ರ ಉಪ್ಪಿನ ಸತ್ಯಾಗ್ರಹದಲ್ಲಿ ಭಾಗವಹಿಸಿದ್ದರು. ಮುಲ್ಕಿಯಲ್ಲಿ ಉಪ್ಪು ತಯಾರು ಮಾಡಿ ನಂತರ ಮುಲ್ಕಿ ಮೈದಾನನಿಲ್ಲಿ ಭಾಷಣ ಮಾಡಿದರು. ಇದಕ್ಕಾಗಿ ಪೋಲಿಸರಿಂದ ಗುದ್ದು ತಿಂದಿದ್ದರು[೬೭]. ೧೯೨೩ರಲ್ಲಿ ಬಂಟ್ವಾಳದಲ್ಲಿ ನೆರೆ ಬಂದಾಗ ಕಾಂಗ್ರೆಸ್ ಪಕ್ಷದ ವತಿಯಿಂದ ಜನರಿಗೆ ಬಟ್ಟೆಬರೆಗಳನ್ನು ಹಂಚಿದರು. ಕೊಡಗಿನಲ್ಲಿ ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ್ದುದಕ್ಕಾಗಿ ಅಲ್ಲಿಂದ ಗಡಿಪಾರಿಗೆ ಒಳಗಾದರು. ೧೯೪೦ರಲ್ಲಿ ತೀರಿಕೊಳ್ಳುವಷ್ಟರತನಕ ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಂಡಿದ್ದರು. ಸಾಯುವಷ್ಟರ ತನಕ ಕೈಮಗ್ಗದ ಖದ್ದರ್ ವಸ್ತ್ರ ಮತ್ತು ಖಾದಿ ಟೋಪಿ ಮಾತ್ರ ಧರಿಸುತ್ತಿದ್ದರು. ಇವರು ನಾಡಿಗೆ ಶಿಕ್ಷಕನಾಗಿ ಸ್ವಾತಂತ್ರ್ಯ ಹೋರಾಟಗಾರನಾಗಿ ಹಾಗೂ ತುಳು ಸಾಹಿತ್ಯ ಕ್ಷೇತ್ರಕ್ಕೂ ಸಹ ಅಮೂಲ್ಯ ಸೇವೆಯನ್ನು ನೀಡಿರುತ್ತಾರೆ.



ದಕ್ಷಿಣ ಕನ್ನಡದ ಕ್ರೈಸ್ತ ಸಮುದಾಯಕ್ಕೆ ಸೇರಿದ ಸಿಮ್ಸನ್ ಸೋನ್ಸ್ ಮತ್ತು ಇತರರುಗಳು ಜಿಲ್ಲೆಯ ಕಾರ್ಮಿಕ ಚಳುವಳಿಗಳಾದ ಬೀಡಿ ಕಾರ್ಮಿಕರ ಹೋರಾಟಗಳು, ಕೈಮಗ್ಗ ಕಾರ್ಮಿಕರ ಹೋರಾಟಗಳನ್ನು ಸಂಘಟಿಸುವಲ್ಲಿ ಮಹತ್ತರ ಪಾತ್ರವಹಿಸಿದ್ದಾರೆ ಜಿಲ್ಲೆಯಲ್ಲಿ ಕಮ್ಯೂನಿಷ್ಟರ ಚಟುವಟಿಕೆಗಳು ಉಚ್ಛ್ರಾಯ ಘಟ್ಟದಲ್ಲಿದ್ದಾಗ ಸಮುದಾಯದ ಹಲವರು ಈ ಸಂಘಟನೆಯಲ್ಲಿ ಗುರುತಿಸಿಕೊಂಡು ಸಕ್ರಿಯವಾಗಿ ದುಡಿದಿದ್ದಾರೆ. ಆದರೆ ಸಾಮಾನ್ಯವಾಗಿ ಜಿಲ್ಲೆಯಲ್ಲಿ ಕ್ರೈಸ್ತ ಸಮುದಾಯದ ಒಲವು ಕಮ್ಯೂನಿಷ್ಟರು ಹಾಗೂ ಸೋಶಿಯಲಷ್ಟರ ಕಡೆಗೆ ಗಮನಾರ್ಹವಾಗಿ ಇದ್ದಿರಲಿಲ್ಲ ಎಂಬುದಾಗಿ ಕಂಡು ಬರುತ್ತದೆ. ಆದರೆ ಜಿಲ್ಲೆಯಿಂದ ಹೊರಗಡೆ ದೂರದ ಮುಂಬಯಿಯಲ್ಲಿ ಮಂಗಳೂರಿಗರಾದ ಚಫ್ರಾ ಡಿ'ಕೋಸ್ಟಾ ತನ್ನ ಪ್ರಗಲ್ಭ ಕವಿತೆಗಳ ಮೂಲಕ, ಸೋಶಿಯಲಿಷ್ಟರ ಹೋರಾಟಕ್ಕೆ ಪ್ರೇರಣೆ ನೀಡಿದ್ದಾರೆ. ಪೀಟರ್ ಆಲ್ವಾರಿಸ್ ಮತ್ತು ಪೀಟರ್ ಡಿ ಮೆಲ್ಲೊ ಇವರುಗಳೂ ೧೯೫೦ ಮತ್ತು ೬೦ ರ ದಶಕದಲ್ಲಿ ಮುಂಬಯಿಯಲ್ಲಿ ಕಾರ್ಮಿಕ ಹೋರಾಟಗಳನ್ನು ಸಂಘಟಿಸುವಲ್ಲಿ ಬಹಳಷ್ಟು ದುಡಿದಿದ್ದಾರೆ. ಸಮುದಾಯದ ಮಹಾನ್ ರಾಜಕೀಯ ಮುತ್ಸದ್ದಿ ಜಾರ್ಜ್ ಫೆರ್ನಾಂಡಿಸರು ಸಹ ಜಿಲ್ಲೆಯ ಹೊರಗಡೆ ಕಾರ್ಮಿಕ

ಹೋರಾಟಗಳಿಗೆ ನೇತೃತ್ವ ಕೊಟ್ಟು ಬಹಳಷ್ಟು ಸಾಧನೆಗಳ ಮೆಟ್ಟಲೇರಿದವರು. ಕಾರ್ಮಿಕ ಹೋರಾಟಗಳಲ್ಲೂ ಸಹ ವೈಯುಕ್ತಿಕ ನೆಲೆಯಲ್ಲಿ ಶೌರ್ಯ ಪ್ರದರ್ಶಿಸಿದ ಮೇಲಿನ ಕೆಲವು ವ್ಯಕ್ತಿಗಳ ನಿದರ್ಶನ ಸಿಗುತ್ತದೆಯೇ ಹೊರತು ಕ್ರೈಸ್ತರು ಒಂದು ಸಮುದಾಯವಾಗಿ ದೊಡ್ಡ ಪ್ರಮಾಣದ ಹೋರಾಟಗಳಲ್ಲಿ ಪಾಲುಗೊಂಡಿರುವುದರ ಕುರುಹುಗಳು/ ಉದಾಹರಣೆಗಳು ಕಡಿಮೆಯೆಂದರೆ ತಪ್ಪಾಗಲಾರದು[೬೮].

ಸ್ವಾತಂತ್ರ್ಯ ಹೋರಾಟದಲ್ಲಿ ಕ್ರೈಸ್ತರು ಒಂದು ಸಮುದಾಯವಾಗಿ ಅವರ ಪಾಲ್ಗೊಳ್ಳುವಿಕೆ ಉತ್ತೇಜನಕಾರಿಯಾಗಿರಲಿಲ್ಲವೆಂದು ಅಭಿಪ್ರಾಯಪಡಬಹುದು. ಗಾಂಧೀಜಿಯವರ ಅಸಹಕಾರ ಚಳುವಳಿಗೆ ಸಾಮಾನ್ಯವಾಗಿ ಸಮಾಜದ ಇತರೇ ವರ್ಗಗಳಿಂದ ಬಂದಷ್ಟು ಬೆಂಬಲ ಈ ನಿಟ್ಟಿನಲ್ಲಿ ಇಲ್ಲಿನ ಕ್ರೈಸ್ತ ಸಮುದಾಯದಿಂದ ವ್ಯಕ್ತವಾಗಲಿಲ್ಲವೆಂದು ಹೇಳಲಾಗಿದೆ. ಕಾರಣ ಕ್ರೈಸ್ತರಲ್ಲಿ ಕೇವಲ ಕೆಲವೇ ಮಂದಿ ಮಾತ್ರ ತಾವು ಅಲಂಕರಿಸಿದ ಸರಕಾರಿ, ಹುದ್ದೆಗಳನ್ನು ಬಿಟ್ಟು ಈ ಸ್ವಾತಂತ್ರ್ಯ ಚಳುವಳಿಯಲ್ಲಿ ಧುಮುಕಿದ್ದಾರೆ. ಡಾ. ಫ್ರಾಂಕ್ ಡಿಸೋಜರು ದಕ್ಷಿಣ ಕನ್ನಡ ಜಿಲ್ಲೆಯ ಪ್ರಪ್ರಥಮ ಕ್ರೈಸ್ತ ಅಭ್ಯರ್ಥಿಯಾಗಿ ಐ.ಸಿ. ಎಸ್‌ಗೆ ಆಯ್ಕೆಗೊಂಡಿದ್ದರು. ಕಾನೂನು ಹಾಗೂ ನ್ಯಾಯಿಕ ಸೇವೆಗಳಲ್ಲಿ ಮದ್ರಾಸ್ ಹೈಕೋರ್ಟ್ ತನಕ ಸೇವಾ ಎತ್ತರಕ್ಕೇರಿದವರೂ ಇದ್ದರು. ಪೋಲಿಸ್ ಹಾಗೂ ಸಾಮಾನ್ಯ ಆಡಳಿತ ವಿಭಾಗದಲ್ಲೂ ಸಣ್ಣ ಪ್ರಾಮಾಣದಲ್ಲಿ ಇಲ್ಲಿನ ಕ್ರೈಸ್ತರು ನಿಯುಕ್ತಿಗೊಂಡಿದ್ದರು. ಸಿಬ್ಬಂದಿಗಳಾಗಿ ಕೆಲಸಮಾಡುತ್ತಿದ್ದ ಆನೇಕರು ನಂತರ ಎಸ್ಟೇಟ್ ಮಾಲಕರಾಗಿದ್ದನ್ನೂ ಕಾಣಬಹುದಾಗಿದೆ. ಸಮುದಾಯದ ಕೆಲವರು ಕಾಫಿ, ಗೇರು ಬೀಜ, ಕೈಮಗ್ಗದಂತಹ ಉದ್ಯಮಗಳಲ್ಲೂ ಪಾಲುದಾರರಾಗಿ ತೊಡಗಿಸಿಕೊಂಡವರಲ್ಲಿ ಹಲವರು ಉದ್ಯಮ ಪತಿಗಳಾಗಿರುತ್ತಾರೆ. ೧೯ ನೇಯ ಶತಮಾನದ ಕೊನೆಯ ಭಾಗದಲ್ಲಿ ಇಲ್ಲಿನ ಕ್ರೈಸ್ತರಲ್ಲಿ ಕೆಲವರು ಪೌರೋಹಿತ್ಯದ ಅವಕಾಶವನ್ನು ಗಳಿಸಿಕೊಂಡರು. ಇನ್ನು ಕೆಲವರು ಶಿಕ್ಷಣ ಸಂಸ್ಥೆಗಳನ್ನು ಪ್ರಾರಂಭಿಸಿದರಲ್ಲದೆ ಅಧ್ಯಾಪನ ವೃತ್ತಿ ಆಯ್ದುಕೊಂಡು ಬದುಕನ್ನು ನಡೆಸಿರುವುದು ಕಾಣಸಿಗುತ್ತದೆಯೇ ಹೊರತು ಸ್ವಾತಂತ್ರ್ಯ ಹೋರಾಟದಲ್ಲಿ ವಿಶೇಷ ಆಸಕ್ತಿ ವಹಿಸಿರುವುದು ಕಡಿಮೆ ಎನ್ನಬಹುದಾಗಿದೆ[೬೯].

ಸ್ವಾತಂತ್ರ್ಯ ಪೂರ್ವದಲ್ಲಿ ಕ್ರೈಸ್ತ ಸಮೂದಾಯವು ದ.ಕ. ಜಿಲ್ಲೆಯ ವಿವಿಧ ಕ್ಷೇತ್ರಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡು ಪ್ರಗತಿಯನ್ನೂ ಸಾಧಿಸುವಲ್ಲಿ ನೀಡಿದ ಕೊಡುಗೆಗಳನ್ನು ದಾಖಲಿಸಿದೆ. ಈ ದೇಶಕ್ಕೆ ಸ್ವಾತಂತ್ರ್ಯ ಬಂದ ನಂತರ ಪ್ರಜಾಪ್ರಭುತ್ವ ರಾಜಕೀಯ ವ್ಯವಸ್ಥೆ

ಅನುಷ್ಟಾನಗೊಂಡಿತು. ಸಂವಿಧಾನವು ಕ್ರೈಸ್ತರನ್ನು ಅಲ್ಪಸಂಖ್ಯಾತರೆಂದು ಗುರುತಿಸಿ, ಅವರ ಹಕ್ಕುಗಳನ್ನು ರಕ್ಷಿಸಿದೆಯಾದರೂ ಅವರ ರಾಜಕೀಯ ಪ್ರಾತಿನಿದ್ಯತೆ, ಹಾಗೂ ನಿರ್ಣಯಗಳ ಪ್ರಾಮುಖ್ಯತೆಯನ್ನು ಗಮನಿಸುವಾಗ ಅವರೊಳಗಿನ ಭಾಗವಹಿಸುವಿಕೆಯು ಹಿನ್ನಡೆಯಾಗಿದೆ ಎನ್ನುವ ಅಭಿಪ್ರಾಯಗಳು ಅಭಿವ್ಯಕ್ತಿಗೊಳ್ಳುತ್ತದೆ. ಒಟ್ಟಾಗಿ, ಈ ಸಮೂದಾಯವು ವಿವಿಧ ಸವಾಲುಗಳನ್ನು ಎದುರಿಸಬೇಕಾಗಿದೆ, ಮತ್ತು ಬಾಸೆಲ್ ಮಿಶನರಿಗಳಿಗೆ ಸೇವೆ ಸಲ್ಲಿಸಲು ಸಿಕ್ಕಿದ ಉತ್ತೇಜನ ಹಾಗೂ ಮುಕ್ತ ವಾತಾವರಣ ಇಂದಿನ ಕ್ರೈಸ್ತ ಜನಾಂಗಕ್ಕೆ ಸಿಗುತ್ತಿಲ್ಲವೆನ್ನುವ ನಿಲುವುಗಳು ಸಂಶೋಧನೆಗೆ ಒಂದು ಭೂಮಿಕೆಯನ್ನು ಒದಗಿಸುತ್ತದೆ ಅಲ್ಪಸಂಖ್ಯಾತರ ಸ್ಥಾನದಲ್ಲಿರುವ ಕ್ರೈಸ್ತರ ಸಬಲೀಕರಣಕ್ಕೆ ರಾಜ್ಯದ ಬೆಂಬಲ ಅಗತ್ಯ. ಅದರಲ್ಲಿ ಪಾಲ್ಗೊಳ್ಳಲು ಈ ಸಮುದಾಯ ಎಷ್ಟು ಪ್ರಯತ್ನಿಸಿದೆ ಎನ್ನುವುದನ್ನೂ ಮುಂದಿನ ಅಧ್ಯಾಯವು ಅಂಕಿ ಅಂಶಗಳನ್ನೊಳಗೊಂಡಂತೆ ವಿಶ್ಲೇಷಿಸುತ್ತದೆ.

## ಕೊನೆ ಟಿಪ್ಪಣಿಗಳು

೧. ಅಶೋಕ ರಾಖೇಶ ಡಿ'ಸೋಜ ಹಂಪಿ ಕನ್ನಡ ವಿಶ್ವ ವಿದ್ಯಾನಿಲಯದ ಎಂ. ಫಿಲ್. ಪದವಿಗೆ ಪೂರಕವಾಗಿ ಬರೆಯಲ್ಪಟ್ಟ "ಮ್ಯಾಂಗಲೋರ್ ಮ್ಯಾಗಜೀನ್‌ನಲ್ಲಿ ಬಿಂಬಿತ ದಕ್ಷಿಣ ಕನ್ನಡ" ಸಂಪ್ರಬಂಧ, ೨೦೦೮ ಪುಟ – ೫

೨. ದಕ್ಷಿಣ ಕನ್ನಡ ಜಿಲ್ಲೆಯ ಅಂಕಿ – ಅಂಶಗಳ ನೋಟ, ೨೦೦೩ –೦೪ ಪುಟ – ೬೫

೩. ಅದೇ, ಪುಟ–೬೫

೪. ಡಾ. ಕೆ. ಜಿ. ವಸಂತ ಮಾಧವ, "ದಕ್ಷಿಣ ಕನ್ನಡ ಜಿಲ್ಲೆಯ ಇತಿಹಾಸ ಸಮೀಕ್ಷೆ" ಸುದರ್ಶನ ಗ್ರಂಥ

ವಿಜಯ ಕಾಲೇಜ್ ಟ್ರಸ್ಟ್ ಮುಲ್ಕಿ ಪ್ರಕಾಶಿತ, ೧೯೭೭, ಪುಟ, ೧೦೭ – ೧೧೬ .

೫. ಅದೇ, ಪುಟ

೬. ದ.ಕ. ಜಿಲ್ಲೆಯ ಅಂಕಿ ಅಂಶಗಳ ನೋಟ ೨೦೦೩–೦೪ ಪುಟ ೬೫

೭. ಅದೇ, ಪುಟ–೬೫

೮. ಅದೇ, ಪುಟ–೬೫

೯. ಅದೇ, ಪುಟ–೬೫

೧೦. ಅದೇ, ಪುಟ–೬೫

೧೧. ಅದೇ ಪುಟ–೬೫

೧೨. ಅದೇ, ಪುಟ–೬೫

೧೩. ಅದೇ, ಪುಟ–೬೫

೧೪. ರೆ. ಡಾ. ವಿಜಯಕುಮಾರ್‌ರವರ "ಕರ್ನಾಟಕದಲ್ಲಿ ಪ್ರೊಟೆಸ್ತಾಂತ ಮಿಷನ್ನುಗಳ ಚರಿತ್ರೆ" ಕನ್ನಡ ದೈವಜ್ಞಾನ ಸಾಹಿತ್ಯ ಸಮಿತಿ, ಮಂಗಳೂರು ಪ್ರಕಾಶಿತ ೨೦೦೪, ಪುಟ ಸಂಖ್ಯೆ – ೦೯.

೧೫. ಅದೇ, ಪುಟ ಸಂಖ್ಯೆ – ೧೦

೧೬. ರೆ. ಫಾ. ಮಾರ್ಕ್ ವಾಲ್ಡಾರ್ ರವರ "ಜಿಲ್ಲೆಯ ಬೆಳವಣಿಗೆಯಲ್ಲಿ ಕ್ರೈಸ್ತ ಧರ್ಮ ಸಭೆಯ ಪಾತ್ರ" ಸುದರ್ಶನ ಗ್ರಂಥ, ವಿಜಯ ಕಾಲೇಜ್ ಟ್ರಸ್ಟ್, ಮುಲ್ಕಿ ಪ್ರಕಾಶಿತ, ೧೯೭೭, ಪುಟ –೩೮೬.

೧೭. ಅದೇ, ಪುಟ ೩೮೬ – ೩೮೭

೧೮. ರೆ. ಡಾ. ಪಿಯುಸ್ ಫಿಡೆಲಿಸ್ ಪಿಂಟೋರವರ "ಕರಾವಳಿ ಕರ್ನಾಟಕದ ಇತಿಹಾಸ (೧೫೦೦ – ೧೭೬೩)", ಸಮನ್ವಯ ಪ್ರಕಾಶನ ಮಂಗಳೂರು, ೧೯೯೯ ಪುಟ– ೧೦೯

೧೯. ರೆ. ಡಾ. ಪಿಯುಸ್ ಫಿಡೆಲಿಸ್ ಪಿಂಟೋರವರ "ಆಂಗ್ಲೋ–ಮೈಸೂರು ಸಂಬಂಧದ ಹಿನ್ನಲೆಯಲ್ಲಿ ಕರಾವಳಿ ಕರ್ನಾಟಕದ ಕೊಂಕಣಿ ಕ್ರೈಸ್ತರು" (೧೭೬೧–೧೭೯೯) ಸಮನ್ವಯ ಪ್ರಕಾಶನ ಮಂಗಳೂರು, ೧೯೯೯ ಪುಟ ಸಂಖ್ಯೆ – ೨೧.

೨೦ ರೆ. ಫಾ. ಮಾರ್ಕ್ ವಾಲ್ಡಾರ್‌ರವರ "ಜಿಲ್ಲೆಯ ಬೆಳವಣಿಗೆಯಲ್ಲಿ ಕ್ರೈಸ್ತ ಧರ್ಮ ಸಭೆಯ ಪಾತ್ರ" ಸುದರ್ಶನ ಗ್ರಂಥ – ವಿಜಯ ಕಾಲೇಜ್ ಟ್ರಸ್ಟ್, ಮುಲ್ಕಿ ಪ್ರಕಾಶಿತ ೧೯೭೭ ಪುಟ – ೩೮೭

೨೧. ರೆ. ಡಾ. ವಿಜಯ ಕುಮಾರ್ ರವರ "ಕರ್ನಾಟಕದಲ್ಲಿ ಪ್ರೊತೆಸ್ತಾಂತ ಮಿಷನ್ನುಗಳ ಚರಿತ್ರೆ, ಕನ್ನಡ ದೈವಜ್ಞಾನ ಸಾಹಿತ್ಯ ಸಮಿತಿ, ಮಂಗಳೂರು ಪ್ರಕಾಶಿತ – ೨೦೦೪ ಪುಟ ಸಂಖ್ಯೆ – ೧೧೩

೨೨. ಅದೇ, ಪುಟ ಸಂಖ್ಯೆ – ೧೧೬

೨೩. ಭಕ್ತಿ ವಿ. ಹೆಗ್ಡೆಯವರ "ಬಾಸೆಲ್ ಮಿಸ್ಸಿಯನ್ ಇನ್ ಮೇಂಗಲೋರ್ ೧೭೫ ಇಯರ್ಸ್ ಅಫ್ ಟ್ರಾನ್ಸ್ ಫಾರ್ಮಿಂಗ್ ಲೈವ್ಸ್" ಸಿಟಿ ಹೆರಾಲ್ಡ್ ಅಂಕಣ – ಡೆಕ್ಕನ್ ಹೆರಾಲ್ಡ್ ಇಂಗ್ಲೀಷ್ ದೈನಿಕ ದಿನಾಂಕ ಫೆಬ್ರವರಿ ೨೧, ೨೦೦೯ ಪುಟ – ೦೪.

೨೪. ಪ್ರಜಾವಾಣಿ ದಿನಪತ್ರಿಕೆ, ಕರಾವಳಿ ಅಂಕಣ, ೧೫ನೇ ಎಪ್ರಿಲ್ ೨೦೦೯

೨೫. ಅ. ಬಾಲಕೃಷ್ಣ ಶೆಟ್ಟಿ ಪೊಳಲಿಯವರ ಲೇಖನ ''ಧಾರ್ಮಿಕ ಮತ್ತು ಸಾಮಾಜಿಕ ಸುಧಾರಣೆಗಳು'' ಮುಕುಂದ ಪ್ರಭು ಸಂಪಾದಿತ, ''ಪೊಲಿ'' – ಕೆನರಾ ೨೦೦ ವರುಷಗಳು ತುಂಬಿದ ಸಂಧರ್ಭದಲ್ಲಿ ದಕ್ಷಿಣ ಕನ್ನಡ ಜಿಲ್ಲಾ ಆಡಳಿತವು ಹೊರ ತಂದ ಸಂಸ್ಮರಣಾ ಗ್ರಂಥ – ಶ್ರೀ ಎಂ. ಮುಕುಂದ ಪ್ರಭು ಪ್ರಕಾಶಿತ, ೨೦೦೦. ಪುಟ–

೨೬. ರೆ. ಡಾ. ವಿಜಯ ಕುಮಾರ್ ರವರ ''ಕರ್ನಾಟಕದಲ್ಲಿ' ಪ್ರೊತೆಸ್ತಾಂತ ಮಿಷನ್ನುಗಳ ಚರಿತ್ರೆ'' ಕನ್ನಡ ದೈವಜ್ಞಾನ ಸಾಹಿತ್ಯ ಸಮಿತಿ, ಮಂಗಳೂರು, ೨೦೦೪ ಪುಟ – ೧೧೪ & ೧೧೫.

೨೭. ಡಾ. ಸೂರ್ಯನಾಥ ಕಾಮತ್ ರ ''ದಕ್ಷಿಣ ಕನ್ನಡದಲ್ಲಿ ಸ್ವಾತಂತ್ಯ ಹೋರಾಟ'' ಅಡ್ಯನಡ್ಕ ಕೃಷ್ಣಭಟ್(ಸಂ) ಸುದರ್ಶನ ಗ್ರಂಥ, ವಿಜಯ ಕಾಲೇಜ್ ಟ್ರಸ್ಟ್, ಮುಲ್ಕಿ ಪ್ರಕಾಶಿತ ೧೯೭೭ ಪುಟ ಸಂಖ್ಯೆ – ೧೩೧.

೨೮. ರೆ. ಫಾ. ಮಾರ್ಕ್ ವಾಲ್ಡಾರ್‌ರವರ ''ಜಿಲ್ಲೆಯ ಬೆಳವಣಿಗೆಯಲ್ಲಿ ಕ್ರೈಸ್ತ ಧರ್ಮ ಸಭೆಯ ಪಾತ್ರ'' ಸುದರ್ಶನ ಗ್ರಂಥ, ವಿಜಯ ಕಾಲೇಜ್ ಟ್ರಸ್ಟ್ ,ಮುಲ್ಕಿ ಪ್ರಕಾಶಿತ ೧೯೭೭ ಪುಟ – ೩೮೭

೨೯. ಅದೇ, ಪುಟ – ೩೮೮

೩೦. ಶಾಲೆಗಳ ಮಾಹಿತಿ ಕೃತಿ ''ಅನುದಾನಿತ ಶಾಲಾ ದರ್ಪಣ'' ಸ್ಮರಣ ಸಂಚಿಕೆ ೨೦೦೬. ದಕ್ಷಿಣ ಕನ್ನಡ ಜಿಲ್ಲಾ ಅನುದಾನಿತ ಶಾಲೆಗಳ ಆಡಳಿತದವರ ಸಂಘ. (ರಿ) ಮಂಗಳೂರು ಪ್ರಕಾಶಿತ – ೨೦೦೬ ಪುಟ – ೩೫೦.

೩೧. ಡಾ. ಸೂರ್ಯನಾಥ ಕಾಮತ್‌ರ ''ದಕ್ಷಿಣ ಕನ್ನಡದಲ್ಲಿ ಸ್ವಾತಂತ್ರ್ಯ ಹೋರಾಟ'' ಸುದರ್ಶನ ಗ್ರಂಥ, ವಿಜಯ ಕಾಲೇಜು ಟ್ರಸ್ಟ್, ಮುಲ್ಕಿ ಪ್ರಕಾಶಿತ ೧೯೭೭ ಪುಟ – ೧೩೧.

೩೨. ರೆ. ಡಾ. ವಿಜಯಕುಮಾರ್ ರವರ ''ಕರ್ನಾಟಕದಲ್ಲಿ ಪ್ರೊತೆಸ್ತಾಂತ ಮಿಷನ್‌ಗಳ ಚರಿತ್ರೆ'' ಕನ್ನಡ ದೈವಜ್ಞಾನ ಸಾಹಿತ್ಯ ಸಮಿತಿ, ಮಂಗಳೂರು ಪ್ರಕಾಶಿತ, ೨೦೦೪ ಪುಟ ೧೧೯.

೩೩. ಅದೇ, ಪುಟ ಸಂಖ್ಯೆ ೧೧೯ – ೧೨೦

೩೪. ಅದೇ, ಪುಟ ಸಂಖ್ಯೆ ೧೨೦.

೩೫. ಅದೇ, ಪುಟ ಸಂಖ್ಯೆ ೧೨೦.

೩೬. ಎಸ್. ವೆಂಕಟೇಶ್ ರವರ ಲೇಖನ "ಕರ್ನಾಟಕಕ್ಕೆ ಕ್ರೈಸ್ತ ಧರ್ಮದ ಕೊಡುಗೆ", ಜನಪದ ಮಾಸಿಕ ಸಂಪುಟ ೩೭ ಸಂಚಿಕೆ ೯ ಡಿಸೆಂಬರ್ ೨೦೦೨ ಪುಟ ಸಂಖ್ಯೆ – ೨೯.

೩೭. ರೆ. ಫಾ. ಮಾರ್ಕ್ ವಾಲ್ಡಾರ್‌ರವರ "ಜಿಲ್ಲೆಯ ಬೆಳವಣಿಗೆಯಲ್ಲಿ ಕ್ರೈಸ್ತ ಧರ್ಮ ಸಭೆಯ ಪಾತ್ರ" ಸುದರ್ಶನ ಗ್ರಂಥ ವಿಜಯ ಕಾಲೇಜ್ ಟ್ರಸ್ಟ್ ಮುಲ್ಕಿ ಪ್ರಕಾಶಿತ ೧೯೭೭, ಪುಟ ಸಂಖ್ಯ – ೩೯೦

೩೮. ಎಸ್. ವೆಂಕಟೇಶ್‌ರವರ ಲೇಖನ "ಕರ್ನಾಟಕಕ್ಕೆ ಕ್ರೈಸ್ತ ಧರ್ಮದ ಕೊಡುಗೆ" ಜನಪದ ಮಾಸಿಕ ಸಂಪುಟ

೩೭. ಸಂಚಿಕೆ ೯ ಡಿಸೆಂಬರ್ ೨೦೦೨ ಪುಟ ಸಂಖ್ಯೆ –೩೦

೩೯. ರೆ. ಫಾ. ಮಾರ್ಕ್ ವಾಲ್ಡಾರ್‌ರವರ "ಜಿಲ್ಲೆಯ ಬೆಳವಣಿಗೆಯಲ್ಲಿ ಕ್ರೈಸ್ತ ಧರ್ಮ ಸಭೆಯ ಪಾತ್ರ "ಸುದರ್ಶನ ಗ್ರಂಥ, ವಿಜಯ ಕಾಲೇಜ್ ಟ್ರಸ್ಟ್, ಮುಲ್ಕಿ ಪ್ರಕಾಶಿತ, ೧೯೭೭ ಪುಟ ಸಂಖ್ಯೆ –೩೮೮.

೪೦. ಎಸ್. ವೆಂಕಟೇಶ್‌ರವರ ಲೇಖನ ಕರ್ನಾಟಕಕ್ಕೆ ಕ್ರೈಸ್ತ ಧರ್ಮದ ಕೊಡುಗೆ" ಜನಪದ ಮಾಸಿಕ ಸಂಪುಟ ೩೭ ಸಂಚಿಕೆ ೯ ಡಿಸೆಂಬರ್ ೨೦೦೨ ಪುಟ – ೩೦.

೪೧. ಅದೇ, ಪುಟ–೩೦

೪೨. ಅದೇ, ಪುಟ– ೩೦.

೪೩. ರೆ. ಫಾ. ಮಾರ್ಕ್ ವಾಲ್ಡಾರ್‌ರವರ "ಜಿಲ್ಲೆಯ ಬೆಳವಣಿಗೆಯಲ್ಲಿ ಕ್ರೈಸ್ತ ಧರ್ಮ ಸಭೆಯ ಪಾತ್ರ "ಸುದರ್ಶನ ಗ್ರಂಥ, ವಿಜಯ ಕಾಲೇಜು ಟ್ರಸ್ಟ್, ಮುಲ್ಕಿ ಪ್ರಕಾಶಿತ ೧೯೭೭ ಪುಟ ಸಂಖ್ಯೆ –೩೮೮.

೪೪. ಅದೇ, ಪುಟ ಸಂಖ್ಯೆ – ೩೮೯

೪೫. "ದಿ ಡಯೋಸಿಸ್ ಅಫ್ ಮಂಗಳೂರು" ದಿ ಕಥೋಲಿಕ್ ಡೈರೆಕ್ಟರಿ ಅಫ್ ಇಂಡಿಯಾ ೨೦೦೫–೦೬, ಎ ಕ್ಲಾರೆಟಿಯನ್ ಪಬ್ಲಿಕೇಶನ್, ಮಲ್ಲೇಶ್ವರಂ, ಬೆಂಗಳೂರು ೨೦೦೦, ಪುಟಗಳು ೯೧೫–೯೨೬.

೪೬. ರೆ. ಫಾ. ಮಾರ್ಕ್ ವಾಲ್ಡಾರ್‌ರವರ ಜಿಲ್ಲೆಯ ಬೆಳವಣಿಗೆಯಲ್ಲಿ ಕ್ರೈಸ್ತ ಧರ್ಮ ಸಭೆಯ ಪಾತ್ರ "ಸುದರ್ಶನ ಗ್ರಂಥ" ವಿಜಯ ಕಾಲೇಜು ಟ್ರಸ್ಟ್ ಮುಲ್ಕಿ ಪ್ರಕಾಶಿತ ೧೯೭೭ ಪುಟ ೩೯೦.

೪೭. ಅದೇ, ಪುಟ ಸಂಖ್ಯೆ ೩೯೧–೩೯೨.

೪೮. ರೆ. ಡಾ. ಪಿಯುಸ್ ಫಿಡೆಲಿಸ್ ಪಿಂಟೊರವರ "ಕ್ರಿಶ್ಚಿಯನ್ಸ್ ಇನ್ ಸೌತ್ ಕೆನರಾ" ಪೋಲಿ – ಕೆನರಾ ೨೦೦ ಎಂಬ ಸಂಸ್ಮರಣ ಸಂಚಿಕೆ, ಶ್ರೀ ಮುಕುಂದ ಪ್ರಭು ಇವರಿಂದ ಸಂಪಾದಿತ, ೨೦೦೦, ಪುಟ ಸಂಖ್ಯೆ – ೨೭೪.

೪೯. ಅದೇ, ಪುಟ ಸಂಖ್ಯೆ ೨೭೪.

೫೦. ಡಾ. ವೆಲೇರಿಯನ್ ರಾಡ್ರಿಗೆಸ್‌ರ ಲೇಖನ "ಕೆನರಾ ಕ್ರೈಸ್ತರು ಮತ್ತು ಅವರ ರಾಜಕೀಯ ಹಂಬಲ" ೨೦೦೪ ರ ಡಿಸೆಂಬರ್ ೨೬ ರಿಂದ ೨೯ರ ವರೆಗೆ ಮಂಗಳೂರಿನಲ್ಲಿ ಜರುಗಿದ ಕೆನರಾ ಕೊಂಕಣಿ ಕೆಥೋಲಿಕರ ಜಾಗತಿಕ ಸಮ್ಮೇಳನದ ಸಂಸ್ಮರಣ ಕೃತಿಯಾದ 'ಅಸ್ಮಿತಾಯ' ದಿಂದ, ಪುಟ ಸಂಖ್ಯೆ –೮೨.

೫೧. ಅದೇ, ಪುಟ ಸಂಖ್ಯೆ – ೮೨

೫೨. ಡಾ. ಸೂರ್ಯನಾಥ ಕಾಮತ್‌ರ "ದಕ್ಷಿಣ ಕನ್ನಡದಲ್ಲಿ ಸ್ವಾತಂತ್ರ್ಯ ಹೋರಾಟ" ಸುದರ್ಶನ ಗ್ರಂಥ. ವಿಜಯ ಕಾಲೇಜ್ ಟ್ರಸ್ಟ್, ಮುಲ್ಕಿ ಪ್ರಕಾಶಿತ ೧೯೭೭ ಪುಟ ೧೩೧

೫೩. ಅದೇ, ಪುಟ – ೧೩೧

೫೪ ಡಾ. ವೆಲೇರಿಯನ್ ರಾಡ್ರಿಗಸ್ ರ ಲೇಖನ "ಕೆನರಾ ಕ್ರೈಸ್ತರು ಮತ್ತು ಅವರ ರಾಜಕೀಯ ಹಂಬಲ" ೨೦೦೪ರ ಡಿ. ೨೬ರಿಂದ ೨೯ ವರೆಗೆ ಮಂಗಳೂರಿನಲ್ಲಿ ಜರುಗಿದ ಕೆನರಾ

ಕೊಂಕಣಿ ಕೆಥೋಲಿಕರ ಜಾಗತಿಕ ಸಮ್ಮೇಳನದ ಸಂಸ್ಮರಣ ಕೃತಿಯಾದ 'ಅಸ್ಮಿತಾಯ್' ದಿಂದ ಪುಟ ಸಂಖ್ಯೆ ೮೫.

೫೫. ಡಾ. ಸೂರ್ಯನಾಥ ಕಾಮತ್‌ರವರ "ದ.ಕ್ಷಿಣ ಕನ್ನಡದಲ್ಲಿ ಸ್ವಾತಂತ್ರ್ಯ ಹೋರಾಟ" ಸುದರ್ಶನ ಗ್ರಂಥ, ವಿಜಯ ಕಾಲೇಜ್ ಟ್ರಸ್ಡ್ ಮುಲ್ಕಿ ಪ್ರಕಾಶಿತ ೧೯೭೭ ಪುಟ ೧೩೧.

೫೬. ರೆ. ಡಾ. ಪಿಯುಸ್ ಫಿಡೆಲಿಸ್ ಪಿಂಟೋ ರವರ "ಕ್ರಿಶ್ಚಿಯನ್ಸ್ ಇನ್ ಸೌತ್ ಕೆನರಾ ಲೇಖನ" ಪೊಲಿ –ಕೆನರಾ ೨೦೦ ಎಂಬ ಸಂಸ್ಮರಣ ಸಂಚಿಕೆ ಶ್ರೀ ಮುಕುಂದ ಪ್ರಭು ಇವರಿಂದ ಸಂಪಾದಿತ, ೨೦೦೦ ಪುಟ ಸಂಖ್ಯೆ ೨೭೪.

೫೭. ಡಾ. ವೆಲೇರಿಯನ್ ರಾಡ್ರಿಗಸ್‌ರ ಲೇಖನ "ಕೆನರಾ ಕ್ರೈಸ್ತರು ಮತ್ತು ಅವರ ರಾಜಕೀಯ ಹಂಬಲ" ೨೦೦೪ ರ ಡಿ. ೨೬ರಿಂದ ೨೯ರ ವರೆಗೆ ಮಂಗಳೂರಿನಲ್ಲಿ ಜರುಗಿದ ಕೆನರಾ ಕೊಂಕಣಿ ಕೆಥೋಲಿಕರ ಜಾಗತಿಕ ಸಮ್ಮೇಳನದ ಸಂಸ್ಕರಣ ಕೃತಿಯಾದ "ಅಸ್ಮಿತಾಯ್" ದಿಂದ ಪುಟ ಸಂಖ್ಯೆ – ೮೪.

೫೮. ಡಾ. ವೆಲೇರಿಯನ್ ರಾಡ್ರಿಗಸ್‌ರವರ "ಕ್ರೈಸ್ತರ ರಾಜಕೀಯ ಮುಂದಾಳತ್ವ" ಎಂಬ ಉಪನ್ಯಾಸ ೨೦೦೪ರ ಡಿ. ೨೬–೨೯ರ ವರೆಗೆ ಮಂಗಳೂರಿನಲ್ಲಿ ಜರುಗಿದ ಕೆನರಾ ಕೊಂಕಣಿ ಕೆಥೋಲಿಕರ ಜಾಗತಿಕ ಸಮ್ಮೇಳನದ ವರದಿ, ಕೃಪೆ ಕನ್ನಡ ಪ್ರಭ ದಿನಪತ್ರಿಕೆ ದಿ.೩೦.೧೨.೦೪ ಪುಟ ಸಂಖ್ಯೆ – ೦೪.

೫೯. ಡಾ. ವೆಲೇರಿಯನ್ ರೋಡ್ರಿಗಸ್‌ರ ಲೇಖನ "ಕೆನರಾ ಕ್ರೈಸ್ತರು ಮತ್ತು ಅವರ ರಾಜಕೀಯ ಹಂಬಲ" ೨೦೦೪ ರ ಡಿ. ೨೬ರಿಂದ ೨೯ರವರೆಗೆ ಮಂಗಳೂರಿನಲ್ಲಿ ಜರುಗಿದ ಕೆನರಾ ಕೊಂಕಣಿ ಕೆಥೋಲಿಕರ ಜಾಗತಿಕ ಸಮ್ಮೇಳನದ ಸಂಸ್ಮರಣ ಕೃತಿಯಾದ ಆಸ್ಮತಾಯ್ ದಿಂದ ಪುಟ ಸಂಖ್ಯೆ – ೮೫.

೬೦. ಪ್ರೊ ಜಾನ್ ಎಮ್ ರೆಬೆಲ್ಲೊ ರವರ ಕೊಂಕಣಿ ಲೇಖನ "ರಾಜಕೀಯ ಕ್ಷೇತ್ರದಲ್ಲಿ ಮಂಗಳೂರಿನ ಕೊಂಕಣಿ ಕ್ರೈಸ್ತರು" ರಾಕ್ಣೊ ಗೋಲ್ಡನ್ ಜ್ಯೂಬಿಲಿ ಇಶ್ಯೂ ಡಿ. ೧೧ ೧೯೮೮ ಪ್ರಕಾಶಿತ, ಪುಟ ೦೩

೬೧. ಅದೆ, ಪುಟ ಸಂಖ್ಯೆ ೦೪

೬೨. ಅದೆ, ಪುಟ ಸಂಖ್ಯೆ ೦೬

೬೩. ಅದೆ, ಪುಟ ಸಂಖ್ಯೆ ೦೭

೬೪. ಅದೆ, ಪುಟ ಸಂಖ್ಯೆ ೦೮ ಮತ್ತು ೦೯

೬೫. ಅದೆ, ಪುಟ ಸಂಖ್ಯೆ ೧೧ ಮತ್ತು ೧೨

೬೬. ಅದೆ, ಪುಟ ಸಂಖ್ಯೆ ೧೨

೬೭. ಡಾ. ಪೀಟರ್ ವಿಲ್ಸನ್ ಪ್ರಭಾಕರ್ ರವರ ಕೃತಿ ''ಸತ್ಯಮಿತ್ರ ಬಂಗೇರ'' ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ ಪ್ರಕಾಶಿತ ತುಳು ಕೃತಿ, ೧೯೯೭ ಪುಟ ಸಂಖ್ಯೆ – ೬

೬೮. ಡಾ. ವೆಲೇರಿಯನ್ ರಾಡ್ರಿಗಸ್‌ರ ಲೇಖನ ''ಕೆನರಾ ಕೈಸ್ತರು ಮತ್ತು ಅವರ ರಾಜಕೀಯ ಹಂಬಲ'' ೨೦೦೪ರ ಡಿ. ೨೬ರಿಂದ ೨೯ರ ವರೆಗೆ ಮಂಗಳೂರಿನಲ್ಲಿ ಜರಗಿದ ಕೆನರಾ ಕೊಂಕಣಿ ಕೆಥೋಲಿಕರ ಜಾಗತಿಕ ಸಮ್ಮೇಳನದ ಸಂಸ್ಮರಣ ಕೃತಿ ''ಅಸ್ಮಿತಾಯ್'' ದಿಂದ ಪುಟ ಸಂಖ್ಯೆ – ೮೩

೬೯. ಅದೇ, ಪುಟ ಸಂಖ್ಯೆ – ೮೫ ಮತ್ತು ೮೬

# ಅಧ್ಯಾಯ – ೩

# ರಾಜಕೀಯದಲ್ಲಿ ಕ್ರೈಸ್ತರ ಪ್ರಾತಿನಿಧ್ಯ

## ಅಧ್ಯಾಯ – ೩

# ರಾಜಕೀಯದಲ್ಲಿ ಕ್ರೈಸ್ತರ ಪ್ರಾತಿನಿಧ್ಯ

ಆಧುನಿಕ ಪ್ರಜಾಪ್ರಭುತ್ವಗಳೆಲ್ಲವೂ ಪ್ರಾತಿನಿಧ್ಯ ಸರ್ಕಾರಗಳಾಗಿವೆ. ಪ್ರತ್ಯಕ್ಷ ಪ್ರಜಾಪ್ರಭುತ್ವ ಕೇವಲ ಸಿದ್ದಾಂತ ರೂಪದಲ್ಲಿದ್ದರೆ ಪರೋಕ್ಷ ಯಾ ಪ್ರತಿನಿಧಿಕ ಸರ್ಕಾರಗಳು ಆಚರಣೆಯಲ್ಲಿದೆ. ಪ್ರಜೆಗಳ ಹೆಸರಿನಲ್ಲಿ ಪ್ರತಿನಿಧಿಗಳು ಸರ್ಕಾರ ನಡೆಸುತ್ತದೆ ಮತ್ತು ಅಧಿಕಾರ ಚಲಾಯಿಸುತ್ತದೆ. ಪ್ರಜೆಗಳ ಹಿತವನ್ನು ಗಮನದಲ್ಲಿಟ್ಟು ಕೊಂಡು ಧೋರಣೆಗಳನ್ನು ರೂಪಿಸಿ ನಿರ್ಧಾರಗಳನ್ನು ತೆಗೆದುಕೊಳ್ಳುತ್ತದೆ. ಈ ಧೋರಣೆಗಳನ್ನು ಅನುಷ್ಠಾನಗೊಳಿಸಲು ಅಗತ್ಯವಾದ ಶಾಸನಗಳನ್ನು ರೂಪಿಸುತ್ತದೆ. ತಾವು ಶಾಸನ ಸಭೆಗಳಲ್ಲಿ ಯಾರನ್ನು ಪ್ರತಿನಿಧಿಸುತ್ತಾರೋ ಅವರ ಕುಂದು ಕೊರತೆಗಳನ್ನು ನಿವಾರಿಸುವ ಜವಾಬ್ದಾರಿಯಿರುತ್ತದೆ. ಸಂಸದೀಯ ಪ್ರಜಾಸತ್ತೆಯಲ್ಲಿ ಪ್ರತಿನಿಧಿಗಳ ಜವಾಬ್ದಾರಿ ಹೆಚ್ಚಾಗಿರುತ್ತದೆ. ಸಮಾಜದ ಎಲ್ಲ ವರ್ಗಗಳನ್ನು ಸಂಸದೀಯ ಪ್ರಜಾಸ್ತಾತ್ಮಕ ವ್ಯವಸ್ಥೆಯಲ್ಲಿ ಅರ್ಥಪೂರ್ಣವಾದ ರೀತಿಯಲ್ಲಿ ಪ್ರತಿನಿಧಿಸುವ ಸಾಧ್ಯತೆಗಳು ಹೆಚ್ಚಿವೆ. (ಇದರಿಂದಾಗಿಯೇ ಸಂಸದೀಯ ಸರಕಾರ ಪದ್ಧತಿಯನ್ನು ಜವಾಬ್ದಾರಿಯುತವಾದ ಸರಕಾರವೆಂದು ಕರೆಯಲಾಗಿದೆ) ಇವೆಲ್ಲಕ್ಕಿಂತ ಮಿಗಿಲಾಗಿ ನೈಜ ಪ್ರಜಾಪ್ರಭುತ್ವದಲ್ಲಿ ಬಹು ಸಂಖ್ಯಾತ ಸಮುದಾಯಗಳಂತೆ ಅಲ್ಪ ಸಂಖ್ಯಾತ ಸಮುದಾಯಗಳ ಹಿತಾಸಕ್ತಿಯನ್ನು ರಕ್ಷಿಸಲು ಈ ವರ್ಗಗಳ ಜನರಿಗೂ ಸೂಕ್ತವಾದ ಪ್ರಾತಿನಿಧ್ಯ ಕಲ್ಪಿಸುವ ಅವಕಾಶಗಳವೆ. ಸ್ವತಂತ್ರ ಭಾರತದಲ್ಲಿ ಸಂವಿಧಾನದನ್ವಯ ೧೯೫೦ ಹಾಗೂ ೧೯೫೧ ರ ಜನಪ್ರತಿನಿಧಿ ಕಾಯ್ದೆಗಳು ಪ್ರಜೆಗಳು ಪ್ರತಿನಿಧಿಗಳನ್ನು ಆಯ್ಕೆಮಾಡುವ ದಿಸೆಯಲ್ಲಿ ಸೂಕ್ತ ಮಾರ್ಗಸೂಚಿಗಳನ್ನು ನೀಡಿರುತ್ತದೆ. ಇದಲ್ಲದೆ, ನಮ್ಮ ರಾಜಕೀಯ ವ್ಯವಸ್ಥೆಯಡಿಯಲ್ಲಿ ಅಧಿಕಾರದ ವಿಕೇಂದ್ರೀಕರಣ ಸಾಧಿಸಲು ಕೇಂದ್ರ, ರಾಜ್ಯ ಹಾಗೂ ಸ್ಥಳೀಯ ಸ್ವ–ಸರಕಾರಗಳ ರೂಪದಲ್ಲಿ ಅವಕಾಶ ಕೊಡಮಾಡಲಾಗಿದೆ.

ರಾಜಕೀಯ ಪ್ರಾತಿನಿಧ್ಯತೆಯೂ ಸಹ ರಾಜಕೀಯ ಭಾಗವಹಿಸುವಿಕೆಯ ಬಹಳ ಪ್ರಾಮುಖ್ಯ ಅಂಶವೆಂಬುವುದರಲ್ಲಿ ಯಾವುದೇ ಸಂದೇಹವಿಲ್ಲ. ಈ ಅಧ್ಯಾಯದಲ್ಲಿ ಮುಖ್ಯವಾಗಿ ರಾಜಕೀಯದಲ್ಲಿ ಕ್ರೈಸ್ತರ ಪ್ರಾತಿನಿಧ್ಯ/ಪಾಲ್ಗೊಳ್ಳುವಿಕೆ ಸರ್ಕಾರದ ವಿವಿಧ ಸ್ತರಗಳಾದ ಲೋಕ ಸಭೆ, ವಿಧಾನ ಸಭೆ, ಮಹಾನಗರ ಪಾಲಿಕೆ, ಜಿಲ್ಲಾ, ತಾಲೂಕು ಹಾಗೂ ಗ್ರಾಮ ಪಂಚಾಯತ್ತುಗಳಲ್ಲಿ ಸ್ವಾತಂತ್ರ್ಯೋತ್ತರ ಕಾಲಘಟ್ಟದಲ್ಲಿ ಯಾವ ಮಟ್ಟದಲ್ಲಿತ್ತು ಎಂಬುವುದರ ಕುರಿತು ಪರಿಶೀಲಿಸಲಾಗುತ್ತದೆ.

ರಾಷ್ಟೀಯ ಸ್ವಾತಂತ್ರ್ಯ ಹೋರಾಟದ ಆರಂಭದ ಹಂತಗಳಲ್ಲಿ ಜಿಲ್ಲೆಯಲ್ಲಿ ಕ್ರೈಸ್ತ ಸಮುದಾಯದ ಪಾಲ್ಗೊಳುವಿಕೆ ಆಸಕ್ತಿದಾಯಕವಾಗಿರಲಿಲ್ಲವೆಂಬುದಾಗಿ ಅಭಿಪ್ರಾಯ ಪಡಲಾಗಿದೆ. ಆದರೆ ರಾಷ್ಟ್ರೀಯ ಕಾಂಗ್ರೇಸ್ಸಿನ ಸ್ಥಾಪನೆ ಅದರಲ್ಲೂ ಮುಖ್ಯವಾಗಿ ಮಹಾತ್ಮ ಗಾಂಧೀಜಿಯವರ ನೇತ್ರತ್ವದ (೧೯೨೦–೧೯೪೭) ಜಿಲ್ಲೆಯಲ್ಲಿನ ರಾಷ್ಟ್ರೀಯ ಸ್ವಾತಂತ್ರ್ಯ ಹೋರಾಟದಲ್ಲಿ ಕ್ರೈಸ್ತರ ಪಾಲುಗೊಳ್ಳುವಿಕೆ ತೃಪ್ತಿಕರವೆಂದು ಕಂಡು ಬರುತ್ತದೆ.

ಭಾರತದಲ್ಲಿ ರಾಷ್ಟ್ರೀಯ ಸ್ವಾತಂತ್ರ್ಯ ಹೋರಾಟಕ್ಕೆ ಸಂಘಟನಾತ್ಮಕವಾಗಿ ನೇತೃತ್ವವನ್ನು ವಹಿಸಿದ ರಾಷ್ಟ್ರೀಯ ಕಾಂಗ್ರೆಸ್ಸಿನ ೧೮೮೫ರಲ್ಲಿ ಮುಂಬೈಯಿಯ ಪ್ರಪ್ರಥಮ ಅಧಿವೇಶನದಲ್ಲಿ ಇಲ್ಲಿನ

ಜನರ ಪ್ರತಿನಿಧಿಯಾಗಿ ಜಾರ್ಜ್‌ವಾಸ್ ಭಾಗವಹಿಸಿದ್ದರು. ಇಲ್ಲಿನ ಕ್ರೈಸ್ತ ಸಮುದಾಯದವರಾಗಿದ್ದ ಫಾದರ್ ಜೆರೋಮ್ ಡಿ ಸೋಜಾ ಅವರು ಭಾರತದ ಸಂವಿಧಾನ ರಚನ ಸಭೆಯಲ್ಲಿ ಪ್ರತಿನಿಧಿಯಾಗಿ ಭಾಗವಹಿಸಿದ್ದರು.

### ೩.೧. ಲೋಕಸಭೆಗೆ ದಕ್ಷಿಣಕನ್ನಡದ ಕ್ರೈಸ್ತರ ಪಾತಿನಿಧ್ಯ

ಬ್ರಿಟೀಷರ ಆಡಳಿತಾವಧಿಯಲ್ಲಿ ಭಾರತೀಯ ಕ್ರೈಸ್ತರಿಗೆಕೊಡಮಾಡಲಾಗಿದ್ದ ಮಂಗಳೂರು ಚುನಾವಣಾ ಕ್ಷೇತ್ರದಿಂದ ೧೯೩೭ ರಲ್ಲಿ ಆಗ ಸಂತ ಅಲೋಶಿಯಸ್ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿದ್ದ ಪ್ರೊ. ಸಿ.ಜೆ. ವರ್ಕಿಯವರು ಕೇಂದ್ರೀಯ ಶಾಸನ ಸಭೆಗೆ ಪ್ರತಿನಿಧಿಯಾಗಿ ಆಯ್ಕೆಗೊಂಡು, ದಿವಂಗತ ರಾಜಾಜಿಯುವರ ಮಂತ್ರಿಮಂಡಲದಲ್ಲಿ ಸದಸ್ಯರಾಗಿ (ಮಂತ್ರಿಯಾಗಿ)ಸೇವೆ ಸಲ್ಲಿಸಿದ್ದರು. ಆನಂತರ ೧೯೪೬ರಲ್ಲಿ ಇದೇ ಕ್ಷೇತ್ರದಿಂದ ಕಾಂಗ್ರೆಸ್ಸಿನ ಟಿಕೆಟಿನಡಿಯಲ್ಲಿ ಎಲ್.ಸಿ ಪಾಯಸ್ಸರು ಕೇಂದ್ರೀಯ ಶಾಸನ ಸಭೆಗೆ ಆಯ್ಕೆಗೊಂಡಿದ್ದರು. ಜಿಲ್ಲೆಯ ಕ್ರೈಸ್ತರಿಗೆ ಕೇಂದ್ರೀಯ ಶಾಸನ ಸಭೆಗೆ ಲಭಿಸಿದ ಈ ಪಾತಿನಿಧ್ಯ ಮತ್ತು ಆಯ್ಕೆಗಳು ಕೇವಲ ಸ್ವಾತಂತ್ರ್ಯ–ಪೂರ್ವದಲ್ಲಿ ಮಾತ್ರ ಎಂಬುದನ್ನು ಇಲ್ಲಿ ಗಮನಿಸಬೇಕು.

ಚುನಾವಣಾ ಫಲಿತಾಂಶಗಳ ಕಡೆಗೆ ಗಮನ ಹರಿಸಿದಾಗ ಸ್ವಾತಂತ್ರ್ಯಾನಂತರ ಮಂಗಳೂರು ಅಥವಾ ಈಗಿನ ದಕ್ಷಿಣಕನ್ನಡ ಲೋಕಸಭಾ ಕ್ಷೇತ್ರದಿಂದ ಸಂಸತ್ತಿನ ಕೆಳಮನೆಯಾದಲೋಕ ಸಭೆಗೆ ನಡೆದ ಕಳೆದ ಹದಿನೈದು ಸಾರ್ವತ್ರಿಕ ಚುನಾವಣೆಗಳಲ್ಲೂ ಇಲ್ಲಿಯ ತನಕ ಕ್ರೈಸ್ತ ಸಮುದಾಯದಿಂದ ಯಾವ ಪ್ರತಿನಿಧಿಯೂ ಆಯ್ಕೆಯಾಗಿಲ್ಲ. ಹಾಗೆಂದ ಮಾತ್ರಕ್ಕೆ ಕ್ರೈಸ್ತ ಹುರಿಯಾಳುಗಳು ಮಂಗಳೂರು ಲೋಕಸಭಾ ಚುಣಾವಣಾ ಕ್ಷೇತ್ರದಿಂದ ಸ್ಪರ್ಧಿಸಿಯೇ ಇಲ್ಲವೆನ್ನಲಾಗುವುದಿಲ್ಲ. ಉದಾಹರಣೆಗೆ ಜೆ. ಎಂ. ಲೋಬೋ ಪ್ರಭು ೧೯೬೨ ರಲ್ಲಿ ಮಂಗಳೂರು ಲೋಕಸಭಾ ಕ್ಷೇತ್ರದಿಂದ ಸ್ವತಂತ್ರ ಪಾರ್ಟಿಯ ಅಭ್ಯರ್ಥಿಯಾಗಿ ಸ್ಪರ್ಧಿಸಿ ೮೪,೩೪೬ ಮತಗಳನ್ನು (೩೦.೧೨%) ಪಡೆದು ದ್ವಿತೀಯ ಸ್ಥಾನಿಯಾಗಲಷ್ಟೆ ಸಮರ್ಥರಾದರು. ಇದೇ ಚುನಾವಣೆಯಲ್ಲಿ ರಾಷ್ಟ್ರೀಯ ಕಾಂಗ್ರೆಸ್ಸಿನ ಹುರಿಯಾಳಾಗಿದ್ದ ಎಂ. ಶಂಕರ ಆಳ್ವಾ ವಿರುದ್ಧ ಇವರು ಸೋಲನ್ನು ಒಪ್ಪಿಕೊಳ್ಳಬೇಕಾಯಿತು. ಈ ಮೇಲಿನ ಹೇಳಿಕೆಗಳನ್ನು ಕೆಳಗಿನ ಕೋಷ್ಟಕವು ಸ್ಪಷ್ಟೀಕರಿಸುತ್ತದೆ.

ಕೋಷ್ಟಕ ಸಂಖ್ಯೆ – ೩.೧.೧.

**೧೯೬೨ರ ಮಂಗಳೂರು ಲೋಕಸಭಾ ಚುನಾವಣಾ ಕ್ಷೇತ್ರದ ಫಲಿತಾಂಶ ವಿವರ:**

| ಕ್ರ. ಸಂಖ್ಯೆ | ಅಭ್ಯರ್ಥಿಯ ಹೆಸರು | ಪಕ್ಷ | ಗಳಿಸಿದ ಮತಗಳು | ಶೇಕಾಡಾವಾರು ಪ್ರಮಾಣ |
|---|---|---|---|---|
| ೧ | ಎ. ಶಂಕರ ಆಳ್ವಾ | ಕಾಂಗ್ರೆಸ್ಸ್ | ೧,೮೨,೧೦೨ | ೪೨.೧೭% |
| ೨ | ಜೆ. ಎಂ. ಲೋಬೋ ಪ್ರಭು | ಸ್ವತಂತ್ರ | ೮೪,೩೪೬ | ೩೦.೧೨% |
| ೩ | ಬಿ. ವಿ. ಕಕ್ಕಿಲ್ಲಾಯ | ಸಿ. ಪಿ. ಐ | ೫೯,೬೫೬ | ೨೧.೩೦% |
| ೪ | ಎಂ. ಗೋವಿಂದ ರಾವ್ | ಬಿ. ಜೆ. ಎಸ್ | ೧೭,೯೭೪ | ೬.೪೧% |

ಕೃಪೆ: ಭಾರತದ ಚುನಾವಣಾ ಆಯೋಗ

ನಂತರ ೧೯೮೯ ರ ಲೋಕಸಭಾ ಚುನಾವಣೆಯಲ್ಲಿ ಮಂಗಳೂರು ಲೋಕಸಭಾ ಕ್ಷೇತ್ರದಿಂದ ಮೆಲ್‌ವಿಲ್ಲೆ ಪಿಂಟೊ ಮತ್ತು ಪ್ಲೋಸಿ ವಿ. ಪಿರೇರಾ ಇವರುಗಳು ಪಕ್ಷೇತರ ಅಭ್ಯರ್ಥಿಗಳಾಗಿ ಸ್ಪರ್ಧಿಸಿ, ಕ್ರಮ ಪ್ರಕಾರವಾಗಿ ೧,೫೦೦ ಮತ್ತು ೧೫೯೨ ಮತಗಳನ್ನಷ್ಟೇ ಪಡೆಯಲು ಶಕ್ತರಾಗಿದ್ದರು. ಈ ಚುನಾವಣೆಯಲ್ಲಿ ಮಂಗಳೂರು ಲೋಕಸಭಾ ಕ್ಷೇತ್ರದಿಂದ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ಸಿನ ಜನಾರ್ಧನ ಪೂಜಾರಿಯವರು ೨,೭೫,೬೭೨ ಮತಗಳನ್ನು (ಶೇಕಡಾ ೪೪.೦೧) ಪಡೆದು ಜಯಶಾಲಿಯಾಗಿದ್ದರು.

೧೯೯೧ರ ಮಧ್ಯಂತರ ಲೋಕಸಭಾ ಚುನಾವಣೆಗಳಲ್ಲಿ ಮಂಗಳೂರು ಲೋಕಸಭಾ ಕ್ಷೇತ್ರದಿಂದ ಸ್ಪರ್ಧಿಸಿದ ಎಂಟು ಜನ ಅಭ್ಯರ್ಥಿಗಳ ಪೈಕಿ ಮೆಲ್‌ವಿಲ್ಲೆ ಪಿಂಟೋರವರು ಎ. ಬಿ. ಎಂ. ಎಸ್. ಡಿ ಪಕ್ಷದ ವತಿಯಿಂದ ಸ್ಪರ್ಧಿಸಿ ೨,೦೪೫ (೦.೩೭%) ಮತಗಳನ್ನು ಪಡೆದು ನಿರಾಶಾದಾಯಕ ಐದನೇ ಸ್ಥಾನವನ್ನಷ್ಟ ಪಡೆಯಲು ಶಕ್ತರಾಗಿದ್ದರು. ಆಗ ಬಿಜೆಪಿ ಪಕ್ಷದ ವತಿಯಿಂದ ಸ್ಪರ್ಧಿಸಿದ ವಿ. ಧನಂಜಯ ಕುಮಾರ್‌ರವರು ೨,೭೪,೭೦೦ (೪೯.೮೧%) ಮತಗಳನ್ನು ಗಳಿಸಿ ಆಯ್ಕೆಯಾಗಿದ್ದರು.

ಮಂಗಳೂರು ಲೋಕಸಭಾಕ್ಷೇತ್ರದಿಂದ ಸ್ಪರ್ಧಿಸಿದ ಕ್ರೈಸ್ತ ಸಮುದಾಯದ ಕೊನೆಯ ಅಭ್ಯರ್ಥಿ ಎವರೆಸ್ಟ್ ಡಿ'ಸೋಜ ಇವರು ೧೯೯೬ರ ಚುನಾವಣೆಯಲ್ಲಿ ಪಕ್ಷೇತರ ಅಭ್ಯರ್ಥಿಯಾಗಿ ಕಣದಲ್ಲಿದ್ದು ಕೇವಲ ೪,೩೧೮ (೦.೬೩%) ಮತಗಳನ್ನಷ್ಟುಗಳಿಸಲು ಶಕ್ತರಾಗಿದ್ದರು. ವಿಜಯೀ ಅಭ್ಯರ್ಥಿ ವಿ.ಧನಂಜಯ ಕುಮಾರ್‌ರವರಿಗೆ ೨,೫೦,೭೬೫ (೩೬.೭೨%) ಮತಗಳು ಲಭಿಸಿತ್ತು.

ಅಲ್ಪಸಂಖ್ಯಾತ ಸಮುದಾಯ ಶೇಕಡಾವಾರು ಲೆಕ್ಕದಲ್ಲಿ ದೊಡ್ಡ ಪ್ರಮಾಣದಲ್ಲಿ ಜಿಲ್ಲೆಯಲ್ಲಿ ಕಂಡು ಬಂದರೂ ಕ್ರೈಸ್ತರನ್ನೂ ಸೇರಿಸಿ ಯಾವನೇ ಒಬ್ಬ ಅಲ್ಪ ಸಂಖ್ಯಾತ ಸಮುದಾಯಕ್ಕೆ ಸೇರಿದ ವ್ಯಕ್ತಿ (ಅಭ್ಯರ್ಥಿ)ಯೂ ಈ ಲೋಕ ಸಭಾ ಕ್ಷೇತ್ರದಿಂದ ಇಲ್ಲಿಯ ತನಕ ಆಯ್ಕೆಯಾಗಿಲ್ಲ. ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ಸು ಮತ್ತು ಭಾರತೀಯ ಜನತಾ ಪಕ್ಷಗಳಂತಹ ರಾಷ್ಟ್ರೀಯ ಪಕ್ಷಗಳು ಇಲ್ಲಿಯ ತನಕ ಈ ಕ್ಷೇತ್ರದಿಂದ ತಮ್ಮ ಅಭ್ಯರ್ಥಿಗಳನ್ನಾಗಿ ಅಲ್ಪಸಂಖ್ಯಾತ ಸಮುದಾಯಕ್ಕೆ ಸೇರಿದ ವ್ಯಕ್ತಿಗಳನ್ನು ಕಣಕ್ಕೆ ಇಳಿಸಲೇ ಇಲ್ಲ. ಸ್ವತಂತ್ರ ಅಭ್ಯರ್ಥಿಗಳಾಗಿ ಸ್ಪರ್ಧಿಸಿದವರೂ ಯಾರೂ ಈ ಕ್ಷೇತ್ರದಿಂದ ಇಲ್ಲಿಯ ತನಕ ಜಯಶಾಲಿಯಾದ ಉದಾಹರಣೆಗಳೂ ಇಲ್ಲ.

### ೩.೨. ವಿಧಾನ ಸಭೆಯಲ್ಲಿ ದಕ್ಷಿಣ ಕನ್ನಡದ ಕ್ರೈಸ್ತರ ಪ್ರಾತಿನಿಧ್ಯ

ಪ್ರಸುತ್ತ ದಕ್ಷಿಣ ಕನ್ನಡ ಕಂದಾಯ ಜಿಲ್ಲೆಯ ವ್ಯಾಪ್ತಿಯಲ್ಲಿ ಈಗ ಕೇವಲ ಎಂಟು ವಿಧಾನ ಸಭಾ ಕ್ಷೇತ್ರಗಳು ಮಾತ್ರ ಇವೆ. ವಿಟ್ಲ ವಿಧಾನ ಸಭಾ ಕ್ಷೇತ್ರ ಈಗ ಅಸ್ತಿತ್ವದಲ್ಲಿಲ್ಲ. ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ೧೬ ವಿಧಾನ ಸಭಾ ಕ್ಷೇತ್ರಗಳಿದ್ದವು. ಅವುಗಳಲ್ಲಿ ೯ ಈಗಿನ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಹಾಗೂ ಉಳಿದ ಎಳು ವಿಧಾನ ಸಭಾ ಕ್ಷೇತ್ರಗಳು ಉಡುಪಿಯಲ್ಲಿದ್ದವು. ಪ್ರಸ್ತುತ ದಕ್ಷಿಣ ಕನ್ನಡ ಕಂದಾಯ ಜಿಲ್ಲೆಯ ವ್ಯಾಪ್ತಿಯಡಿಯಲ್ಲಿ ಬರುವ ಎಂಟು ವಿಧಾನ ಸಭಾ ಕ್ಷೇತ್ರಗಳು ಈ ಕೆಳಗಿನಂತಿವೆ.

ಕೋಷ್ಟಕ ಸಂಖ್ಯೆ – ೩.೨.೧.

**ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ವಿಧಾನಸಭಾ ಕ್ಷೇತ್ರಗಳ ಪಟ್ಟಿ**

| ಕ್ರ. ಸಂಖ್ಯೆ | ವಿಧಾನ ಸಭಾ ಕ್ಷೇತ್ರ ಸಂಖ್ಯೆ | ಕ್ಷೇತ್ರದ ಹೆಸರು |
|---|---|---|
| ೧ | ೨೦೦ | ಬೆಳ್ತಂಗಡಿ |
| ೨ | ೨೦೧ | ಮೂಡುಬಿದ್ರಿ |
| ೩ | ೨೦೨ | ಮಂಗಳೂರು ಉತ್ತರ – (ಸುರತ್ಕಲ್) |
| ೪ | ೨೦೩ | ಮಂಗಳೂರು ದಕ್ಷಿಣ – (ಮಂಗಳೂರು) |
| ೫ | ೨೦೪ | ಮಂಗಳೂರು – (ಉಳ್ಳಾಲ) |
| ೬ | ೨೦೫ | ಬಂಟ್ವಾಳ |
| ೭ | ೨೦೬ | ಪುತ್ತೂರು |
| ೮ | ೨೦೭ | ಸುಳ್ಯ |

* ಮೂಲ: ದಕ್ಷಿಣ ಕನ್ನಡ ಜಿಲ್ಲೆಯ ಅಂಕಿ ಅಂಶಗಳ ನೋಟ

ಪ್ರಸ್ತುತ ದಕ್ಷಿಣ ಕನ್ನಡ ಜಿಲ್ಲೆಯ ವ್ಯಾಪ್ತಿಗೆ ಬರುವ ಎಂಟು ವಿಧಾನ ಸಭಾ ಕ್ಷೇತ್ರಗಳ ಪೈಕಿ ಕ್ರೈಸ್ತ ಅಭ್ಯರ್ಥಿಗಳು ಕೇವಲ ಮಂಗಳೂರು ವಿಧಾನ ಸಭಾ ಕ್ಷೇತ್ರದಿಂದ ಮಾತ್ರ ವಿಧಾನ ಸಭೆಗೆ ಇಲ್ಲಿಯ ತನಕ ಆಯ್ಕೆಗೊಳ್ಳಲು ಶಕ್ತರಾಗಿದ್ದಾರೆ. ಉಳಿದಂತೆ ಏಳು ವಿಧಾನಸಭಾ ಕ್ಷೇತ್ರದಲ್ಲಿ ಕ್ರೈಸ್ತ ಅಭ್ಯರ್ಥಿಗಳು ಇನ್ನಷ್ಟೆ ಖಾತೆ ತೆರೆಯಬೇಕಾಗಿದೆ. ಇಲ್ಲಿಯ ತನಕ ಕರ್ನಾಟಕ ವಿಧಾನ ಸಭೆಗೆ ಆಯ್ಕೆಗೊಳ್ಳುವಲ್ಲಿ ಯಶಸ್ವಿಗಳಾದ ಜಿಲ್ಲೆಯ ಕ್ರೈಸ್ತ ಅಭ್ಯರ್ಥಿಗಳ ಪಟ್ಟಿ ಈ ಕೆಳಗಿನಂತಿವೆ.

ಕೋಷ್ಟಕ ಸಂಖ್ಯೆ – ೩.೨.೨. **ಜಿಲ್ಲೆಯಿಂದ ವಿಧಾನಸಭೆಗೆ ಆಯ್ಕೆಗೊಂಡ ಕ್ರೈಸ್ತ ಶಾಸಕರ ಪಟ್ಟಿ**

| ಕ್ರ. ಸಂಖ್ಯೆ | ವರ್ಷ | ಅಭ್ಯರ್ಥಿ | ಪಕ್ಷ | ಗಳಿಸಿದ ಮತಗಳು | ಕ್ಷೇತ್ರ |
|---|---|---|---|---|---|
| ೧ | ೧೯೫೨ | ಎಲ್.ಸಿ.ಪಾಯಸ್ | ಐಎನ್‌ಸಿ | ೨೨,೨೮೫ | ಮಂಗಳೂರು |
| ೨ | ೧೯೭೨ | ಶ್ರೀಮತಿ ಆಡ್ಡಿ ಸಲ್ಡಾನ್ಹ | ಐಎನ್‌ಸಿ | ೨೧,೯೪ | ಮಂಗಳೂರು |
| ೩ | ೧೯೭೮ | ಪಿ. ಎಫ್ ರೊಡ್ರಿಗಸ್ | ಐಎನ್‌ಸಿ(ಐ) | ೨೬,೫೭೯ | ಮಂಗಳೂರು |
| ೪ | ೧೯೮೫ | ಬ್ಲೇಸಿಯಸ್ ಡಿ'ಸೋಜ | ಐಎನ್‌ಸಿ | ೨೪,೪೯೪ | ಮಂಗಳೂರು |
| ೫ | ೧೯೮೯ | ಬ್ಲೇಸಿಯಸ್ ಡಿ'ಸೋಜ | ಐಎನ್‌ಸಿ | ೨೩,೭೩೯ | ಮಂಗಳೂರು |

* ಮೂಲ: ಶಕ್ಯಪೆ ಭಾರತೀಯ ಚುನಾವಣಾ ಆಯೋಗ

ಮೇಲಿನ ಪಟ್ಟಿಯ ಸವಿಶೇಷತೆಗಳು ಮುಖ್ಯವಾಗಿ ಈ ಕೆಳಗಿನಂತಿವೆ.

* ಗೆದ್ದವರೆಲ್ಲರೂ ಮಂಗಳೂರು ವಿಧಾನ ಸಭಾ ಕ್ಷೇತ್ರದವರು, ಹಾಗೂ
* ಗೆಲ್ಲುವಲ್ಲಿ ಯಶಸ್ವಿಯಾದ ಐವರೂ ಸಹ ಭಾರತದ ರಾಷ್ಟ್ರೀಯ ಕಾಂಗ್ರೆಸ್ಸಿನಿಂದ ಸ್ಪರ್ಧಿಸಿದವರು.
* ೧೯೮೯ ರ ನಂತರ ಕಳೆದ ೨೦ ವರ್ಷಗಳಿಂದ ದಕ್ಷಿಣ ಕನ್ನಡ ಜಿಲ್ಲೆಯಿಂದ ಕ್ರೈಸ್ತ ಸಮುದಾಯದಿಂದ ಶಾಸಕರೇ ಆಯ್ಕೆ ಗೊಂಡಿಲ್ಲ.

ಜಿಲ್ಲೆಯ ಉಳಿದ ಏಳು ವಿಧಾನ ಸಭಾ ಕ್ಷೇತ್ರಗಳಿಂದ ಅನೇಕ ಬಾರಿ ಕ್ರೈಸ್ತ ಸಮುದಾಯದ ಅಭ್ಯರ್ಥಿಗಳು ಚುನಾವಣೆಗಳಲ್ಲಿ ಸ್ಪರ್ಧಿಸಿದ್ದರು. ಆದರೆ ಅವರೆಲ್ಲರೂ ಚುನಾವಣೆಯಲ್ಲಿ ಗೆದ್ದು ಬರುವಲ್ಲಿ ವಿಫಲರಾಗಿದ್ದರು. ಈ ರೀತಿಯಾಗಿ (ಮಂಗಳೂರು ವಿಧಾನ ಸಭಾ ಕ್ಷೇತ್ರವನ್ನು ಹೊರತು ಪಡಿಸಿದಂತೆ) ಜಿಲ್ಲೆಯ ವಿವಿಧ ವಿಧಾನ ಸಭಾ ಕ್ಷೇತ್ರಗಳಲ್ಲಿ ಚುನಾವಣೆಗಳಲ್ಲಿ ಸ್ಪರ್ಧಿಸಿ ಗೆಲ್ಲುವುದಕ್ಕೆ ವಿಫಲರಾದ ಕ್ರೈಸ್ತ ಹುರಿಯಾಳುಗಳ ಪಟ್ಟಿ ಈ ಕೆಳಗಿನಂತಿವೆ.

ಕೋಷ್ಟಕ ಸಂಖ್ಯೆ –೩.೨.೩.

**ವಿವಿಧ ವಿಧಾನ ಸಭಾ ಕ್ಷೇತ್ರಗಳ ಚುನಾವಣೆಗಳಲ್ಲಿ ಸ್ಪರ್ಧಿಸಿ ಸೋತ ಕ್ರೈಸ್ತ ಅಭ್ಯರ್ಥಿಗಳ ಪಟ್ಟಿ**

| ಕ್ರ. ಸಂಖ್ಯೆ | ವರ್ಷ | ಅಭ್ಯರ್ಥಿ | ಪಕ್ಷ | ಗಳಿಸಿದ ಮತಗಳು | ಕ್ಷೇತ್ರ |
|---|---|---|---|---|---|
| ೧ | ೧೯೫೨ | ಎಲ್.ಸಿ ಲೋಬೋ | ಪಕ್ಷೇತರ | ೬,೬೪೯ | ಮಂಗಳೂರು |
| ೨ | ೧೯೫೨ | ಜೆ.ಬಿ.ಡಿ ಸೋಜ | ಪಕ್ಷೇತರ | ೨,೯೧೯ | ಮಂಗಳೂರು |
| ೩ | ೧೯೫೭ | ಶ್ರೀಮತಿ ಲೌರ ಪಾಯಸ್ | ಪಕ್ಷೇತರ | ೪,೭೬೬ | ಮಂಗಳೂರು ೧ |
| ೪ | ೧೯೬೨ | ಶ್ರೀಮತಿ ಲೌರ ಪಾಯಸ್ | ಐಎನ್‌ಸಿ | ೯೫೮೮ | ಮಂಗಳೂರು ೧ |
| ೫ | ೧೯೬೨ | ಶ್ರೀ ಮರಿಯನ್ ಪಾಯಸ್ | ಪಕ್ಷೇತರ | ೧೪೨೯ | ಸುರತ್ಕಲ್ |
| ೬ | ೧೯೬೭ | ಶ್ರೀ ಜೆ.ಬಿ. ಪೆರೇರಾ | ಸ್ವತಂತ್ರ | ೭೨೧೩ | ಬೆಳ್ತಂಗಡಿ |
| ೭ | ೧೯೬೭ | ಶ್ರೀಮತಿ ಮೇಬಲ್ ಪಿಂಟೊ | ಪಕ್ಷೇತರ | ೬೫೦ | ಮಂಗಳೂರು ೧ |
| ೮ | ೧೯೬೭ | ಶ್ರೀ ಜೋಸೆಫ್ ಬ್ರಿಟ್ಟೊ | ಪಕ್ಷೇತರ | ೧೨೯೨ | ಮಂಗಳೂರು ೨ |
| ೯ | ೧೯೭೨ | ಎಸ್.ಐ.ಜೆ.ಮೊರಸ್ | ಪಕ್ಷೇತರ | ೧೯೭೨ | ಬಂಟ್ವಾಳ |
| ೧೦ | ೧೯೭೨ | ಜೋಸೆಫ್ ಅರಾನ್ಹ | ಪಕ್ಷೇತರ | ೬೭೪ | ಮಂಗಳೂರು ೧ |
| ೧೧ | ೧೯೭೨ | ಶ್ರೀಮತಿ ಲೊಯೆಲ್ಲಾ ಲೋಬೋ ಪ್ರಭು | ಸ್ವತಂತ್ರ | ೨,೦೩೧ | ಮಂಗಳೂರು ೧ |
| ೧೨ | ೧೯೭೮ | ಶ್ರೀಮತಿ ಅಡ್ಡಿ ಸಲ್ಡಾನ್ಹ | ಐಎನ್‌ಸಿ | ೮೮೫ | ಮಂಗಳೂರು |
| ೧೩ | ೧೯೭೮ | ಶ್ರೀಮತಿ ಗರ್ಟಿ ಸುವರ್ಣ | ಪಕ್ಷೇತರ | ೭೧೧ | ಉಳ್ಳಾಲ |
| ೧೪ | ೧೯೭೮ | ಡಾ.ಜೆ.ಆರ್ ಪಾಯಸ್ | ಜೆ.ಎನ್.ಪಿ | ೧೫೨೦೩ | ಸುರತ್ಕಲ್ |
| ೧೫ | ೧೯೮೩ | ಸಿ.ಸಿ. ಚಾಕೊ | ಜೆ.ಪಿ. | ೫,೪೩೬ | ಪುತ್ತೂರು |
| ೧೬ | ೧೯೮೩ | ಪಿ.ಎಫ್ ರೊಡ್ರಿಗಸ್ | ಐಎನ್‌ಸಿ | ೧೯೦೬೨ | ಮಂಗಳೂರು |
| ೧೭ | ೧೯೮೩ | ಮೌರಿಸ್ ಡಿ ಸೋಜ | ಡಿಎಸ್‌ಪಿ | ೬೬೦ | ಉಳ್ಳಾಲ |
| ೧೮ | ೧೯೮೫ | ಜೋರ್ಜ್ ಎನ್.ಸಿ. | ಪಕ್ಷೇತರ | ೩೩೪ | ಬೆಳ್ತಂಗಡಿ |
| ೧೯ | ೧೯೮೫ | ಅಪೊಲಿನ್ ರೊಡ್ರಿಗಸ್ | ಪಕ್ಷೇತರ | ೨೦೪ | ಬೆಳ್ತಂಗಡಿ |
| ೨೦ | ೧೯೮೫ | ಶ್ರೀಮತಿ ಜ್ಯುಡಿತ್ ಮಸ್ಕರೇನಸ್ | ಜೆ.ಪಿ | ೧೫,೭೨೫ | ಮಂಗಳೂರು |
| ೨೧ | ೧೯೮೫ | ಎಂ. ಸಿಲ್ವೆಸ್ಟರ್ ಡಿ ಸೋಜ | ಪಕ್ಷೇತರ | ೭೦ | ಮಂಗಳೂರು |
| ೨೨ | ೧೯೮೯ | ಜೆ.ಬಿ. ಪೆರೇರಾ | ಜೆ.ಪಿ. | ೧,೬೬೧ | ಬೆಳ್ತಂಗಡಿ |

| | | | | | |
|---|---|---|---|---|---|
| ೨೩ | ೧೯೮೯ | ಜೋನ್ ನೊರೋನ್ಹ | ಜೆ.ಪಿ | ೨,೩೦೪ | ಬಂಟ್ವಾಳ |
| ೨೪ | ೧೯೮೯ | ಆಂಟೊನಿ ಡಿ. ಸೋಜ | ಜೆ.ಪಿ | ೧,೭೪೯ | ಮಂಗಳೂರು |
| ೨೫ | ೧೯೮೯ | ಎಂ.ಎಂ. ಪೆರೇರಾ | ಪಕ್ಷೇತರ | ೩೦೯ | ಸುರತ್ಕಲ್ |
| ೨೬ | ೧೯೮೯ | ರೋಬರ್ಟ್ ಡಿ ಸೋಜ | ಜೆ.ಪಿ | ೧,೧೨೫ | ಮೂಡುಬಿದ್ರೆ |
| ೨೭ | ೧೯೮೯ | ಆಂಬ್ರೋಸ್ ಸಲ್ಡಾನ್ಹ | ಪಕ್ಷೇತರ | ೧೨೭ | ಮೂಡುಬಿದ್ರೆ |
| ೨೮ | ೧೯೯೪ | ಗ್ರೆಗರಿ | ಪಕ್ಷೇತರ | ೪೫೩ | ಬಂಟ್ವಾಳ |
| ೨೯ | ೧೯೯೪ | ಲಾರೆನ್ಸ್ ಪಿಂಟೊ | ಪಕ್ಷೇತರ | ೩೧೩ | ಬಂಟ್ವಾಳ |
| ೩೦ | ೧೯೯೪ | ಬ್ಲೇಸಿಯಸ್ ಎಂ. ಡಿ ಸೋಜ | ಐಎನ್‌ಸಿ | ೧೭,೧೩೦ | ಮಂಗಳೂರು |
| ೩೧ | ೧೯೯೪ | ಬೆನೆಡಿಕ್ಟ್ ಡಿಸೋಜ | ಕೆ.ಸಿ.ಪಿ | ೮೩೪ | ಮಂಗಳೂರು |
| ೩೨ | ೧೯೯೪ | ಮೊಂತು ಲೋಬೋ | ಪಕ್ಷೇತರ | ೭೦೯ | ಮಂಗಳೂರು |
| ೩೩ | ೧೯೯೪ | ಪೌಲ್ ಮೊರಾಸ್ | ಪಕ್ಷೇತರ | ೧೯೫ | ಮಂಗಳೂರು |
| ೩೪ | ೧೯೯೪ | ಮೆಲ್‌ವಿಲ್ಲೆ ಪಿಂಟೊ | ಪಕ್ಷೇತರ | ೨೭೩ | ಉಳ್ಳಾಲ |
| ೩೫ | ೧೯೯೪ | ಆ್ಯಂಟೊನಿ ಡಿ ಸೋಜ | ಜೆ.ಡಿ | ೧೭೩೭೫ | ಸುರತ್ಕಲ್ |
| ೩೬ | ೧೯೯೯ | ಶ್ರೀಮತಿ ಫ್ಲೇವಿ ಡಿ ಸೋಜ | ಜೆ.ಡಿ.ಎಸ್ | ೧೩೩೯ | ಬಂಟ್ವಾಳ |
| ೩೭ | ೧೯೯೯ | ಬ್ಲೇಸಿಯಸ್ ಎಂ ಡಿ ಸೋಜ | ಐಎನ್‌ಸಿ | ೨೮೧೧೬ | ಮಂಗಳೂರು |
| ೩೮ | ೧೯೯೯ | ಸಿಲ್ವಿಯಾ ಡಿ ಸೋಜ | ಜೆ.ಡಿ.ಎಸ್ | ೩೮೪ | ಮಂಗಳೂರು |
| ೩೯ | ೧೯೯೯ | ಬಿ.ಜಿ. ಪಿರೇರಾ | ಬಿ.ಎಸ್.ಪಿ | ೧೪೨೧ | ಮೂಡುಬಿದ್ರೆ |
| ೪೦ | ೧೯೯೯ | ಡೇನಿಯಲ್ ಡಿ ಸೋಜ | ಜೆ.ಡಿ.ಎಸ್ | ೬೭೪ | ಮೂಡುಬಿದ್ರೆ |
| ೪೧ | ೨೦೦೪ | ಲ್ಯಾನ್ಸಿಲೊಟ್ ಪಿಂಟೋ | ಐಎನ್‌ಸಿ | --- | ಮಂಗಳೂರು |
| ೪೨ | ೨೦೦೮ | ವಿಕ್ಟರ್ ಡಿ ಸೋಜ | ಪಕ್ಷೇತರ | ೧೩೧೦ | ಮಂಗಳೂರು ಸಿಟಿ |
| ೪೩ | ೨೦೦೮ | ಸ್ಟೀವನ್ ವಿನ್ಸೆಂಟ್ ಡಿ ಸೋಜ | ಪಕ್ಷೇತರ | ೧೯೮೪ | ಮಂಗಳೂರು |
| ೪೪ | ೨೦೦೮ | ಐವಾನ್ ಡಿ ಸೋಜ | ಐಎನ್‌ಸಿ | ೫೧೩೭೩ | ಮಂಗಳೂರು |

* ಮೂಲ: ಭಾರತೀಯ ಚುನಾವಣಾ ಆಯೋಗ

ಈ ಮೇಲಿನ ೪೪ ಜನ ಅಭ್ಯರ್ಥಿಗಳಲ್ಲಿ ೧೯೮೩ರಲ್ಲಿ ಜನತಾ ಪಾರ್ಟಿ ವತಿಯಿಂದ ಪುತ್ತೂರು ವಿಧಾನಸಭಾ ಚುನಾವಣಾ ಕ್ಷೇತ್ರದಿಂದ ಸ್ಪರ್ಧಿಸಿದ ಸಿ.ಸಿ. ಚಾಕೋ ಹಾಗೂ ಪಕ್ಷೇತರ ಅಭ್ಯರ್ಥಿಯಾಗಿ ಬೆಳ್ತಂಗಡಿ ವಿಧಾನ ಸಭಾ ಕ್ಷೇತ್ರದಿಂದ ಸ್ಪರ್ಧಿಸಿದ ಜೋಜ್ ಎನ್.ಸಿ ಕೇವಲ ಇವರುಗಳು ಮಾತ್ರ ಮಲಯಾಳಿ ಕ್ರೈಸ್ತ ಗುಂಪಿನಿಂದ ಇಲ್ಲಿಯವರೆಗೆ ವಿಧಾನ ಸಭಾ ಚುನಾವಣಾ ಕಣದಲ್ಲಿ ಕಾಣಬಹುದು. ಪ್ರಸ್ತುತ ದಕ್ಷಿಣ ಕನ್ನಡ ಕಂದಾಯ ಜಿಲ್ಲೆಯಲ್ಲಿ ಪ್ರೋಟೆಸ್ಟಾಂಟ್ ಸಮುದಾಯದಿಂದ ಯಾವ ಅಭ್ಯರ್ಥಿಯೂ ವಿಧಾನ ಸಭಾ ಸ್ಪರ್ಧಾಕಣದಲ್ಲಿ ಸ್ಪರ್ಧಿಸಿರುವುದು ಕಂಡು ಬಂದಿಲ್ಲ. ಈಗ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪ್ರಬಲವಾಗಿರುವ ಬಿ.ಜೆ.ಪಿ ಪಕ್ಷದ ವತಿಯಿಂದ

ಕ್ರೈಸ್ತ ಹುರಿಯಾಳುಗಳನ್ನು ಇಲ್ಲಿನ ಯಾವುದೇ ವಿಧಾನ ಸಭಾ ಚುನಾವಣಾ ಕ್ಷೇತ್ರದಿಂದ ಸ್ಪರ್ಧೆಗೆ ಇಲ್ಲಿಯವರೆಗೆ ಇಳಿಸಲಾಗಿಲ್ಲ. ಈಗಿನ ದಕ್ಷಿಣ ಕನ್ನಡ ಕಂದಾಯ ಜಿಲ್ಲೆಯಲ್ಲಿ ಒಂದು ಅಂದಾಜಿನಂತೆ ಸುಮಾರು ಮೂರುವರೆ ಲಕ್ಷದಷ್ಟು ಸಂಖ್ಯಾ ಬಲವಿರುವ ಕ್ರೈಸ್ತ ಸಮುದಾಯವಿದೆ. ಅವರ ಸಂಖ್ಯಾ ಬಲಕ್ಕೆ ಅನುಗುಣವಾಗಿ ಕನಿಷ್ಠ ಎರಡು ಶಾಸಕರಾದರೂ ಪ್ರತಿ ಚುನಾವಣೆಯಲ್ಲಿ ಕ್ರೈಸ್ತ ಸಮುದಾಯದಿಂದ ಆರಿಸಿ ಬರಬೇಕಿತ್ತು. ಆದರೆ ಕಳೆದ ೨೦ ವರುಷಗಳಿಂದ ಒಬ್ಬ ಕ್ರೈಸ್ತ ಪ್ರತಿನಿಧಿಯೂ ದಕ್ಷಿಣ ಕನ್ನಡದಿಂದ ಕರ್ನಾಟಕದ ವಿಧಾನ ಸಭೆಗೆ ಆಯ್ಕೆಗೊಂಡಿಲ್ಲವೆಂಬುದು ಅಚ್ಚರಿಯಾದರೂ ಸತ್ಯ ಸಂಗತಿಯಾಗಿದೆ.

ಇನ್ನು ಕರ್ನಾಟಕ ಸರಕಾರದ ಮಂತ್ರಿ ಮಂಡಲದಲ್ಲಿ ಪ್ರಸ್ತುತ ದಕ್ಷಿಣ ಕನ್ನಡ ಕಂದಾಯ ಜಿಲ್ಲೆಯ ವ್ಯಾಪ್ತಿಯಿಂದ ಕೇವಲ ದಿ. ಬ್ಲೇಸಿಯಸ್ ಎಂ. ಡಿ ಸೋಜರು ಮಾತ್ರ ಮಂತ್ರಿ ಆಗಿ ಸ್ಥಾನವನ್ನು ಪಡೆದಿದ್ದರು. ಉಳಿದಂತೆ ಮಂತ್ರಿಮಂಡಲದಲ್ಲಿ ಸ್ಥಾನ ಗಿಟ್ಟಿಸಿಕೊಳ್ಳುವಲ್ಲಿ ಇಲ್ಲಿನ ಕ್ರೈಸ್ತ ಸಮುದಾಯ ವಿಫಲವಾಗಿದೆಯೆಂದು ಕ್ಷೇತ್ರಾಧ್ಯಯನದಿಂದ ಕಂಡುಕೊಳ್ಳಲಾಗಿದೆ.

### ೩.೩. ಸ್ಥಳೀಯ ಸ್ವಯಂ ಆಡಳಿತ ಸಂಸ್ಥೆಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯ

ಸಂವಿಧಾನದ ೭೩ ಹಾಗೂ ೭೪ನೆಯ ತಿದ್ದುಪಡಿಯು ಸ್ಥಳೀಯ ಸರಕಾರಗಳಿಗೆ ಸಾಂವಿಧಾನಿಕ ಸ್ಥಾನಮಾನವನ್ನು ಕಲ್ಪಸಿಕೊಟ್ಟಿದೆ, ಅಧಿಕಾರದ ವಿಕೇಂದ್ರೀಕರಣ ಪ್ರಜಾಪ್ರಭುತ್ವದ ಯಶಸ್ವಿ ಅನುಷ್ಠಾನಕ್ಕೆ ಅನಿವಾರ್ಯವೆಂಬುದು ನಿಸ್ಸಂದೇಹವಾದ ವಿಚಾರವಾಗಿದೆ. ೧೯೯೩ ಕರ್ನಾಟಕದ ಪಂಚಾಯತ್‌ರಾಜ್ ಮಸೂದೆಯಂತೆ ಜಿಲ್ಲಾ ಪಂಚಾಯತ್, ತಾಲ್ಲೂಕು ಪಂಚಾಯತ್ ಹಾಗೂ ಗ್ರಾಮ ಪಂಚಾಯಯಗಳನ್ನೊಳಗೊಂಡಂತಹ ಮೂರು ಹಂತದ ಗ್ರಾಮಾಂತರ ಪ್ರದೇಶಗಳ ಸ್ಥಳೀಯ ಸರಕಾರಗಳೂ ಹಾಗೂ ಮಹಾ ನಗರಪಾಲಿಕೆ, ನಗರಪಾಲಿಕೆ ಮತ್ತು ಕಂಟೋನ್ಮೆಂಟ್ ಸಮಿತಿಗಳೆಂಬ ಮೂರು ಪ್ರಧಾನ ಹಂತಗಳಾಗಿ ನಗರ ಪ್ರದೇಶಗಳ ಸ್ಥಳೀಯ ಸರ್ಕಾರಗಳನ್ನು ರೂಪಿಸಲಾಗಿದೆ. ೧೯೯೩ರ ಕರ್ನಾಟಕ ರಾಜ್ಯದ ಪಂಚಾಯತ್‌ರಾಜ್ ಅಧಿನಿಯಮ ಜಾರಿಗೆ ಬಂದ ನಂತರ ಕರ್ನಾಟಕದಲ್ಲಿ ಇಲ್ಲಿಯವರೆಗೆ ಸ್ಥಳೀಯ ಸರಕಾರಗಳ ವಿವಿಧ ಸ್ತರಗಳಿಗೆ ೧೯೯೫, ೨೦೦೦ ಹಾಗೂ ೨೦೦೫ ರಲ್ಲಿ ಚುನಾವಣೆಗಳು ನಡೆದಿವೆ. ಈ ಚುನಾವಣೆಗಳಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ವ್ಯಾಪ್ತಿಗೆ ಬರುವ ವಿವಿಧ ಸ್ಥಳೀಯ ಸರಕಾರಗಳಲ್ಲಿ ಇಲ್ಲಿನ ಕ್ರೈಸ್ತ ಸಮುದಾಯಕ್ಕೆ ಎಷ್ಟು ಪ್ರಾತಿನಿಧ್ಯ ದೊರಕಿದೆಯೆಂದು ಈ ಕೆಳಗಿನಂತೆ ಅವಲೋಕಿಸಬಹುದಾಗಿದೆ.

### ೩.೩.೧. ಜಿಲ್ಲಾ ಪಂಚಾಯತ್‌ನಲ್ಲಿ ಕ್ರೈಸ್ತರ ಪ್ರಾತಿನಿಧ್ಯದ ಪ್ರಮಾಣ

೧೯೯೩ರ ಕರ್ನಾಟಕ ರಾಜ್ಯದ ಪಂಚಾಯತ್‌ರಾಜ್ ಅಧಿನಿಯಮದಡಿಯಲ್ಲಿ ರೂಪಿಸಲ್ಪಟ್ಟ ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್‌ಗೆ ೧೯೯೫ರಲ್ಲಿ ನಡೆದ ಚುನಾವಣೆಗಳಲ್ಲಿ ಒಟ್ಟು ೩೩ ಚುನಾವಣಾ ಕ್ಷೇತ್ರಗಳಿದ್ದುವು. ಈ ಚುನಾವಣೆಗಳಲ್ಲಿ ಮಂಗಳೂರು ತಾಲ್ಲೂಕಿನಿಂದ ಕೇವಲ ಇಬ್ಬರು ಸದಸ್ಯರು ಕ್ರೈಸ್ತ ಸಮುದಾಯದಿಂದ ಆರಿಸಿ ಬಂದಿದ್ದಾರೆ.

ಕೋಷ್ಟಕ ಸಂಖ್ಯೆ: ೩.೩.೧.

**೧೯೯೫ ರ ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್ ಚುನಾವಣೆಯಲ್ಲಿ ಕ್ರೈಸ್ತರ ಪ್ರಾತಿನಿಧ್ಯ**

| ಒಟ್ಟು ಸ್ಥಾನಗಳು | ಗೆದ್ದ ಕ್ರೈಸ್ತ ಅಭ್ಯರ್ಥಿಗಳು | | | ಶೇಕಡಾವಾರು ಕ್ರೈಸ್ತರು | ಕ್ರೈಸ್ತ ಅಧ್ಯಕ್ಷ/ ಉಪಾಧ್ಯಕ್ಷರು |
|---|---|---|---|---|---|
| | ಪುರುಷರು | ಮಹಿಳೆಯರು | ಒಟ್ಟು | | |
| ೩೩ | ೨ | – | ೦೨ | ೬.೦೬% | --- |

* ಮೂಲ: ಅಧಿಸೂಚನೆ ಸಂಖ್ಯೆ ಗ್ರಾ ಅ ಪ ೫೩ ಜಿಪಸ ೯೮ ೯೬) ಡಿ ೨-೪-೯೮

ಈ ಚುನಾವಣೆಯಲ್ಲಿ ಜಿಲ್ಲಾ ಪಂಚಾಯತ್‌ಗೆ ಕ್ರೈಸ್ತ ಮಹಿಳಾ ಅಭ್ಯರ್ಥಿಗಳೇ ಆಯ್ಕೆಯಾಗಿರಲಿಲ್ಲ. ಈ ೧೯೯೫-೨೦೦೦ ದ ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್ ನಲ್ಲಿ ಕ್ರೈಸ್ತ ಸಮುದಾಯದಿಂದ ಅಧ್ಯಕ್ಷ/ಉಪಧ್ಯಕ್ಷರಾಗಿ ಯಾರೂ ಆಯ್ಕೆಗೊಂಡಿರಲಿಲ್ಲ. ಕೇವಲ ಮಂಗಳೂರು ತಾಲ್ಲೂಕಿನಿಂದ ಮಾತ್ರ ಕೈಸ್ತ ಅಭ್ಯರ್ಥಿಗಳು ಆಯ್ಕೆಯಾಗಿದ್ದರು. ಈ ಸಲದ ಚುನಾವಣೆಯಲ್ಲಿ ಕಾಂಗ್ರೇಸ್ ಪಕ್ಷದ ವತಿಯಿಂದ ನಾಲ್ಕು ಉಮೇದುವಾರರು ಸ್ಪರ್ಧಿಸಿದವರ ಪೈಕಿ ಮೂವರು ವಿಜಯಿಗಳಾಗಿದ್ದರು. ಜನತಾದಳದಿಂದ ಮೂವರು ಸ್ಪರ್ಧಿಸಿದ್ದರು.

ಇನ್ನು ೨೦೦೦ ದ ಇಸವಿಯಲ್ಲಿ ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್‌ಗೆ ನಡೆದ ಚುನಾವಣೆಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯ ಈ ಕೆಳಗಿನಂತಿವೆ.

ಕೋಷ್ಟಕ ಸಂಖ್ಯೆ: ೩.೩.೩.

**೨೦೦೦ ದಲ್ಲಿ ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತಿಗೆ ನಡೆದ ಸಾರ್ವತ್ರಿಕ ಚುನಾವಣೆಯಲ್ಲಿ ಕ್ರೈಸ್ತರ ಪ್ರಾತಿನಿಧ್ಯದ ಪ್ರಮಾಣ:**

| ಒಟ್ಟು ಸ್ಥಾನಗಳು | ಗೆದ್ದ ಕ್ರೈಸ್ತ ಅಭ್ಯರ್ಥಿಗಳು | | | ಶೇಕಡಾವಾರು ಕ್ರೈಸ್ತರು | ಕ್ರೈಸ್ತ ಅಧ್ಯಕ್ಷ | ಕ್ರೈಸ್ತ ಉಪಾಧ್ಯಕ್ಷರು |
|---|---|---|---|---|---|---|
| | ಪುರುಷರು | ಮಹಿಳೆಯರು | ಒಟ್ಟು | | | |
| ೩೧ | ೧ | ೧ | ೨ | ೬.೪೫% | – | ೧ |

* ಮೂಲ: ಕರ್ನಾಟಕ ರಾಜ್ಯ ಪತ್ರ ಭಾಗ ೪-ಎ ಜೂನ್ ೧೯, ೨೦೦೦

ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್‌ನ ಒಟ್ಟು ೩೧ ಸದಸ್ಯರ ಪೈಕಿ ಕೇವಲ ಇಬ್ಬರು ಸದಸ್ಯರು ಮಾತ್ರ ಕ್ರೈಸ್ತ ಸಮುದಾಯಕ್ಕೆ ಸೇರಿದವರು. ಈ ಸಲ ಈ ಇಬ್ಬರು ಸದಸ್ಯರಲ್ಲಿ ಒಬ್ಬ ಪುರುಷ ಹಾಗೂ ಒಬ್ಬ ಮಹಿಳಾ ಅಭ್ಯರ್ಥಿಗಳು ಆಯ್ಕೆಯಾಗಿದ್ದರು. ಈ ಅವಧಿಯಲ್ಲಿ ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್‌ನ ಉಪಾಧ್ಯಕ್ಷೆಯಾಗಿ ಶ್ರೀಮತಿ ಶಾಲೆಟ್ ಪಿಂಟೊ ಆಯ್ಕೆಗೊಂಡಿದ್ದರು. ಈ ಬಾರಿಯೂ ಮಂಗಳೂರು ತಾಲ್ಲೂಕನ್ನು ಹೊರತು ಪಡಿಸಿದರೆ ಉಳಿದ ತಾಲ್ಲೂಕುಗಳಿಂದ ಕ್ರೈಸ್ತ ಪ್ರತಿನಿಧಿಗಳು ಜಿಲ್ಲಾ ಪಂಚಾಯತ್ ಸದಸ್ಯರಾಗಿ ಆಯ್ಕೆಗೊಳ್ಳಲೇ ಇಲ್ಲ.

೨೦೦೫ರಲ್ಲಿ ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್ ಗೆ ನಡೆದ ಚುನಾವಣೆಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯ ಈ ಕೆಳಗಿನಂತಿವೆ.

ಕೋಷ್ಟಕ ಸಂಖ್ಯೆ: ೩.೩.೩.

**೨೦೦೫ರಲ್ಲಿ ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್‌ಗೆ ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯ ಪ್ರಮಾಣ**

| ಒಟ್ಟು ಸ್ಥಾನಗಳು | ಗೆದ್ದ ಕ್ರೈಸ್ತ ಅಭ್ಯರ್ಥಿಗಳು | | | ಶೇಕಡಾವಾರು ಕ್ರೈಸ್ತರು | ಕ್ರೈಸ್ತ ಅಧ್ಯಕ್ಷರು | ಕ್ರೈಸ್ತ ಉಪಾಧ್ಯಕ್ಷರು |
|---|---|---|---|---|---|---|
| | ಪುರುಷರು | ಮಹಿಳೆಯರು | ಒಟ್ಟು | | | |
| ೩೫ | – | ೦೩ | ೦೩ | ೮.೫೭% | – | – |

* ಮೂಲ: ಡಾ. ಜೆರಾಲ್ಡ ಪಿಂಟೊ, ಅಮ್ಚೊ ಸಂದೇಶ್ ಏಪ್ರಿಲ್. ೨೦೦೬

೨೦೦೫ ರಲ್ಲಿ ನಡೆದ ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್ ಚುನಾವಣೆಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯದ ಪ್ರಮಾಣ ಸ್ವಲ್ಪ ಮಟ್ಟಿಗೆ ಏರಿದೆ. ಆದರೆ ಪುರುಷ ಪ್ರತಿನಿಧಿಗಳು ಕ್ರೈಸ್ತ ಸಮುದಾಯದಿಂದ ಆಯ್ಕೆಗೊಂಡಿಲ್ಲ. ಆಯ್ಕೆಯಾದ ಮೂವರು ಪ್ರತಿನಿಧಿಗಳೂ ಮಹಿಳೆಯರು. ಈ ಜಿಲ್ಲಾ ಪಂಚಾಯತ್‌ನ ಅವಧಿ ೨೦೧೦ ಕ್ಕೆ ಮುಕ್ತಾಯಗೊಳ್ಳುತ್ತದೆ. ಈ ಸಲ ಅಧ್ಯಕ್ಷ/ಉಪಾಧ್ಯಕ್ಷ ಹುದ್ದೆಯನ್ನು ಅಲಂಕರಿಸುವುದಕ್ಕೆ ಕ್ರೈಸ್ತ ಸಮುದಾಯಕ್ಕೆ ಸಾಧ್ಯವಾಗಿಲ್ಲ. ಅವರಲ್ಲಿ ಯಾರೂ ಆಯ್ಕೆಗೊಂಡಿಲ್ಲ. ಆದರೆ ಜಿಜೆಪಿ ಪಕ್ಷದ ವತಿಯಿಂದ ಕ್ರೈಸ್ತ ಉಮೇದುವಾರರುಗಳನ್ನು ಸ್ಪರ್ಧೆಗೆ ಇಳಿಸಿರಲಿಲ್ಲ.

೧೯೯೩ ರ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮದನ್ವಯ ೧೯೯೫ರ ನಂತರ ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್‌ಗೆ ಇಲ್ಲಿಯ ತನಕ ೧೨ ಮಂದಿ ಅಧ್ಯಕ್ಷರುಗಳು ಆಯ್ಕೆಗೊಂಡಿರುತ್ತಾರೆ. ಅವರುಗಳ ಪೈಕಿ ಒಬ್ಬರು ಕ್ರೈಸ್ತ ಸಮುದಾಯಕ್ಕೆ ಸೇರಿದವರು ಜಿಲ್ಲಾಪಂಚಾಯತ್ ಅಧ್ಯಕ್ಷನಾಗಿ ಇಲ್ಲಿಯ ತನಕ ಆಯ್ಕೆಯಾಗಿಲ್ಲ. ಆದರೆ ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್‌ಗೆ ೧೯೯೫ರ ನಂತರ ಉಪಧ್ಯಕ್ಷರ ಹುದ್ದೆಗೆ ನಡೆದ ಚುನಾವಣೆಗಳಲ್ಲಿ ಒಬ್ಬರು ಮಾತ್ರ ಕ್ರೈಸ್ತ ಸಮುದಾಯಕ್ಕೆ ಸೇರಿದವರು ಈ ಜಿಲ್ಲಾ ಪಂಚಾಯತ್‌ನ ಉಪಾಧ್ಯಕ್ಷೆಯಾಗಿ ಆಯ್ಕೆಗೊಂಡಿರುತ್ತಾರೆ.

**೩.೩.೨. ತಾಲೂಕು ಪಂಚಾಯತ್‌ಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯ**

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಐದು ತಾಲೂಕು ಪಂಚಾಯತ್‌ಗಳಿವೆ. ಅವುಗಳಾವುವೆಂದರೆ ಮಂಗಳೂರು, ಪುತ್ತೂರು, ಬಂಟ್ವಾಳ, ಬೆಳ್ತಂಗಡಿ ಮತ್ತು ಸುಳ್ಯ ತಾಲೂಕು ಪಂಚಾಯತ್‌ಗಳು. ೧೯೯೩ ರ ನಂತರ ಇಲ್ಲಿಯ ತನಕ ಇವುಗಳಿಗೆ ೧೯೯೫, ೨೦೦೦ ಹಾಗೂ ೨೦೦೫ ರಲ್ಲಿ ಒಟ್ಟು ಮೂರು ಸಲ ಚುನಾವಣೆಗಳು ನಡೆದಿವೆ.

**ಮಂಗಳೂರು ತಾಲೂಕು ಪಂಚಾಯತ್**

೧೯೯೫ರಲ್ಲಿ ಮಂಗಳೂರು ತಾಲೂಕು ಪಂಚಾಯತ್‌ಗೆ ನಡೆದ ಚುನಾವಣೆಗಳಲ್ಲಿ ಕ್ರೈಸ್ತ ಸಮುದಾಯದ ಪ್ರಾತಿನಿಧ್ಯ ಈ ಕೆಳಗಿನಂತಿವೆ.

ಕೋಷ್ಠಕ ಸಂಖ್ಯೆ: ೩.೩.೨.೧.

**೧೯೯೫ ರಲ್ಲಿ ಮಂಗಳೂರು ತಾಲೂಕು ಪಂಚಾಯತ್‌ಗೆ ನಡೆದ ಚುನಾವಣೆಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯ**

| ಒಟ್ಟು ಸದಸ್ಯರು | ಗೆದ್ದ ಕ್ರೈಸ್ತ ಅಭ್ಯರ್ಥಿಗಳು | | | ಶೇಕಡಾವಾರು ಕ್ರೈಸ್ತರು |
|---|---|---|---|---|
| | ಪುರುಷರು | ಮಹಿಳೆಯರು | ಒಟ್ಟು | |
| ೩೫ | ೦೨ | ೦೪ | ೦೬ | ೧೭.೧೪% |

* ಮೂಲ: ಕರ್ನಾಟಕ ರಾಜ್ಯ ಪತ್ರ ಅನುಬಂಧ – ೧

ಮಂಗಳೂರು ತಾಲೂಕು ಪಂಚಾಯತ್ತಿಗೆ ೧೯೯೫ ರಲ್ಲಿ ನಡೆದ ಚುನಾವಣೆಗಳಲ್ಲಿ ಒಟ್ಟು ೩೫ ಸದಸ್ಯರ ಪೈಕಿ ಆರು ಜನ ಸದಸ್ಯರು ಕ್ರೈಸ್ತ ಸಮುದಾಯದಿಂದ ಆಯ್ಕೆಗೊಂಡಿದ್ದರು. ಈ ಆರು ಸದಸ್ಯರಲ್ಲಿ ಸಿಂಹ ಪಾಲು ಮಹಿಳೆಯರಿಗೆ ಲಭಿಸಿದೆ.

೨೦೦೦ ದ ಇಸವಿಯಲ್ಲಿ ಮಂಗಳೂರು ತಾಲೂಕು ಪಂಚಾಯತ್‌ಗೆ ನಡೆದ ಚುನಾವಣೆಗಳಲ್ಲಿ ಕ್ರೈಸ್ತ ಸಮುದಾಯಕ್ಕೆ ಲಭ್ಯವಾದ ಸದಸ್ಯತ್ವದ ಪ್ರಮಾಣ ಈ ಕೆಳಗಿನಂತಿವೆ.

ಕೋಷ್ಟಕ ಸಂಖ್ಯೆ: ೩.೩.೨.೨.

**೨೦೦೦ದಲ್ಲಿ ಮಂಗಳೂರು ತಾಲೂಕು ಪಂಚಾಯತ್‌ಗೆ ನಡೆದ ಚುನಾವಣೆಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯದ ಪ್ರಮಾಣ.**

| ಒಟ್ಟು ಸದಸ್ಯರು | ಗೆದ್ದ ಕ್ರೈಸ್ತ ಅಭ್ಯರ್ಥಿಗಳು | | | ಶೇಕಡಾವಾರು ಕ್ರೈಸ್ತರು |
|---|---|---|---|---|
| | ಪುರುಷರು | ಮಹಿಳೆಯರು | ಒಟ್ಟು | |
| ೩೪ | ೦೩ | ೦೨ | ೦೨ | ೧೪.೭೦ |

* ಮೂಲ: ಕರ್ನಾಟಕ ರಾಜ ಪತ್ರ ಭಾಗ – ೬ ಎ ಸಂಖ್ಯೆ – ೧೯೫, ದಿ. ಜೂನ್ ೩೦, ೨೦೦೦

ಮೇಲಿನ ಕೋಷ್ಠಕದಲ್ಲಿ ಕಂಡು ಬರುವುದೇನೆಂದರೆ ೧೯೯೫ ಕ್ಕಿಂತ ಈ ಸಲದ ಚುನಾವಣೆಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯದ ಪ್ರಮಾಣದಲ್ಲಿ ಇಳಿಕೆಯಾಗಿದೆ. ಮಹಿಳಾ ಸದಸ್ಯರ ಪ್ರಮಾಣದಲ್ಲಿಯೂ ಇಳಿಕೆಯಾಗಿದೆ.

೨೩–೧೧–೨೦೦೫ರಲ್ಲಿ ಮಂಗಳೂರು ತಾಲೂಕಿನ ತಾಲೂಕು ಪಂಚಾಯತ್ತಿಗೆ ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ ಆರಿಸಿ ಬಂದ ಕ್ರೈಸ್ತ ಪ್ರತಿನಿಧಿಗಳ ಪ್ರಮಾಣ ಈ ಕೆಳಗಿನಂತಿವೆ.

ಕೋಷ್ಠಕ ಸಂಖ್ಯೆ: ೩.೩.೨.೩.

**೨೦೦೫ರ ಮಂಗಳೂರು ತಾಲೂಕು ಪಂಚಾಯತ್‌ಗೆ ನಡೆದ ಚುನಾವಣೆಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯ**

| ಒಟ್ಟು ಸದಸ್ಯರು | ಗೆದ್ದ ಕ್ರೈಸ್ತ ಅಭ್ಯರ್ಥಿಗಳು | | | ಶೇಕಡಾವಾರು ಕ್ರೈಸ್ತರು |
|---|---|---|---|---|
| | ಪುರುಷರು | ಮಹಿಳೆಯರು | ಒಟ್ಟು | |
| ೩೭ | ೦೧ | ೦೦ | ೦೧ | ೨.೭೦% |

* ಮೂಲ: ಕರ್ನಾಟಕ ರಾಜ್ಯ ಪತ್ರ ಭಾಗ – ೬ಎ ಜನವರಿ ೨, ೨೦೦೬ ಸಂಖ್ಯೆ ೪೫೭.

೨೦೦೫ರಲ್ಲಿ ಮಂಗಳೂರು ತಾಲೂಕು ಪಂಚಾಯತಿಗೆ ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯ ನಿರಾಶಾದಾಯಕವಾದ ರೀತಿಯಲ್ಲಿ ಇಳಿಕೆಯಾಗಿದೆ. ಗೆದ್ದ ಒಬ್ಬನೇ ಅಭ್ಯರ್ಥಿ ಅದು ಭಾರತೀಯ ಜನತಾ ಪಕ್ಷದ ವತಿಯಿಂದ ಆಯ್ಕೆಗೊಂಡಿರುತ್ತಾನೆ. ಮಹಿಳಾ ಕ್ರೈಸ್ತ ಅಭ್ಯರ್ಥಿಗಳೇ ಆಯ್ಕೆಗೊಂಡಿಲ್ಲವೆಂಬುದು ಗಮನಿಸಬೇಕಾದ ಇನ್ನೊಂದು ಅಂಶವಾಗಿದೆ. ಹೀಗೆ ಚುನಾವಣೆಯಿಂದ ಚುನಾವಣೆಗೆ ಮಂಗಳೂರು ತಾಲೂಕು ಪಂಚಾಯತ್ತಿನ ಆಯ್ಕೆಗೊಂಡ ಸದಸ್ಯರ ಪಟ್ಟಿಯಲ್ಲಿ ಕ್ರೈಸ್ತರ ಪ್ರಾತಿನಿಧ್ಯ ದೊಡ್ಡ ಪ್ರಮಾಣದಲ್ಲಿ ಇಳಿಕೆಯಾಗಿರುವುದನ್ನು ಗಮನಿಸಬಹುದಾಗಿದೆ. ಏಕೆಂದರೆ ೧೯೯೫ರ ಚುನಾವಣೆಯಲ್ಲಿ ೧೭.೧೪% ಕ್ರೈಸ್ತ ಅಭ್ಯರ್ಥಿಗಳು ಗೆದ್ದರೆ ಅದು ೨೦೦೫ರಲ್ಲಿ ಶೇಕಡ ೨.೭೦ ಗೆ ಇಳಿದಿರುವುದನ್ನು ಗಮನಿಸಬೇಕಾಗಿದೆ.

**ಬಂಟ್ವಾಳ ತಾಲೂಕು ಪಂಚಾಯತ್**

ಇನ್ನು ದಕ್ಷಿಣ ಕನ್ನಡ ಜಿಲ್ಲೆಯ ಬಂಟ್ವಾಳ ತಾಲೂಕು ಪಂಚಾಯತ್ತಿನ ಕ್ರೈಸ್ತರ ಪ್ರಾತಿನಿಧ್ಯದ ಕಥೆ ಈ ಕೆಳಗಿನಂತಿವೆ. ೧೯೯೫ರಲ್ಲಿ ಬಂಟ್ವಾಳ ತಾಲೂಕು ಪಂಚಾಯತ್ತಿಗೆ ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ ಆಯ್ಕೆಗೊಂಡಂತಹ ಕ್ರೈಸ್ತ ಅಭ್ಯರ್ಥಿಗಳ ಪ್ರಮಾಣವನ್ನು ಈ ಕೆಳಗಿನ ಕೋಷ್ಠಕದ ಮೂಲಕ ಅವಲೋಕಿಸಬಹುದಾಗಿದೆ.

ಕೋಷ್ಠಕ ಸಂಖ್ಯೆ: ೩.೩.೨.೪.

**೧೯೯೫ರಲ್ಲಿ ಬಂಟ್ವಾಳ ತಾಲೂಕು ಪಂಚಾಯತ್‌ಗೆ ನಡೆದ ಚುನಾವಣೆಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯ**

| ಒಟ್ಟು ಸದಸ್ಯರು | ಗೆದ್ದ ಕ್ರೈಸ್ತ ಅಭ್ಯರ್ಥಿಗಳು | | | ಶೇಕಡಾವಾರು ಕ್ರೈಸ್ತರು |
|---|---|---|---|---|
| | ಪುರುಷರು | ಮಹಿಳೆಯರು | ಒಟ್ಟು | |
| ೧೮ | ೦೧ | ೦೦ | ೦೧ | ೫.೫% |

* ಮೂಲ: ಕರ್ನಾಟಕ ರಾಜ್ಯ ಪತ್ರ ಮಾರ್ಚ್ ೩೧, ೧೯೯೫, ಸಂಖ್ಯೆ ಕೊ – ೬೭

ಬಂಟ್ವಾಳ ತಾಲೂಕು ಪಂಚಾಯತ್‌ಗೆ ೨೦೦೦ದಲ್ಲಿ ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ ಗೆದ್ದು ಬಂದ ಕ್ರೈಸ್ತ ಅಭ್ಯರ್ಥಿಗಳ ಪ್ರಮಾಣ ಈ ಕೆಳಗಿನಂತಿದೆ.

ಕೋಷ್ಠಕ ಸಂಖ್ಯೆ: ೩.೩.೨.೫.

**೨೦೦೦ದಲ್ಲಿ ಬಂಟ್ವಾಳ ತಾಲೂಕು ಪಂಚಾಯತ್‌ಗೆ ನಡೆದ ಚುನಾವಣೆಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯ**

| ಒಟ್ಟು ಸ್ಥಾನಗಳು | ಗೆದ್ದ ಕ್ರೈಸ್ತ ಅಭ್ಯರ್ಥಿಗಳು | | | ಶೇಕಡಾವಾರು ಕ್ರೈಸ್ತರು |
|---|---|---|---|---|
| | ಪುರುಷರು | ಮಹಿಳೆಯರು | ಒಟ್ಟು | |
| ೨೯ | ೦೨ | ೦೧ | ೦೩ | ೧೦.೩೪% |

* ಮೂಲ: ಮೈಸೂರು ವಿಭಾಗಾಧಿಕಾರಿಯ ಕಛೇರಿಯ ಅಧಿಸೂಚನೆ ಸಿಆರ್೩೫:೨೦೦೦–೦೧ ದಿನಾಂಕ: ೨೮–೦೬–೨೦೦೦.

ಈ ಚುನಾವಣೆಯಲ್ಲಿ ಒಟ್ಟು ಕ್ರೈಸ್ತ ಪ್ರತಿನಿಧಿಗಳ ಸಂಖ್ಯೆಯಲ್ಲಿ ಹೆಚ್ಚಳವಾಗಿದೆ. ಅದರಂತೆ ತಾಲೂಕು ಪಂಚಾಯತ್ತಿನ ಒಟ್ಟು ಪ್ರತಿನಿಧಿಗಳ ಸಂಖ್ಯೆಯಲ್ಲಿಯೂ ಹೆಚ್ಚಳವಾಗಿದೆ. ಗಮನಾರ್ಹ ವಿಚಾರ ಮಹಿಳಾ ಪ್ರತಿನಿಧಿಯೊಬ್ಬರು ಆಯ್ಕೆಗೊಂಡಿರುವುದು.

೨೦೦೫ ರಲ್ಲಿ ಬಂಟ್ವಾಳ ತಾಲೂಕು ಪಂಚಾಯತ್‌ಗೆ ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ ಗೆದ್ದು ಬಂದ ಕ್ರೈಸ್ತ ಅಭ್ಯರ್ಥಿಗಳ ಪ್ರಮಾಣವನ್ನು ಈ ಕೆಳಗಿನ ಕೋಷ್ಠಕದ ಮೂಲಕ ಅವಲೋಕಿಸಬಹುದಾಗಿದೆ.

ಕೋಷ್ಠಕ ಸಂಖ್ಯೆ: ೩.೩.೨.೬.

**೨೦೦೫ ರಲ್ಲಿ ಬಂಟ್ವಾಳ ತಾಲೂಕು ಪಂಚಾಯತ್‌ಗೆ ನಡೆದ ಚುನಾವಣೆಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯ**

| ಒಟ್ಟು ಸದಸ್ಯರು | ಗೆದ್ದು ಕ್ರೈಸ್ತ ಅಭ್ಯರ್ಥಿಗಳು | | | ಶೇಕಡಾವಾರು ಕ್ರೈಸ್ತರು |
|---|---|---|---|---|
| | ಪುರುಷರು | ಮಹಿಳೆಯರು | ಒಟ್ಟು | |
| ೩೩ | ೦೦ | ೦೨ | ೦೨ | ೬.೦೬% |

* ಮೂಲ: ಕರ್ನಾಟಕ ರಾಜ್ಯ ಪತ್ರ ಜನವರಿ, ೨ ೨೦೦೬ ಸಂಖ್ಯೆ ೪೫೭ ಎ

ಪುನ: ಕ್ರೈಸ್ತರ ಪ್ರಾತಿನಿಧ್ಯದ ಪ್ರಮಾಣ ಬಂಟ್ವಾಳ ತಾಲೂಕು ಪಂಚಾಯತ್‌ನಲ್ಲಿ ಇಳಿಕೆಯಾಗಿರುವುದು ಕಂಡು ಬರುತ್ತದೆ. ಪುರುಷ ಪ್ರತಿನಿಧಿಗಳೂ ಆಯ್ಕೆಯಾಗಿಲ್ಲ. ಆಯ್ಕೆಯಾದ ಇಬ್ಬರು ಮಹಿಳೆಯರು ಕಾಂಗ್ರೆಸ್ ಪಕ್ಷದ ವತಿಯಿಂದ ಸ್ಪರ್ಧಿಸಿ ಆಯ್ಕೆಗೊಂಡಿರುತ್ತಾರೆ.

**ಪುತ್ತೂರು ತಾಲೂಕು ಪಂಚಾಯತ್**

ಪುತ್ತೂರು ತಾಲೂಕು ಪಂಚಾಯತ್ತಿಗೆ ೧೯೯೫ ರಲ್ಲಿ ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ ಒಟ್ಟು ೨೨ ಕ್ಷೇತ್ರಗಳ ಪೈಕಿ ಕೇವಲ ಒಬ್ಬ ಕ್ರೈಸ್ತ ಅಭ್ಯರ್ಥಿ ಮಾತ್ರ ಆಯ್ಕೆಯಾಗಿದ್ದನು.

ಕೋಷ್ಠಕ ಸಂಖ್ಯೆ: ೩.೩.೨.೭.

**೧೯೯೫ ರಲ್ಲಿ ಪುತ್ತೂರು ತಾಲೂಕು ಪಂಚಾಯತ್ಗೆ ನಡೆದ ಚುನಾವಣೆಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯ**

| ಒಟ್ಟು ಸದಸ್ಯರು | ಗೆದ್ದ ಕ್ರೈಸ್ತ ಅಭ್ಯರ್ಥಿಗಳು | | | ಶೇಕಡಾವಾರು ಕ್ರೈಸ್ತರು % |
|---|---|---|---|---|
| | ಪುರುಷ | ಮಹಿಳೆ | ಒಟ್ಟು | |
| ೨೨ | ೦೧ | ೦೦ | ೦೧ | ೪.೫೪% |

* ಮೂಲ ಕರ್ನಾಟಕ ರಾಜ್ಯ ಪತ್ರ ಮಾರ್ಚ್ ೩೧, ೧೯೯೫ ಸಂಖ್ಯೆ ಕೊ – ೬೭.

ಈ ಚುನಾವಣೆಯಲ್ಲಿ ಕೇವಲ ಒಬ್ಬನೇ ಒಬ್ಬ ಕ್ರೈಸ್ತ ಹುರಿಯಾಳು ಪುತ್ತೂರು ತಾಲೂಕು ಪಂಚಾಯತ್ ಸದಸ್ಯನಾಗಿ ಆಯ್ಕೆಗೊಳ್ಳುವಲ್ಲಿ ಯಶಸ್ವಿಯಾಗಿದ್ದಾನೆ. ವಿಶೇಷವೇನೆಂದರೆ ಈತನು ಮಲಯಾಳಿ ಕ್ರೈಸ್ತ ಗುಂಪಿಗೆ ಸೇರಿದವನು. ಮಹಿಳಾ ಅಭ್ಯರ್ಥಿಗಳು ಆಯ್ಕೆಗೊಂಡಿರಲಿಲ್ಲ.

೨೦೦೦ ದ ಇಸವಿಯಲ್ಲಿ ಪುತ್ತೂರು ತಾಲೂಕು ಪಂಚಾಯತ್ಗೆ ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯವನ್ನು ಈ ಕೆಳಗಿನ ಕೋಷ್ಠಕದ ನೆರವಿನಿಂದ ತಿಳಿದುಕೊಳ್ಳಬಹುದಾಗಿದೆ.

ಕೋಷ್ಠಕ ಸಂಖ್ಯೆ: ೩.೩.೨.೮.

**೨೦೦೦ ದಲ್ಲಿ ಪುತ್ತೂರು ತಾಲೂಕು ಪಂಚಾಯತ್ಗೆ ನಡೆದ ಚುನಾವಣೆಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯ**

| ಒಟ್ಟು ಸದಸ್ಯರು | ಗೆದ್ದ ಕ್ರೈಸ್ತ ಅಭ್ಯರ್ಥಿಗಳು | | | ಶೇಕಡವಾರು ಕ್ರೈಸ್ತರು |
|---|---|---|---|---|
| | ಪುರುಷರು | ಮಹಿಳೆಯರು | ಒಟ್ಟು | |
| ೧೯ | ೦೦ | ೦೧ | ೦೧ | ೫.೨೬% |

* ಮೂಲ ಮೈಸೂರು ವಿಭಾಗಧಿಕಾರಿಯವರ ಅಧಿಸೂಚನೆ ಸಿ.ಆರ್ ೩೫: ೨೦೦೦–೦೧
ದಿನಾಂಕ ೨೮–೦೬–೨೦೦೦

ಒಟ್ಟು ೧೯ ಆಯ್ಕಗೊಂಡ ಸದಸ್ಯರ ಪೈಕಿ ಕೇವಲ ಒಬ್ಬರು ಮಾತ್ರ ಕ್ರೈಸ್ತ ಸಮುದಾಯದವರು. ಅದೂ ಮಹಿಳಾ ಅಭ್ಯರ್ಥಿ. ಈ ಸಲವೂ ಪುತ್ತೂರು ತಾಲೂಕು ಪಂಚಾಯತ್ತಿಗೆ ಮಲಯಾಳಿ ಕ್ರೈಸ್ತ ಗುಂಪಿನವರು ಆಯ್ಕೆಯಾಗುವಲ್ಲಿ ಯಶಸ್ವಿಯಾಗಿದ್ದಾರೆ.

೨೦೦೫ ರಲ್ಲಿ ಪುತ್ತೂರಿನ ತಾಲೂಕು ಪಂಚಾಯತ್ತಿಗೆ ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯ ಈ ಕೆಳಗಿನಂತಿದೆ.

ಕೋಷ್ಠಕ ಸಂಖ್ಯೆ: ೩:೩.೨.೯.

**೨೦೦೫ ರಲ್ಲಿ ಪುತ್ತೂರು ತಾಲೂಕು ಪಂಚಾಯತ್‌ಗೆ ನಡೆದ ಚುನಾವಣೆಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯ**

| ಒಟ್ಟು ಸದಸ್ಯರು | ಗೆದ್ದ ಕ್ರೈಸ್ತ ಅಭ್ಯರ್ಥಿಗಳು | | | ಶೇಕಡಾವಾರು ಕ್ರೈಸ್ತರು |
|---|---|---|---|---|
| ೨೨ | ಪುರುಷರು | ಮಹಿಳೆಯರು | ಒಟ್ಟು | |
| | ೦೦ | ೦೦ | ೦೦ | 0.0% |

* ಮೂಲ: ಕರ್ನಾಟಕ ರಾಜ್ಯಪತ್ರ ಜನವರಿ ೨, ೨೦೦೬ ಸಂಖ್ಯೆ ೪೫೬ ಡಿ

೨೦೦೫ ರ ಪುತ್ತೂರು ತಾಲೂಕು ಪಂಚಾಯತ್ ಚುನಾವಣೆಗಳಲ್ಲಿ ಒಬ್ಬ ಕ್ರೈಸ್ತ ಪ್ರತಿನಿಧಿ ಆಯ್ಕೆಗೊಳ್ಳುವುದಕ್ಕೆ ವಿಫಲವಾಗಿದ್ದಾರೆ. ಉಳಿದ ತಾಲೂಕು ಪಂಚಾಯತ್‌ಗಳಂತೆ ಪುತ್ತೂರಿನಲ್ಲಿಯೂ ಸಹ ಕ್ರೈಸ್ತ ಅಭ್ಯರ್ಥಿಗಳ ಆಯ್ಕೆ ಪ್ರಮಾಣದಲ್ಲಿ ಇಳಿಕೆ ಕಂಡು ಬಂದಿದೆ.

**ಬೆಳ್ತಂಗಡಿ ತಾಲೂಕು ಪಂಚಾಯತ್**

ಬೆಳ್ತಂಗಡಿ ತಾಲೂಕು ಪಂಚಾಯತ್‌ಗೆ ೧೯೯೫ ರಲ್ಲಿ ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯದ ಪ್ರಮಾಣ ಈ ಕೆಳಗಿನಂತಿದೆ.

ಕೋಷ್ಠಕ ಸಂಖ್ಯೆ: ೩.೩.೨.೧೦.

**೧೯೯೫ ರಲ್ಲಿ ಬೆಳ್ತಂಗಡಿ ತಾಲೂಕು ಪಂಚಾಯತಿಗೆ ನಡೆದ ಚುನಾವಣೆಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯ**

| ಒಟ್ಟು ಸದಸ್ಯರು | ಗೆದ್ದ ಕ್ರೈಸ್ತ ಅಭ್ಯರ್ಥಿಗಳು | | | ಶೇಕಡಾವಾರು ಕ್ರೈಸ್ತರು |
|---|---|---|---|---|
| | ಪುರುಷರು | ಮಹಿಳೆಯರು | ಒಟ್ಟು | |
| ೨೨ | ೦೦ | ೦೦ | ೦೦ | ೦೦% |

* ಮೂಲ: ಕರ್ನಾಟಕ ರಾಜ್ಯ ಪತ್ರ ಮಾರ್ಚ್ ೩೧, ೧೯೯೫ ಸಂಖ್ಯೆ ಕೊ – ೬೭

೧೯೯೫ ರಲ್ಲಿ ಬೆಳ್ತಂಗಡಿ ತಾಲೂಕು ಪಂಚಾಯತ್ತಿಗೆ ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ ಕ್ರೈಸ್ತ ಅಭ್ಯರ್ಥಿಗಳು ಪಂಚಾಯತ್ತಿನ ಸದಸ್ಯರಾಗಿ ಆಯ್ಕೆಗೊಳ್ಳುವಲ್ಲಿ ವಿಫಲರಾಗಿದ್ದಾರೆ. ಒಬ್ಬ ಕ್ರೈಸ್ತ ಪ್ರತಿನಿಧಿಯೂ ಆಯ್ಕೆಗೊಂಡಿರಲಿಲ್ಲ.

ಬೆಳ್ತಂಗಡಿ ತಾಲೂಕು ಪಂಚಾಯತ್ತಿಗೆ ೨೦೦೦ ದ ಇಸವಿಯಲ್ಲಿ ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯದ ಪ್ರಮಾಣ ಈ ಕೆಳಗಿನಂತಿವೆ.

ಕೋಷ್ಠಕ ಸಂಖ್ಯೆ: ೩.೩.೨.೧೧.

**೨೦೦೦ ದಲ್ಲಿ ಬೆಳ್ತಂಗಡಿ ತಾಲೂಕು ಪಂಚಾಯಿತ್ತಿಗೆ ನಡೆದ ಚುನಾವಣೆಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯ**

| ಒಟ್ಟು ಸದಸ್ಯರು | ಗೆದ್ದ ಕ್ರೈಸ್ತ ಅಭ್ಯರ್ಥಿಗಳು | | | ಶೇಕಡಾವಾರು ಕ್ರೈಸ್ತರು |
|---|---|---|---|---|
| | ಪುರುಷ | ಮಹಿಳೆ | ಒಟ್ಟು | |
| ೨೧ | ೦೧ | ೦೦ | ೦೧ | ೪.೭೬% |

* ಮೂಲ: ಮೈಸೂರು ವಿಭಾಗಾಧಿಕಾರಿಯವರ ಅಧಿಸೂಚನೆ ಸಿ.ಆರ್ ೩೫–೨೦೦೦–೦೧ ದಿನಾಂಕ ೨೮–೦೬–೨೦೦೦

೨೦೦೦ ದಲ್ಲಿ ಬೆಳ್ತಂಗಡಿ ತಾಲೂಕು ಪಂಚಾಯತ್ತಿಗೆ ನಡೆದ ಸಾರ್ವತ್ರಿಕ ಚುನಾಚಣೆಗಳಲ್ಲಿ ಪಂಚಾಯತ್ತಿನ ಸದಸ್ಯರಾಗಿ ಆಯ್ಕೆಗೊಳ್ಳಲು ಕ್ರೈಸ್ತರು ಸಫಲರಾಗಿದ್ದಾರೆ. ಅಳದಂಗಡಿ ಕ್ಷೇತ್ರದಿಂದ ಒಬ್ಬ ಪುರುಷ ಅಭ್ಯರ್ಥಿ ಆರಿಸಿ ಬಂದಿದ್ದರು.

೨೦೦೫ ರಲ್ಲಿ ಬೆಳ್ತಂಗಡಿ ತಾಲೂಕು ಪಂಚಾಯತ್ತಿಗೆ ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯ ಈ ಕೆಳಗಿನಂತಿವೆ.

ಕೋಷ್ಠಕ ಸಂಖ್ಯೆ: ೩.೩.೨.೧೨.

**೨೦೦೫ ರಲ್ಲಿ ಬೆಳ್ತಂಗಡಿ ತಾಲ್ಲೂಕು ಪಂಚಾಯತ್ತಿಗೆ ನಡೆದ ಚುನಾವಣೆಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯ**

| ಒಟ್ಟು ಸದಸ್ಯರು | ಗೆದ್ದ ಕ್ರೈಸ್ತ ಅಭ್ಯರ್ಥಿಗಳು | | | ಶೇಕಡಾವಾರು ಕ್ರೈಸ್ತರು |
|---|---|---|---|---|
| | ಪುರುಷ | ಮಹಿಳೆ | ಒಟ್ಟು | |
| ೨೪ | ೦೧ | ೦೧ | ೦೨ | ೮.೩೩% |

* ಮೂಲ: ಕರ್ನಾಟಕ ರಾಜ್ಯ ಪತ್ರ (ವಿಶೇಷ) ಜನವರಿ ೩, ೨೦೦೬ ಸಂಖ್ಯೆ ೪೫೭ ಬಿ.

ಈ ಚುನಾವಣೆಯಲ್ಲಿ ೨೪ ಅಭ್ಯರ್ಥಿಗಳ ಪೈಕಿ ಕೇವಲ ಎರಡು ಸ್ಥಾನಗಳನ್ನಷ್ಟೆ ಪಡೆಯಲು ಶಕ್ತರಾದರು. ತಲಾ ಒಬ್ಬ ಮಹಿಳೆ ಮತ್ತು ಒಬ್ಬ ಪುರುಷ ಅಭ್ಯರ್ಥಿಗಳು ಆಯ್ಕೆಗೊಂಡರು. ಚಾರ್ಮಾಡಿ ಕ್ಷೇತ್ರದಿಂದ ಮಲಯಾಳಿ ಕ್ರೈಸ್ತ ಗುಂಪಿಗೆ ಸೇರಿದವರೊಬ್ಬರು ಆಯ್ಕೆಗೊಂಡಿದ್ದಾರೆ.

**ಸುಳ್ಯ ತಾಲೂಕು ಪಂಚಾಯತ್**

ಸುಳ್ಯ ತಾಲೂಕು ಪಂಚಾಯತ್ ವ್ಯಾಪ್ತಿಗೊಳಪಟ್ಟಂತೆ ಕ್ರೈಸ್ತ ಸಮುದಾಯದ ಸಂಖ್ಯಾಬಲ ಅತೀ ಕಡಿಮೆಯಿದೆ. ಅದರಂತೆ ಸುಳ್ಯ ತಾಲೂಕು ಪಂಚಾಯತ್ ಚುನಾವಣೆಗಳಲ್ಲಿ ಕಳೆದ ಮೂರು ಬಾರಿಯೂ ಸಹ ಒಬ್ಬನೇ ಒಬ್ಬ ಕ್ರೈಸ್ತ ಅಭ್ಯರ್ಥಿ ಆಯ್ಕೆಯಾಗಿಲ್ಲ.

ಕೋಷ್ಠಕ ಸಂಖ್ಯೆ: ೩.೩.೨.೧೩.

**೧೯೯೫ ರಲ್ಲಿ ಸುಳ್ಯ ತಾಲೂಕು ಪಂಚಾಯತ್‌ಗೆ ನಡೆದ ಚುನಾವಣೆಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯ**

| ಒಟ್ಟು ಸದಸ್ಯರು | ಗೆದ್ದ ಕ್ರೈಸ್ತ ಅಭ್ಯರ್ಥಿಗಳು | | | ಶೇಕಡಾವಾರು ಕ್ರೈಸ್ತರು |
|---|---|---|---|---|
| | ಪುರುಷ | ಮಹಿಳೆ | ಒಟ್ಟು | |
| ೧೩ | ೦೦ | ೦೦ | ೦೦ | ೦೦% |

* ಮೂಲ: ಕರ್ನಾಟಕ ರಾಜ್ಯಪತ್ರ ಮಾರ್ಚ್ ೩೧, ೧೯೯೫ ಸಂಖ್ಯೆ ಕೊ – ೬೭

ಕೋಷ್ಟಕ ಸಂಖ್ಯೆ: ೩.೩.೨.೧೪.

**೨೦೦೦ ದಲ್ಲಿ ಸುಳ್ಯ ತಾಲೂಕು ಪಂಚಾಯತ್ತಿಗೆ ನಡೆದ ಚುನಾವಣೆಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯ**

| ಒಟ್ಟು ಸದಸ್ಯರು | ಗೆದ್ದ ಕ್ರೈಸ್ತ ಅಭ್ಯರ್ಥಿಗಳು | | | ಶೇಕಡಾವಾರು ಕ್ರೈಸ್ತರು |
|---|---|---|---|---|
| | ಪುರುಷ | ಮಹಿಳೆ | ಒಟ್ಟು | |
| ೧೨ | ೦೦ | ೦೦ | ೦೦ | ೦೦% |

* ಮೂಲ: ಮೈಸೂರು ವಿಭಾಗಾಧಿಕಾರಿಗಳ ಅಧಿಸೂಚನೆ ಸಂಖ್ಯೆ ಚುನಾವಣೆ
ಸಿ.ಆರ್ ೩೫: ೨೦೦೦-೦೧ ದಿನಾಂಕ ೨೮-೦೬-೨೦೦೦

ಕೋಷ್ಟಕ ಸಂಖ್ಯೆ: ೩.೩.೨.೧೫.

**೨೦೦೫ ರಲ್ಲಿ ಸುಳ್ಯ ತಾಲೂಕು ಪಂಚಾಯತ್ತಿಗೆ ನಡೆದ ಚುನಾವಣೆಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯ**

| ಒಟ್ಟು ಸದಸ್ಯರು | ಗೆದ್ದ ಕ್ರೈಸ್ತ ಅಭ್ಯರ್ಥಿಗಳು | | | ಶೇಕಡಾವಾರು ಕ್ರೈಸ್ತರು |
|---|---|---|---|---|
| | ಪುರುಷ | ಮಹಿಳೆ | ಒಟ್ಟು | |
| ೧೩ | ೦೦ | ೦೦ | ೦೦ | ೦೦% |

* ಮೂಲ: ಕರ್ನಾಟಕ ರಾಜ್ಯ ಪತ್ರ ಜನವರಿ ೨, ೨೦೦೬ ಸಂಖ್ಯೆ ೪೫೭/ಸಿ

ಕೋಷ್ಟಕ ಸಂಖ್ಯೆ: ೩.೩.೨.೧೬.

**೨೦೦೫ ರ ತಾಲೂಕು ಪಂಚಾಯತ್‌ಗಳಿಗೆ ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ ಗೆದ್ದ ಕ್ರೈಸ್ತ ಅಭ್ಯರ್ಥಿಗಳ ಪ್ರಮಾಣ**

| ಕ್ರಮ ಸಂಖ್ಯೆ | ತಾಲೂಕು ಪಂಚಾಯತ್ ಹೆಸರು | ಒಟ್ಟು ಸ್ಥಾನಗಳು | ಕ್ರೈಸ್ತರಿಗೆ ಲಭಿಸಿದ ಸ್ಥಾನಗಳು | ಕ್ರೈಸ್ತರ ಶೇಕಡಾವಾರು ಪ್ರಮಾಣ |
|---|---|---|---|---|
| ೧ | ಮಂಗಳೂರು | ೩೭ | ೦೧ | ೨.೭೦% |
| ೨ | ಬಂಟ್ವಾಳ | ೩೩ | ೦೨ | ೬.೦೬% |
| ೩ | ಪುತ್ತೂರು | ೨೨ | ೦೦ | ೦೦% |
| ೪ | ಬೆಳ್ತಂಗಡಿ | ೨೪ | ೦೨ | ೮.೩೩% |
| ೫ | ಸುಳ್ಯ | ೧೩ | ೦೦ | ೦೦% |
| ೬ | ಒಟ್ಟು | ೧೨೯ | ೦೫ | ೩.೮೭% |

* ಮೂಲ: ಕರ್ನಾಟಕ ರಾಜ್ಯ ಪತ್ರ ಜನವರಿ ೨, ೨೦೦೬

ಜಿಲ್ಲೆಯಲ್ಲಿ ಕ್ರೈಸ್ತರ ಜನಸಂಖ್ಯಾವಾರು ಪ್ರಮಾಣಕ್ಕೆ (೮.೬೯%) ಹೋಲಿಸಿದಾಗ ತಾಲೂಕು ಪಂಚಾಯತ್‌ಗಳಿಗೆ ಕ್ರೈಸ್ತರಿಗೆ ಲಭ್ಯವಾದ ಪ್ರಾತಿನಿಧ್ಯತೆಯ ಪ್ರಮಾಣ ಬಹಳ ಕಡಿಮೆಯಾಗಿರುತ್ತದೆ. (ಕೇವಲ ೩.೮೭%)

ಕೋಷ್ಠಕ ಸಂಖ್ಯೆ: ೩.೩.೨.೧೭.

**ಸೆಪ್ಟಂಬರ್ ೨೮, ೨೦೦೭ ರಲ್ಲಿ ಪುರಸಭೆ ಮತ್ತು ಪಟ್ಟಣ ಪಂಚಾಯತ್‌ಗಳಿಗೆ ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯತೆ**

| ಕ್ರಮ ಸಂಖ್ಯೆ | ಪಟ್ಟಣ/ಪುರಸಭೆ | ಒಟ್ಟು ಸದಸ್ಯರು | ಗೆದ್ದ ಕ್ರೈಸ್ತ ಅಭ್ಯರ್ಥಿಗಳು | | | ಶೇಕಡಾವಾರು |
|---|---|---|---|---|---|---|
| | | | ಪುರುಷ | ಮಹಿಳೆ | ಒಟ್ಟು | |
| ೧ | ಸುಳ್ಯ | ೧೮ | – | ೦೧ | ೦೧ | ೫.೫% |
| ೨ | ಮೂಡುಬಿದ್ರೆ | ೨೩ | ೦೨ | ೦೨ | ೦೪ | ೧೭.೪% |
| ೩ | ಬೆಳ್ತಂಗಡಿ | ೧೧ | – | – | – | 0% |
| ೪ | ಬಂಟ್ವಾಳ | ೨೩ | ೦೧ | ೦೧ | ೦೨ | ೮.೬% |
| ೫ | ಪುತ್ತೂರು | ೨೭ | ೦೧ | ೦೧ | ೦೨ | ೭.೪% |
| ೬ | ಉಳ್ಳಾಲ | ೨೭ | ೦೧ | ೦೧ | ೦೨ | ೭.೪% |
| | | ೧೨೯ | ೦೫ | ೦೬ | ೧೧ | ೮.೫% |

* ಮೂಲ: ಜಿಲ್ಲಾಧಿಕಾರಿಯವರ ಅಧಿಸೂಚನೆ, ನಂ.ಇಎಲ್‌ಎನ್ ಸಿ.ಆರ್ ೧೬/೨೦೦೭-೦೮ ದಿನಾಂಕ ೦೧.೧೦.೦೭

ಮೂಡುಬಿದ್ರೆ ಪುರಸಭೆ ಹೊರತು ಪಡಿಸಿದಂತೆ ಉಳಿದೆಡೆಗಳಲ್ಲಿ ಕ್ರೈಸ್ತರ ಶೇಕಡಾವಾರು ಪ್ರಾತಿನಿಧ್ಯತೆಯಲ್ಲಿ ಕಡಿಮೆಯಿದೆ. ೨೦೦೧ರ ಜನಗಣತಿಯಂತೆ ದಕ್ಷಿಣ ಕನ್ನಡ ಜಿಲ್ಲೆಯ ಒಟ್ಟು ಜನಸಂಖ್ಯೆಯಲ್ಲಿ ಕ್ರೈಸ್ತರ ಪ್ರಮಾಣ ೮.೬೯% ಆಗಿದೆ. ಬೆಳ್ತಂಗಡಿ ಪಟ್ಟಣ ಪಂಚಯತಿಯಲ್ಲಿ ಕ್ರೈಸ್ತರ ಪ್ರಾತಿನಿಧ್ಯ ಸೊನ್ನೆಯಾಗಿರುತ್ತದೆ.

**೩.೩.೩. ಗ್ರಾಮ ಪಂಚಯತ್‌ಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯತೆ**

ದಕ್ಷಿಣ ಕನ್ನಡ ಕಂದಾಯ ಜಿಲ್ಲೆಯಲ್ಲಿ ಒಟ್ಟಿಗೆ ೨೦೬ ಗ್ರಾಮ ಪಂಚಯತ್‌ಗಳಿವೆ ಮತ್ತು ಸುಮಾರು ೩೨೫೧ ಗ್ರಾಮ ಪಂಚಾಯತ್ ಸದಸ್ಯರುಗಳಿರುತ್ತಾರೆ. ಗ್ರಾಮ ಪಂಚಾಯತ್‌ಗಳಲ್ಲಿ ೨೦೦೫ರ ಸಾರ್ವತ್ರಿಕ ಚುನಾವಣೆಗಳಲ್ಲಿ ಕ್ರೈಸ್ತ ಸಮುದಾಯದ ಅಭ್ಯರ್ಥಿಗಳಿಗೆ ಲಭ್ಯವಾಗಿರುವ ಪ್ರಾತಿನಿಧ್ಯದ ಪ್ರಮಾಣ ಈ ಕೆಳಗಿನ ಕೋಷ್ಟಕವು ನಮಗೆ ತಿಳಿಸುತ್ತದೆ.

ಕೋಷ್ಟಕ ಸಂಖ್ಯೆ: ೩.೩.೩.೧.

**೨೦೦೫ ರಲ್ಲಿ ಜಿಲ್ಲೆಯ ಗ್ರಾಮಪಂಚಾಯತ್‌ಗಳಿಗೆ ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯದ ಪ್ರಮಾಣ**

| ಒಟ್ಟು ಗ್ರಾಮ ಪಂಚಾಯತ್‌ಗಳು | ಒಟ್ಟು ಸ್ಥಾನಗಳು | ಕೊಂಕಣಿ ಕ್ರೈಸ್ತರಿಗೆ ಲಭಿಸಿದ ಸ್ಥಾನಗಳು | ಮಲಯಾಳಿ ಕ್ರೈಸ್ತರಿಗೆ ಲಭಿಸಿದ ಸ್ಥಾನಗಳು | ಪ್ರೊಟೆಸ್ಟಾಂಟರಿಗೆ ಲಭಿಸಿದ ಸ್ಥಾನಗಳು |
|---|---|---|---|---|
| ೨೦೬ | ೩೨೫೧ | ೩೦೨ | ೩೦ | ೦೨ |

* ವಿವಿಧ ಮೂಲಗಳಿಂದ

**೩.೩.೪. ಮಂಗಳೂರು ಮಹಾನಗರ ಪಾಲಿಕೆಯಲ್ಲಿ ಕ್ರೈಸ್ತರ ಪ್ರಾತಿನಿಧ್ಯತೆ**

ಮಂಗಳೂರು ಮಹಾನಗರ ಪಾಲಿಕೆಯಲ್ಲಿ ೧೯೮೪ ರಿಂದ ಇಲ್ಲಿಯ ತನಕ ಆಯ್ಕೆಗೊಂಡ ೨೩ ಮೇಯರುಗಳ ಪೈಕಿ ಕೇವಲ ಮೂವರು ಮಂದಿ ಮಾತ್ರ ಕ್ರೈಸ್ತ ಸಮುದಾಯದಿಂದ ಆಯ್ಕೆಗೊಂಡಿರುತ್ತಾರೆ (೦೩/೨೩). ಹಾಗೂ ಒಟ್ಟು ೨೧ ಉಪಮೇಯರುಗಳ ಪೈಕಿ ಕೇವಲ ಏಳು ಮಂದಿ ಮಾತ್ರ ಈ ಸಮುದಾಯದಿಂದ ಆಯ್ಕೆಗೊಂಡಿರುತ್ತಾರೆ (೦೭/೨೧).

ದಿನಾಂಕ ೨೮ ಸೆಪ್ಟೆಂಬರ್ ೨೦೦೭ರಲ್ಲಿ ಮಂಗಳೂರು ಮಹಾನಗರ ಪಾಲಿಕೆಗೆ ನಡೆದ ಚುನಾವಣೆಗಳಲ್ಲಿ ಕ್ರೈಸ್ತ ಸಮುದಾಯದಿಂದ ಆಯ್ಕೆಗೊಂಡ ಕಾರ್ಪೊರೇಟರುಗಳ/ಮಹಾನಗರ ಪಾಲಿಕೆಯ ಸದಸ್ಯರುಗಳ ಪ್ರಮಾಣ ಈ ಕೆಳಗಿನಂತಿವೆ.

ಕೋಷ್ಟಕ ಸಂಖ್ಯೆ: ೩.೩.೪.೧

**೨೦೦೭ರಲ್ಲಿ ಮಂಗಳೂರು ಮಹಾನಗರ ಪಾಲಿಕೆಗೆ ಆರಿಸಿ ಬಂದ ಕ್ರೈಸ್ತ ಸದಸ್ಯರ ಪ್ರಮಾಣ**

| ಒಟ್ಟು ಸ್ಥಾನಗಳು | ಗೆದ್ದ ಕ್ರೈಸ್ತ ಅಭ್ಯರ್ಥಿಗಳು | | | ಶೇಕಡಾವಾರು |
|---|---|---|---|---|
| | ಪುರುಷರು | ಮಹಿಳೆಯರು | ಒಟ್ಟು | |
| ೬೦ | ೦೩ | ೦೪ | ೦೭ | ೧೧.೬೬% |

* ಮೂಲ: ಕರ್ನಾಟಕ ರಾಜ್ಯಪತ್ರ ಅಕ್ಟೋಬರ್ ೨೬, ೨೦೦೭ ನಂ ೧೯೬೩

ಕೋಷ್ಟಕ ಸಂಖ್ಯೆ: ೩.೩.೪.೨.

**೨೦೦೨ ರಲ್ಲಿ ಮಂಗಳೂರು ಮಹಾನಗರ ಪಾಲಿಕೆಗೆ ಆರಿಸಿ ಬಂದ ಕ್ರೈಸ್ತ ಸದಸ್ಯರ ಪ್ರಮಾಣ**

| ಒಟ್ಟು ಸ್ಥಾನಗಳು | ಗೆದ್ದ ಕ್ರೈಸ್ತ ಅಭ್ಯರ್ಥಿಗಳು | | | ಶೇಕಡಾವಾರು |
|---|---|---|---|---|
| ೬೦ | ಪುರುಷರು | ಮಹಿಳೆಯರು | ಒಟ್ಟು | ೧೫% |
| | ೦೫ | ೦೪ | ೦೯ | |

* ಮೂಲ, ೨೦೦೨ರಲ್ಲಿ ಪಾಲಿಕೆಗೆ ನಡೆದ ಚುನಾವಾಣೆಗಳಲ್ಲಿ ಆಯ್ಕೆಗೊಂಡ ಸದಸ್ಯರ ಪಟ್ಟಿ

೨೦೦೨ರ ಮಹಾನಗರ ಪಾಲಿಕೆಯಲ್ಲಿ ಆಯ್ಕೆಗೊಂಡಂತಹ ಕ್ರೈಸ್ತ ಅಭ್ಯರ್ಥಿಗಳ ಪ್ರಮಾಣಕ್ಕೆ ಹೋಲಿಸಿ ನೋಡಿದಾಗ ೨೦೦೭ರಲ್ಲಿ ಮಂಗಳೂರು ಮಹಾನಗರಪಾಲಿಕೆಗೆ ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ ಆರಿಸಿ ಬಂದಂತಹ ಕ್ರೈಸ್ತ ಅಭ್ಯರ್ಥಿಗಳ ಪ್ರಮಾಣದಲ್ಲಿ ಆದ ಇಳಿಕೆಯನ್ನು ಗಮನಿಸಬಹುದಾಗಿದೆ. ದಕ್ಷಿಣ ಕನ್ನಡದ ಕ್ರೈಸ್ತ ಸಮುದಾಯದಲ್ಲಿ ಕಂಡು ಬರುವ ಪ್ರೊಟೆಸ್ಟಾಂಟ್ ಸಮುದಾಯಕ್ಕೆ ಸೇರದವರಾದ ಶ್ರೀಮತಿ ಯೂನಿಸ್ ಬ್ರಿಟ್ಟೋ ಪಾಲಿಕೆಯ ಉಪಮೇಯರಾಗಿ ಹಾಗೂ ಮೇಯರಾಗಿ ಹಾಗೂ ಶ್ರೀಮತಿ ಅನುಸೂಯ ಮಾಬೆನ್‌ರವರು ಉಪಮೇಯರಾಗಿ ಆಯ್ಕೆಗೊಂಡಿರುತ್ತಾರೆ. ಮಹಾನಗರ ಪಾಲಿಕೆಯಲ್ಲಿ ಮಹಿಳೆಯರು ಎರಡು ಬಾರಿ ಮೇಯರ್ ಹುದ್ದೆ ಪಡೆದರೆ ಕ್ರೈಸ್ತ ಪುರುಷರಲ್ಲಿ ಒಬ್ಬರು ಮಾತ್ರ ಈ ಹುದ್ದೆಯನ್ನು ಪಡೆಯುವಲ್ಲಿ ಯಶಸ್ವಿಯಾಗಿರುತ್ತಾರೆ. ಪಾಲಿಕೆಯ ಉಪಮೇಯರ್ ಹುದ್ದೆಗಳನ್ನು ಅಲಂಕರಿಸಿದ ಏಳು ಕ್ರೈಸ್ತ ಅಭ್ಯರ್ಥಿಗಳಲ್ಲಿ ಆರು ಅಭ್ಯರ್ಥಿಗಳೂ ಮಹಿಳಾ ಅಭ್ಯರ್ಥಿಗಳೆಂಬುದು ವಿಶೇಷ. ಆದರೆ ೧೯೯೯ರಿಂದ ಈಚೆಗೆ ಕ್ರೈಸ್ತ ಅಭ್ಯರ್ಥಿಗಳು ಮೇಯರಾಗಿ ಆರಿಸಿ ಬಂದಿರುವುದಿಲ್ಲ ಮತ್ತು ೨೦೦೨ರ ನಂತರ ಉಪಮೇಯರ್ ಹುದ್ದೆಗೆ ಕ್ರೈಸ್ತ ಅಭ್ಯರ್ಥಿಗಳು ಆಯ್ಕೆಗೊಂಡಿರುವುದಿಲ್ಲ.

**೩.೪ ಹೋರಾಟ ಆಂದೋಳನಗಳಲ್ಲಿ ಕ್ರೈಸ್ತರ ಭಾಗವಹಿಸುವಿಕೆ**

ಸ್ವಾತಂತ್ರ್ಯಾನಂತರ ಜಿಲ್ಲೆಯಲ್ಲಿ ನಡೆದ ಅನೇಕ ಹೋರಾಟ ಆಂದೋಳನಗಳಲ್ಲಿ ಕ್ರೈಸ್ತರ ಭಾಗವಹಿಸುವಿಕೆಯನ್ನೂ ಗಮನಿಸಬಹುದಾಗಿದೆ. ಆದರೆ ಕ್ರೈಸ್ತ ಸಮುದಾಯವು ಹೋರಾಟಗಳಲ್ಲಿ ಭಾಗವಹಿಸುವಿಕೆಗೆ ಹೆಚ್ಚಿನ ಪ್ರಚಾರವು ಮಾಧ್ಯಮಗಳಲ್ಲಿ ಲಭಿಸದಿರುವುದು ಕಂಡು ಬರುತ್ತದೆ. ಕ್ರೈಸ್ತ ಸಮುದಾಯವು ಸುಸಂಘಟಿತವಾದುದಾಗಿದೆ. ಈ ಸಮುದಾಯದ ವತಿಯಿಂದ ಅನೇಕ ಸಂಘ ಸಂಸ್ಥೆಗಳು ಕ್ರಿಯಾಶೀಲವಾಗಿ ಕಾರ್ಯಾಚರಿಸುವುದನ್ನು ಕಾಣಬಹುದಾಗಿದೆ. ಅವುಗಳಲ್ಲಿ "ಕೆಥೋಲಿಕ್ ಸಭಾ" ಬಹಳ ಪ್ರಮುಖವಾಗಿದೆ.

ಕ್ರೈಸ್ತ ಸಮುದಾಯದವರು ಸಕ್ರಿಯವಾಗಿ ಪಾಲ್ಗೊಂಡ ಕೆಲವು ಹೋರಾಟಗಳು ಈ ಕೆಳಗಿನಂತಿವೆ.

೧೯೭೮ರಲ್ಲಿ ಕೇಂದ್ರದಲ್ಲಿ ಜನತಾ ಸರಕಾರವು ಅಧಿಕಾರದಲ್ಲಿದ್ದಾಗ ಅನುದಾನಿತ ಶಾಲೆಗಳನ್ನು ರಾಷ್ಟ್ರೀಕರಣಗೊಳಿಸುವ ನಿಟ್ಟಿನಲ್ಲಿ ಒಂದು ಮಸೂದೆಯನ್ನು ಸಂಸತ್ತಿನಲ್ಲಿ ಮಂಡಿಸಲಾಯಿತು. ಅಲ್ಪಸಂಖ್ಯಾತರಿಗೆ ಸಂವಿಧಾನ ದತ್ತವಾಗಿ ಕೊಡಲ್ಪಟ್ಟಿರುವ ಶೈಕ್ಷಣಿಕ ಹಕ್ಕಿನ ಅನುಭೋಗಕ್ಕೆ ಅಡ್ಡಿಯುಂಟು ಮಾಡುವ ವಿಚಾರ ಈ ಮಸೂದೆಯಲ್ಲಿ ಅಡಕವಾಗಿದ್ದ ಕಾರಣ ದೇಶದಾದ್ಯಂತ ಈ ಮಸೂದೆಯ ವಿರುದ್ಧ ಪ್ರತಿಭಟನೆಗಳು ನಡೆದವು. ತ್ಯಾಗಿ ಮಸೂದೆ ವಿರುದ್ಧ ನಡೆದಂತಹ ಈ ಪ್ರತಿಭಟನಾ ಹೋರಾಟದಲ್ಲಿ ಮಂಗಳೂರಿನ ಕ್ರೈಸ್ತ ಸಮುದಾಯದ ಚರಿತ್ರೆಯಲ್ಲಿ ಪ್ರಪ್ರಥಮ ಬಾರಿಗೆ ಲಕ್ಷಾಂತರ ಅಲ್ಪಸಂಖ್ಯಾತರು ಮಂಗಳೂರಿನ ನೆಹರೂ ಮೈದಾನಿನಲ್ಲಿ ಜಮಾಯಿಸಿ ಜಿಲ್ಲಾಧಿಕಾರಿಯವರ ಮೂಲಕ ಕೇಂದ್ರ ಸರಕಾರಕ್ಕೆ ತಮ್ಮ ಪ್ರತಿಭಟನೆಯನ್ನು ಸಲ್ಲಿಸಲಾಯಿತು. ಈ ಎಲ್ಲಾ ಹೋರಾಟಗಳ ಫಲವಾಗಿ ನಂತರ "ತ್ಯಾಗಿ ಮಸೂದೆ" ಬಿದ್ದು

ಹೋಯಿತು. ಈ ಆಂದೋಳನದಲ್ಲಿ ದಿ. ಫ್ರಾನ್ಸಿಸ್ ದಾಂತಿ, ದಿ. ಡಿಸಿಲ್ವಾ ಹಾಗೂ ಶ್ರೀಯುತ ಆಸ್ಕರ್ ಫೆರ್ನಾಂಡಿಸ್ ಇವರೆಲ್ಲಾ ಮುಂದಾಳತ್ವ ವಹಿಸಿದ್ದರು.

ಕ್ರೈಸ್ತರು ಈ ಜಿಲ್ಲೆಯಲ್ಲಿ ಸಕ್ರಿಯವಾಗಿ ಪಾಲುಗೊಂಡಂತಹ ಇನ್ನೊಂದು ಆಂದೋಳನವೆಂದರೆ ಭೂಸುಧಾರಣೆಗೆ ಸಂಬಂಧಿಸಿದ ಆಂದೋಳನವಾಗಿದೆ. "ಉಳುವವನೆ ಹೊಲದೊಡೆಯ" ಈ ಆಂದೋಳನದ ಧ್ಯೇಯ ವಾಕ್ಯವಾಗಿತ್ತು. ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ೬೦ ಹಾಗೂ ೭೦ರ ದಶಕದಲ್ಲಿ ಬಡ ಗೇಣಿದಾರರ ಶೋಷಣೆಯನ್ನು ಮುಕ್ತಗೊಳಿಸುವುದಕ್ಕೆ ಈ ಆಂದೋಳನ ವಿಶೇಷ ಸಹಕಾರಿಯಾಗಿತ್ತು. ಈ ಆಂದೋಳನದಲ್ಲಿ ಕ್ರೈಸ್ತ ಸಮುದಾಯದ ಕಾರ್ಯಕರ್ತರು ಸಕ್ರಿಯವಾಗಿ ಪಾಲುಗೊಂಡಿದ್ದರು. ಶ್ರೀಯುತ ಶೀರ್ತಾಡಿ ವಿಲಿಯಂ ಪಿಂಟೋ ಈ ಆಂದೋಳನಕ್ಕೆ ರೈತರಲ್ಲಿ ಅರಿವು ಮೂಡಿಸಿ ಅನ್ಯಾಯದ ಪರಂಪರೆಯ ವಿರುದ್ಧ ಹೋರಾಡಲು ಅವರನ್ನು ಅಣಿಗೊಳಿಸುವಲ್ಲಿ ಸುಮಾರು ೨೦೦ ಕಡೆಗಳಲ್ಲಿ ಭಾಷಣ ಮತ್ತು ಅರಿವು ಮೂಡಿಸುವ ಘನಕಾರ್ಯವನ್ನು ಮಾಡಿದರು. ಜಾತಿ, ಧರ್ಮ ಭಾಷೆಯ ಬೇಧವಿಲ್ಲದೆ ತಮ್ಮನ್ನು ತಾವೇ ಈ ಕೆಲಸದಲ್ಲಿ ತೊಡಗಿಸಿಕೊಂಡರು. ೧೯೭೪ರ "ಕರ್ನಾಟಕ ಭೂ ಸುಧಾರಣೆ ಕಾನೂನು – ಸಂಕ್ಷಿಪ್ತ ಪರಿಚಯ ಎಂಬ ಕೃತಿಯನ್ನು ಅವರು ರಚಿಸಿದ್ದರು. ದಕ್ಷಿಣ ಕನ್ನಡದಲ್ಲಿ ಹೆಚ್ಚಿನ ಕ್ರೈಸ್ತರು ಕೃಷಿಕರಾಗಿರುವ ಕಾರಣ ಜಿಲ್ಲೆಯ ಇತರೇ ಕೃಷಿಕ ಬಾಂಧವರೊಂದಿಗೆ ಬೆರೆತು ಈ ಆಂದೋಳನ ಯಶಸ್ಸನ್ನು ಕಾಣುವಲ್ಲಿ ಅವರು ಸಕ್ರಿಯವಾಗಿ ಭಾಗವಹಿಸಿದ್ದಾರೆ. ಕರ್ನಾಟಕದಲ್ಲಿ ಭೂಸುಧಾರಣ ಕಾನೂನು ಅತ್ಯಂತ ಯಶಸ್ವಿಯಾಗಿ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅನುಷ್ಠಾನಿಸಲ್ಪಡಲು ಇಲ್ಲಿನ ಜನರ ಸಕ್ರಿಯ ಭಾಗವಹಿಸುವಿಕೆಯೇ ಮುಖ್ಯ ಕಾರಣ. ನಂತರದ ದಿನಗಳಲ್ಲಿ ದಕ್ಷಿಣ ಕನ್ನಡ ಜಿಲ್ಲೆಯು ಕರ್ನಾಟಕದಲ್ಲೇ ಬದುಕಿನ ಎಲ್ಲಾ ರಂಗಗಳಲ್ಲೂ ಅಗ್ರ ಪಂಕ್ತಿಗೇರಲು ಬಹಳಷ್ಟು ಕಾರಣವಾಯಿತೆಂಬುದು ಬಲ್ಲವರ ಅಭಿಪ್ರಾಯವಾಗಿದೆ.

೧೯೭೯ರಲ್ಲಿ ಕಥೋಲಿಕ್ ಸಭಾದ ಸ್ಥಾಪನೆಯಾಯಿತು. ಕಥೋಲಿಕ್ ಸಮುದಾಯದಲ್ಲಿ ರಾಜಕೀಯ ಜಾಗೃತಿಯನ್ನು ಮೂಡಿಸುವ ಉದ್ದೇಶವನ್ನು ಇಟ್ಟುಕೊಂಡು ಶ್ರೀಯುತ ಆಸ್ಕರ್ ಫೆರ್ನಾಂಡಿಸ್ ಮತ್ತು ಇತರರ ಮುಂದಾಳತ್ವದಲ್ಲಿ ಈ ಸಂಘಟನೆ ಆರಂಭಗೊಂಡಿತು. ೧೯೮೦ರ ದಶಕದ ಆದಿ ಭಾಗದಲ್ಲಿ ಬೆಳ್ತಂಗಡಿ ಪರಿಸರದಲ್ಲಿ ಮಹಿಳೆಯೊಬ್ಬರಿಗೆ ಕೆಲಸ ಕೊಡುತ್ತೇವೆಂದು ಆಮಿಷ ತೋರಿಸಿ, ಲೈಂಗಿಕ ಕಿರುಕುಳ ಕೊಟ್ಟ ರಾಜಕಾರಣಿಯೋರ್ವರ ಕುಮ್ಮಕ್ಕು ವಿರುದ್ಧ ಪ್ರತಿಭಟಿಸಲಾಯಿತು.

ಈ ಜಿಲ್ಲೆಯಲ್ಲಿ ಕ್ರೈಸ್ತ ಸಮುದಾಯದವರು ಸಕ್ರಿಯವಾಗಿ ಭಾಗವಹಿಸಿದ ಇನ್ನೊಂದು ಮುಖ್ಯ ಹೋರಾಟವೆಂದರೆ ದಲಿತ ಕ್ರೈಸ್ತರ ಪರ ಹೋರಾಟವಾಗಿದೆ. ೧೯೯೬ರಲ್ಲಿ ಕೇಂದ್ರದಲ್ಲಿ ಮಾನ್ಯ ಶ್ರೀ ದೇವೇಗೌಡರ ಸರಕಾರ ಅಧಿಕಾರದಲ್ಲಿದ್ದಂತಹ ಸಂಧರ್ಭದಲ್ಲಿ ದೇಶದಾದ್ಯಂತ "ದಲಿತ ಕ್ರೈಸ್ತರ ಪರ" ಹೋರಾಟ ನಡೆಯಿತು. ತ್ಯಾಗಿ ಮಸೂದೆಯ ವಿರುದ್ಧದ ಪ್ರತಿಭಟನಾ ಹೋರಾಟದ ನಂತರ ಲಕ್ಷಗಟ್ಟಲೆ ಕ್ರೈಸ್ತ ಕಾರ್ಯಕರ್ತರು ಮಂಗಳೂರಿನ ನೆಹರೂ ಮೈದಾನಿನಲ್ಲಿ ಜಮಾಯಿಸಿದ ಎರಡನೆಯ ಉದಾಹರಣೆ ಇದಾಗಿದೆ. ದಲಿತ ಕ್ರೈಸ್ತರಿಗೆ ಇತರೇ ಧರ್ಮಗಳಲ್ಲಿರುವ ದಲಿತರಿಗೆ ಲಭಿಸುವ ಎಲ್ಲಾ ಸರಕಾರಿ ಸವಲತ್ತುಗಳು/ಅನುಕೂಲತೆಗಳು ಲಭಿಸುವಂತೆ ಮಾಡುವಲ್ಲಿ ಈ ಹೋರಾಟವನ್ನು ಹಮ್ಮಿಕೊಳ್ಳಲಾಯಿತು. ಕಥೋಲಿಕ್ ಸಭಾ ಹಾಗೂ ಧರ್ಮ ಪ್ರಾಂತ್ಯದ

'ಪ್ಯಾಸ್ಟರಲ್ ಕೌನ್ಸಿಲ್' ಇವುಗಳ ಜಂಟಿ ನೇತೃತ್ವದಲ್ಲಿ ನೆಹರೂ ಮೈದಾನಿನಲ್ಲಿ ಸುಮಾರು ಐದು ಲಕ್ಷ ಜನ ಭಾಗವಹಿಸಿದ್ದರು.

ಕಳೆದ ವರುಷ ಅಂದರೆ, ಸೆಪ್ಟೆಂಬರ್ ೧೪ ೨೦೦೮ಕ್ಕೆ ರಾಜ್ಯದಾದ್ಯಂತ, ಕ್ರೈಸ್ತರು ಮತಾಂತರದಲ್ಲಿ ತೊಡಗಿದ್ದಾರೆ ಎಂಬ ಆರೋಪದಡಿಯಲ್ಲಿ ಬಜರಂಗದಳ ಹಾಗೂ ಶ್ರೀರಾಮ ಸೇನೆಯಂತಹ ಸಂಘಟನೆಗಳು ಚರ್ಚ್ ವಿರುದ್ಧ ದಾಳಿಗಳನ್ನು ಮಾಡಿದ್ದಕ್ಕೆ ಪ್ರತಿಯಾಗಿ ಪ್ರತಿಭಟನೆಯನ್ನು ಕ್ರೈಸ್ತ ಸಂಘಟನೆಗಳು ಮಾಡಲಾಯಿತು. ಕ್ರೈಸ್ತರ ಚರ್ಚ್ ಹಾಗೂ ದೇವಾಲಯಗಳಿಗೆ ಸೂಕ್ತ ರಕ್ಷಣೆ ಕೊಡಬೇಕೆಂದು ಕೇಂದ್ರ ಹಾಗೂ ರಾಜ್ಯ ಸರಕಾರಗಳಿಗೆ ಮನವಿ ಮಾಡಲಾಯಿತು. ತತ್ಪರಿಣಾಮವಾಗಿ ಸರಕಾರದ ವತಿಯಿಂದ ಎಲ್ಲಾ ಚರ್ಚ್‌ಗಳ ರಕ್ಷಣೆಗಾಗಿ ಪೊಲೀಸ್ ಕಾವಲು ಕೊಡಿಸಲಾಯಿತು. ರಾಜ್ಯ ಸರಕಾರವು ಚರ್ಚ್ ದಾಳಿ ಪ್ರಕರಣವನ್ನು ತನಿಖೆ ನಡೆಸುವ ಉದ್ದೇಶಕ್ಕಾಗಿ ನ್ಯಾ. ಸೋಮಶೇಖರ ಆಯೋಗವನ್ನು ನಿಯಮಿಸಲಾಗಿದೆ. ಸದ್ಯದಲ್ಲೇ ಆಯೋಗದ ಮಧ್ಯಂತರ ವರದಿಯು ಸರಕಾರದ ಕೈ ಸೇರಲಿದೆ.

ಈ ಮೇಲಿನವುಗಳಲ್ಲದೆ ಕ್ರೈಸ್ತ ಸಂಘಟನೆಗಳು ಹಾಗೂ ಮುಂದಾಳುಗಳು ಪರಿಸರ ಸಂರಕ್ಷಣೆ ಹೋರಾಟದಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿರುತ್ತಾರೆ. ಶ್ರೀಯತ ಎರಿಕ್ ಒಜಾರಿಯೋ ಹೆಸರು ಈ ಕ್ಷೇತ್ರದಲ್ಲಿ ಕೇಳಿ ಬರುತ್ತದೆ. ಎಂ. ಆರ್. ಪಿ. ಎಲ್ ಮತ್ತು ವಿಶೇಷ ಆರ್ಥಿಕವಲಯ ಸ್ಥಾಪನೆಯ ಸಂತ್ರಸ್ತರ ಹೋರಾಟದಲ್ಲಿ ಕ್ರೈಸ್ತರೂ ಪಾಲುಗೊಂಡಿರುತ್ತಾರೆ. ಏಕೆಂದರೆ ಕ್ರೈಸ್ತ ಸಮುದಾಯಕ್ಕೆ ಸೇರಿದವರು ಇಲ್ಲಿನ ಸಂತ್ರಸ್ತರ ಪಟ್ಟಿಯಲ್ಲಿದ್ದಾರೆ. ಪೀಪಲ್ಸ್ ಯೂನಿಯನ್ ಫಾರ್ ಸಿವಿಲ್ ಲಿಬರ್ಟಿ ವೇದಿಕೆಯ ಶ್ರೀಯುತ ಪಿ. ಬಿ. ಡೇಸರು ಮಾನವ ಹಕ್ಕುಗಳ ಸಂರಕ್ಷಣಾ ಹೋರಾಟದಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡವರು. ಕರ್ನಾಟಕ ಹೈಕೋರ್ಟಿನ ನಿವೃತ್ತ ನ್ಯಾಯಾದೀಶ ಸಲ್ಡಾನ್ಹರು ಈ ಕ್ಷೇತ್ರದಲ್ಲಿ ಇನ್ನೊಂದು ಪ್ರಸಿದ್ಧ ಹೆಸರು. ಮಹಿಳೆಯರ ಹಕ್ಕಿನ ಪರ ಹೋರಾಟಗಳಲ್ಲಿ ಕ್ರೈಸ್ತ ಮಹಿಳೆಯರು ಕೆಲವರು ಸಕ್ರಿಯವಾಗಿ ತೊಡಗಿಸಿ ಕೊಂಡಿರುತ್ತಾರೆ. ಕರ್ನಾಟಕ ರಾಜ್ಯ ರೈತ ಸಂಘದ ಜಿಲ್ಲಾ ಘಟಕದ ಅಧ್ಯಕ್ಷರಾಗಿ ಶ್ರೀಯುತ ಸನ್ನಿ ಡಿ ಸೋಜ ಕಾರ್ಯ ನಿರ್ವಹಿಸಿರುತ್ತಾರೆ. ಮಹಿಳಾ ರೈತ, ತಲೆ ಹೊರೆ ಮಾರಾಟಗಾರರು, ಬೀದಿ ಬದಿಯ ಮಾರಾಟಗಾರರ ಹಿತರಕ್ಷಣೆ ಹೋರಾಟಗಳಲ್ಲಿ ಸ್ಕೂಲ್ ಅಫ್ ಸೋಶಿಯಲ್ ವರ್ಕ್‌ನ ಪ್ರೊ. ರೀಟಾ ನೊರೊನ್ಹ ರವರು ಸಕ್ರಿಯವಾಗಿ ತೊಡಗಿಸಿ ಕೊಂಡಿರುತ್ತಾರೆ. ಮಕ್ಕಳ ಹಕ್ಕುಗಳ ಸಂರಕ್ಷಣೆ, ಬಾಲಕಾರ್ಮಿಕರ ಶೋಷಣೆ ವಿರುದ್ಧದ ಆಂದೋಳನಗಳಲ್ಲೂ ಪ್ರೊ. ಹಿಲ್ಡಾ ರಾಯಪ್ಪನ್ ಮುಂತಾದವರು ಸಕ್ರಿಯವಾಗಿ ಭಾಗವಹಿಸಿರುತ್ತಾರೆ. ಮಲಯಾಳಿ ಕ್ರಿಶ್ಚನ್ ಎಸೋಸಿಯೇಶನ್ ಸಂಘಟನೆ ಇಲ್ಲಿನ ಮಲಯಾಳಿ ಕ್ರೈಸ್ತರಲ್ಲಿ ರಾಜಕೀಯ ಅರಿವು ಮೂಡಿಸಿ ಅವರ ಹಿತ ಸಂರಕ್ಷಣೆಯ ಕಾರ್ಯಾದಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿವೆ.

ಕ್ರೈಸ್ತ ಸಮುದಾಯದ ಪ್ರಾತಿನಿಧ್ಯತೆಯನ್ನಾಧರಿಸಿದ ಅಧಿಕಾರ ವಿಕೇಂದ್ರೀಕರಣದ ಎಲ್ಲಾ ಸ್ತರಗಳ ಅಂಕಿ ಅಂಶಗಳನ್ನು ಗಮನಿಸಿದರೆ ಒಟ್ಟು ರಾಜಕೀಯ ಭಾಗವಹಿಸುವಿಕೆಯಲ್ಲಿ ಬೆರಳೆಣಿಕೆಯಷ್ಟೇ ನಾಯಕತ್ವದ ಮಜಲುಗಳು ಕಾಣುತ್ತವೆ. ಸಾರ್ವಜನಿಕ ಕ್ಷೇತ್ರಗಳಲ್ಲಿ ನ್ಯಾಯಕ್ಕಾಗಿ, ಸರ್ಕಾರದ ಸವಲತ್ತುಗಳಿಗಾಗಿ, ಸಂಘಟನಾತ್ಮಕ ಹೋರಾಟಗಳನ್ನು ಮಾಡಿದ ದಾಖಲೆಗಳು ಈ ಸಮುದಾಯದ ಸಾಮಾಜಿಕ ಪ್ರಜ್ಞೆ, ರಾಜಕೀಯ ಅರಿವುಗಳನ್ನು ಸ್ಪಷ್ಟೀಕರಿಸುತ್ತವೆಯಾದರೂ ನಿರೀಕ್ಷಿತ

ಪ್ರಮಾಣದಲ್ಲಿ ಕ್ರೈಸ್ತರ ತೊಡಗಿಸಿಕೊಳ್ಳುವ ಪ್ರವೃತ್ತಿ ಕಡಿಮೆ ಎನ್ನುವುದು ಪ್ರಸ್ತುತ ಅಧ್ಯಾಯವು ವ್ಯಕ್ತ ಪಡಿಸುತ್ತದೆ.

ಮುಂದಿನ ಅಧ್ಯಾಯದಲ್ಲಿ ಈ ಸಮುದಾಯದ ಕುರಿತಂತೆ ಅವರ ರಾಜಕೀಯ ಬದುಕು, ಭಾಗವಹಿಸುವಿಕೆ, ದೃಷ್ಟಿಕೋನಗಳು, ಮತದಾನದ ಪ್ರಮಾಣ, ಪಕ್ಷದ ಆಯ್ಕೆ, ರಾಜಕೀಯ ಅರಿವಿನ ಪ್ರಮಾಣ ಇತ್ಯಾದಿಗಳನ್ನು ವಿಶ್ಲೇಷಿಸಲಾಗುತ್ತದೆ.

# ಕೊನೆ ಟಿಪ್ಪಣಿಗಳು

## ಸರಕಾರೀ ದಾಖಲೆಗಳು

### ಅ. ಲೋಕಸಭಾ ಚುನಾವಣೆಗಳು


೧) ಶ್ರೀ ಎಂ.ಎನ್ ವಿದ್ಯಾಶಂಕರ್, ಮುಖ್ಯ ಚುನಾವಣಾ ಆಯುಕ್ತರು, ಕರ್ನಾಟಕ ಸರಕಾರ "ಇಲೆಕ್ಷನ್ ಇನ್ ಕರ್ನಾಟಕ ೧೯೫೨–೧೯೭೭" ಪಬ್ಲಿಷ್‌ಡ್ ಬೈ ದಿ ಚೀಫ್ ಇಲೆಕ್ಟೊರಲ್ ಆಫೀಸರ್ ಟು ಗವರ್ನ್‌ಮೆಂಟ್ ಅಫ್ ಕರ್ನಾಟಕ, ಬೆಂಗಳೂರು ಪ್ರಕಾಶಿತ, ೦೧–೦೬–೨೦೦೯.

೨) ಇಲೆಕ್ಷನ್ ಸ್ಟಾಟಿಸ್ಟಿಕ್ಸ್ ಅಫ್ ಜನರಲ್ ಇಲೆಕ್ಷನ್ಸ್ ಟು ಲೋಕಸಭಾ ೧೯೮೦, ಕರ್ನಾಟಕ ಸ್ಟೇಟ್, ಪಬ್ಲಿಷ್‌ಡ್ ಬೈದಿ ಚೀಫ್ ಇಲೆಕ್ಟೊರಲ್ ಆಫೀಸರ್ ಟು ದಿ ಗವರ್ನ್‌ಮೆಂಟ್ ಅಫ್ ಕರ್ನಾಟಕ, ಬೆಂಗಳೂರು ೧೯೮೨. (೮೨ ಪುಟ)

೩) ಇಲೆಕ್ಷನ್ ಸ್ಟಾಟಿಸ್ಟಿಕ್ಸ್ ಅಫ್ ಜನರಲ್ ಇಲೆಕ್ಷನ್ಸ್ ಟು ಲೋಕಸಭಾ ೧೯೮೪, ಕರ್ನಾಟಕ ಸ್ಟೇಟ್, ಪಬ್ಲಿಷ್‌ಡ್ ಬೈ ದಿ ಚೀಫ್ ಇಲೆಕ್ಟರಲ್ ಆಫೀಸರ್ ಟು ದಿ ಗವರ್ನಮೆಂಟ್ ಅಫ್ ಕರ್ನಾಟಕ, ಬೆಂಗಳೂರು, ೧೯೮೫.

೪) ಇಲೆಕ್ಷನ್ ಸ್ಟಾಟಿಸ್ಟಕ ಅಫ್ ಜನರಲ್ ಇಲೆಕ್ಷನ್ಸ್ ಟು ಲೋಕಸಭಾ ೧೯೮೯, ಕರ್ನಾಟಕ ಸ್ಟೇಟ್, ಪಬ್ಲಿಷ್‌ಡ್ ಬೈ ದಿ ಚೀಫ್ ಇಲೆಕ್ಟರಲ್ ಆಫೀಸರ್ ಟು ದಿ ಗವರ್ನ್‌ಮೆಂಟ್ ಅಫ್ ಕರ್ನಾಟಕ, ಬೆಂಗಳೂರು, ೧೯೯೦.

೫) ಇಲೆಕ್ಷನ್ ಸ್ಟಾಟಿಟಿಕ್ಸ್ ಅಫ್ ಜನರಲ್ ಇಲೆಕ್ಷನ್ಸ್ ಟು ಲೋಕಸಭಾ ೧೯೯೧, ಕರ್ನಾಟಕ ಸ್ಟೇಟ್, ಪಬ್ಲಿಷ್‌ಡ್ ಬೈ ದಿ ಚೀಫ್ ಇಲೆಕ್ಟೊರಲ್ ಆಫೀಸರ್ ಟು ದಿ ಗವರ್ನ್‌ಮೆಂಟ್ ಅಫ್ ಕರ್ನಾಟಕ, ಬೆಂಗಳೂರು, ೧೯೯೨ (ಪುಟ ೮೭)

೬) ಇಲೆಕ್ಷನ್ ಸ್ಟಾಟಿಸ್ಟಿಕ್ಸ್ ಅಫ್ ಜನರಲ್ ಇಲೆಕ್ಷನ್ಸ್ ಟು ಲೋಕಸಭಾ ೧೯೯೬, ಕರ್ನಾಟಕ ಸ್ಟೇಟ್, ಪಬ್ಲಿಷ್‌ಡ್ ಬೈದಿ ಚೀಫ್ ಇಲೆಕ್ಟರಲ್ ಆಫೀಸರ್ ಟು ದಿ ಗವರ್ನಮೆಂಟ್ ಅಫ್ ಕರ್ನಾಟಕ, ಬೆಂಗಳೂರು, ೧೯೯೭ (ಪುಟ ೧೦೫,೧೦೬)

೭) ಇಲೆಕ್ಷನ್ ಸ್ಟಾಟಿಸ್ಟಿಕ್ಸ್ ಅಫ್ ಜನರಲ್ ಇಲೆಕ್ಷನ್ಸ್ ಟು ಲೋಕಸಭಾ ೧೯೯೮, ಕರ್ನಾಟಕ ಸ್ಟೇಟ್, ಪಬ್ಲಿಷ್‌ಡ್ ಬೈದಿ ಚೀಫ್ ಇಲೆಕ್ಟರಲ್ ಆಫೀಸರ್ ಟು ದಿ ಗವರ್ನಮೆಂಟ್ ಅಫ್ ಕರ್ನಾಟಕ, ಬೆಂಗಳೂರು, ೧೯೯೯ (ಪುಟ ೬೭,೬೮)

೮) ಇಲೆಕ್ಷನ್ ಸ್ಟಾಟಿಸ್ಟಿಕ್ಸ್ ಅಫ್ ಜನರಲ್ ಇಲೆಕ್ಷನ್ಸ್ ಟು ಲೋಕಸಭಾ ೧೯೯೯, ಕರ್ನಾಟಕ ಸ್ಟೇಟ್, ಪಬ್ಲಿಷ್‌ಡ್ ಬೈ ದಿ ಚೀಫ್ ಇಲೆಕ್ಟರಲ್ ಆಫೀಸರ್ ಟು ದಿ ಗವರ್ನ್‌ಮೆಂಟ್ ಅಫ್ ಕರ್ನಾಟಕ, ಬೆಂಗಳೂರು, ೨೦೦೦ (ಪುಟ ४೧)

೯) ಇಲೆಕ್ಷನ್ ಸ್ಟಾಟಿಸ್ಟಿಕ್ಸ್ ಅಫ್ ಜನರಲ್ ಇಲೆಕ್ಷನ್ಸ್ ಟು ಲೋಕಸಭಾ ೨೦೦४, ಕರ್ನಾಟಕ ಸ್ಟೇಟ್, ಪಬ್ಲಿಷ್‌ಡ್ ಬೈದಿ ಚೀಫ್ ಇಲೆಕ್ಟರಲ್ ಆಫೀಸರ್ ಟು ದಿ ಗವರ್ನಮೆಂಟ್ ಅಫ್ ಕರ್ನಾಟಕ, ಬೆಂಗಳೂರು– ೨೦೦೫, ಆಗಸ್ಟ ३೦.

೧೦) ಇಲೆಕ್ಷನ್ ಸ್ಟಾಟಿಸ್ಟಿಕ್ಸ್ ಅಫ್ ಜನರಲ್ ಇಲೆಕ್ಷನ್ಸ್ ಟು ಲೋಕಸಭಾ ೨೦೦೯, ಕರ್ನಾಟಕ ಸ್ಟೇಟ್, ಪಬ್ಲಿಷ್‌ಡ್ ಬೈದಿ ಚೀಫ್ ಇಲೆಕ್ಟರಲ್ ಆಫೀಸರ್ ಟು ದಿ ಗವರ್ನ್‌ಮೆಂಟ್ ಅಫ್ ಕರ್ನಾಟಕ, ಬೆಂಗಳೂರು.

**ಆ. ವಿಧಾನಸಭಾ ಚುನಾವಣೆಗಳು**

(೧) ಇಲೆಕ್ಷನ್ ಸ್ಟಾಟಿಸ್ಟಿಕ್ಸ್ ಅಫ್ ಜನರಲ್ ಇಲೆಕ್ಷನ್ಸ್ ಟು ದಿ ಸ್ಟೇಟ್ ಲೆಜಿಸ್ಲೇಟಿವ್ ಅಸೆಂಬ್ಲಿ ೧೯೫೨–೭೭ ಕರ್ನಾಟಕ ಸ್ಟೇಟ್, ಪಬ್ಲಿಷ್‌ಡ್ ಬೈದಿ ಚೀಫ್ ಇಲೆಕ್ಟರಲ್ ಆಫೀಸರ್ ಟು ಗವರ್ನಮೆಂಟ್ ಅಫ್ ಕರ್ನಾಟಕ ಬೆಂಗಳೂರು, ೧೧–೦೬–೨೦೦೯.

(೨) ಇಲೆಕ್ಷನ್ ಸ್ಟಾಟಿಸಿಕ್ಸ್ ಅಫ್ ಜನರಲ್ ಇಲೆಕ್ಷನ್ಸ್ ಟು ದಿ ಸ್ಟೇಟ್ ಲೆಜಿಸ್ಲೇಟಿವ್ ಅಸೆಂಬ್ಲಿ ೧೯೭೮, ಕರ್ನಾಟಕ ಸ್ಟೇಟ್, ಪಬ್ಲಿಷ್‌ಡ್ ಬೈದಿ ಚೀಫ್ ಇಲೆಕ್ಟರಲ್ ಆಫೀಸರ್ ಟು ಗವರ್ನಮೆಂಟ್ ಅಫ್ ಕರ್ನಾಟಕ ಬೆಂಗಳೂರು– ೧೯೭೯ (ಪುಟ ೧೭೨–೧೮೬)

(೩) ಇಲೆಕ್ಷನ್ ಸ್ಟಾಟಿಸ್ಟಿಕ್ಸ್ ಅಫ್ ಜನರಲ್ ಇಲೆಕ್ಷನ್ಸ್ ಟು ದಿ ಸ್ಟೇಟ್ ಲೆಜಿಸ್ಲೇಟಿವ್ ಅಸೆಂಬ್ಲಿ ೧೯೮೩, ಕರ್ನಾಟಕ ಸ್ಟೇಟ್, ಪಬ್ಲಿಷ್‌ಡ್ ಬೈದಿ ಚೀಫ್ ಇಲೆಕ್ಟರಲ್ ಆಫೀಸರ್ ಟು ಗವರ್ನಮೆಂಟ್ ಅಫ್ ಕರ್ನಾಟಕ ಬೆಂಗಳೂರು–೧೯೮೪ (ಪುಟ ೨೮೮–೩೦೯)

(೪) ಇಲೆಕ್ಷನ್ ಸ್ಟಾಟಿಸ್ಟಿಕ್ಸ್ ಅಫ್ ಜನರಲ್ ಇಲೆಕ್ಷನ್ಸ್ ಟು ದಿ ಸ್ಟೇಟ್ ಲೆಜಿಸ್ಲೇಟಿವ್ ಅಸೆಂಬ್ಲಿ ೧೯೮೫, ಕರ್ನಾಟಕ ಸ್ಟೇಟ್, ಪಬ್ಲಿಷ್‌ಡ್ ಬೈದಿ ಚೀಫ್ ಇಲೆಕ್ಟರಲ್ ಆಫೀಸರ್ ಟು ಗವರ್ನಮೆಂಟ್ ಅಫ್ ಕರ್ನಾಟಕ ಬೆಂಗಳೂರು– ೧೯೮೬ (೨೮೮–೩೦೯) ಪುಟಗಳು.

(೫) ಇಲೆಕ್ಷನ್ ಸ್ಟಾಟಿಸ್ಟಿಕ್ಸ್ ಅಫ್ ಜನರಲ್ ಇಲೆಕ್ಷನ್ಸ್ ಟು ದಿ ಸ್ಟೇಟ್ ಲೆಜಿಸ್ಲೇಟಿವ್ ಅಸೆಂಬ್ಲಿ ೧೯೮೯, ಕರ್ನಾಟಕ ಸ್ಟೇಟ್, ಪಬ್ಲಿಷ್‌ಡ್ ಬೈದಿ ಚೀಫ್ ಇಲೆಕ್ಟರಲ್ ಆಫೀಸರ್ ಟು ಗವರ್ನಮೆಂಟ್ ಅಫ್ ಕರ್ನಾಟಕ ಬೆಂಗಳೂರು, ೧೯೮೯ (ಪುಟ ೩೪೪–೩೭೩)

(೬) ಇಲೆಕ್ಷನ್ ಸ್ಟಾಟಿಸ್ಟಿಕ್ಸ್ ಅಫ್ ಜನರಲ್ ಇಲೆಕ್ಷನ್ಸ್ ಟು ದಿ ಸ್ಟೇಟ್ ಲೆಜಿಸ್ಲೇಟಿವ್ ಅಸೆಂಬ್ಲಿ ೧೯೯೪, ಕರ್ನಾಟಕ ಸ್ಟೇಟ್, ಪಬ್ಲಿಷ್‌ಡ್ ಬೈದಿ ಚೀಫ್ ಇಲೆಕ್ಟರಲ್ ಆಫೀಸರ್ ಟು ಗವರ್ನಮೆಂಟ್ ಅಫ್ ಕರ್ನಾಟಕ ಬೆಂಗಳೂರು ೧೯೯೬ (ಪುಟಗಳು ೩೧೧–೩೪೦)

(೭) ಇಲೆಕ್ಷನ್ ಸ್ಟಾಟಿಸ್ಟಿಕ್ಸ್ ಅಫ್ ಜನರಲ್ ಇಲೆಕ್ಷನ್ಸ್ ಟು ದಿ ಸ್ಟೇಟ್ ಲೆಜಿಸ್ಲೇಟಿವ್ ಅಸೆಂಬ್ಲಿ ೧೯೯೯, ಕರ್ನಾಟಕ ಸ್ಟೇಟ್, ಪಬ್ಲಿಷ್‌ಡ್ ಬೈದಿ ಚೀಫ್ ಇಲೆಕ್ಟರಲ್ ಆಫೀಸರ್ ಟು ಗವರ್ನಮೆಂಟ್ ಅಫ್ ಕರ್ನಾಟಕ ಬೆಂಗಳೂರು, ೨೦೦೧ (ಪುಟ ೧೭೩–೧೮೭)

(೮) ಇಲೆಕ್ಷನ್ ಸ್ಟಾಟಿಸ್ಟಿಕ್ಸ್ ಅಫ್ ಜನರಲ್ ಇಲೆಕ್ಷನ್ಸ್ ಟು ದಿ ಸ್ಟೇಟ್ ಲೆಜಿಸ್ಲೇಟಿವ್ ಅಸೆಂಬ್ಲಿ ೨೦೦೪, ಕರ್ನಾಟಕ ಸ್ಟೇಟ್, ಪಬ್ಲಿಷ್‌ಡ್ ಬೈದಿ ಚೀಫ್ ಇಲೆಕ್ಟರಲ್ ಆಫೀಸರ್ ಟು ಗವರ್ನಮೆಂಟ್ ಅಫ್ ಕರ್ನಾಟಕ ಬೆಂಗಳೂರು, ೨೦೦೫

(೯) ಇಲೆಕ್ಷನ್ ಸ್ಟಾಟಿಸ್ಟಿಕ್ಸ್ ಅಫ್ ಜನರಲ್ ಇಲೆಕ್ಷನ್ಸ್ ಟು ದಿ ಸ್ಟೇಟ್ ಲೆಜಿಸ್ಲೇಟಿವ್ ಅಸೆಂಬ್ಲಿ ೨೦೦೯, ಕರ್ನಾಟಕ ಸ್ಟೇಟ್, ಪಬ್ಲಿಷ್‌ಡ್ ಬೈದಿ ಚೀಫ್ ಇಲೆಕ್ಟರಲ್ ಆಫೀಸರ್ ಟು ಗವರ್ನಮೆಂಟ್ ಅಫ್ ಕರ್ನಾಟಕ ಬೆಂಗಳೂರು.

**ಇ. ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತಿಗೆ ನಡೆದ ಚುನಾವಣೆಗಳಿಗೆ ಸಂಬಂಧಿಸಿದ್ದು**

(೧) ಕರ್ನಾಟಕ ರಾಜ್ಯ ಪತ್ರ, ಅಧಿಕೃತವಾಗಿ ಪ್ರಕಟಿಸಲಾದುದು ವಿಶೇಷ ಪತ್ರಿಕೆ ಭಾಗ – ೪–ಎ ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್‌ಗೆ ೧೯೯೫ರ ಚುನಾವಣೆಗಳಲ್ಲಿ ಆಯ್ಕೆಯಾದ ಸದಸ್ಯರ ಅಧಿಕೃತ ಪಟ್ಟಿ ದಿನಾಂಕ ೨–೪–೯೮.

(೨) ಕರ್ನಾಟಕ ರಾಜ್ಯ ಪತ್ರ , ಅಧಿಕೃತವಾಗಿ ಪ್ರಕಟಿಸಲಾದುದು ವಿಶೇಷ ಪತ್ರಿಕೆ ಭಾಗ – ೪–ಎ ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್‌ಗೆ ೨೦೦೦ದಲ್ಲಿ ಚುನಾವಣೆಗಳಲ್ಲಿ ಆಯ್ಕೆಯಾದ ಸದಸ್ಯರ ಅಧಿಕೃತ ಪಟ್ಟಿ ದಿನಾಂಕ ಜೂನ್ ೧೯– ೨೦೦೦.

(೩) ಕರ್ನಾಟಕ ರಾಜ್ಯ ಪತ್ರ, ಅಧಿಕೃತವಾಗಿ ಪ್ರಕಟಿಸಲಾದುದು ವಿಶೇಷ ಪತ್ರಿಕೆ ಭಾಗ –೪–ಎ ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್‌ಗೆ ೨೦೦೫ ರಲ್ಲಿ ಚುನಾವಣೆಗಳಲ್ಲಿ ಆಯ್ಕೆಯಾದ ಸದಸ್ಯರ ಅಧಿಕೃತ ಪಟ್ಟಿ ದಿನಾಂಕ ಜನವರಿ ೨, ೨೦೦೬.

(೪) ಕರ್ನಾಟಕ ರಾಜ್ಯ ಪತ್ರ, ಅಧಿಕೃತವಾಗಿ ಪ್ರಕಟಿಸಲಾದುದು ವಿಶೇಷ ಪತ್ರಿಕೆ ಭಾಗ – ೬–ಎ ಮಂಗಳೂರು ತಾಲೂಕು ಪಂಚಾಯತ್‌ಗೆ ೧೯೯೫ ರಲ್ಲಿ ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ ಆಯ್ಕೆಯಾದ ಸದಸ್ಯರ ಅಧಿಕೃತ ಪಟ್ಟಿ ದಿನಾಂಕ: ೧೬–೯–೯೮.

(೫) ಕರ್ನಾಟಕ ರಾಜ್ಯ ಪತ್ರ , ಅಧಿಕೃತವಾಗಿ ಪ್ರಕಟಿಸಲಾದುದು ವಿಶೇಷ ಪತ್ರಿಕೆ ಭಾಗ – ೬–ಎ ಮಂಗಳೂರು ತಾಲೂಕು ಪಂಚಾಯತ್‌ಗೆ ೨೦೦೦ ದಲ್ಲಿ ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ ಆಯ್ಕೆಯಾದ ಸದಸ್ಯರ ಅಧಿಕೃತ ಪಟ್ಟಿ ದಿನಾಂಕ ಜೂನ್ ೩೦, ೨೦೦೦.

(೬) ಕರ್ನಾಟಕ ರಾಜ್ಯ ಪತ್ರ , ಅಧಿಕೃತವಾಗಿ ಪ್ರಕಟಿಸಲಾದುದು ವಿಶೇಷ ಪತ್ರಿಕೆ ಭಾಗ –೬–ಎ ಮಂಗಳೂರು ತಾಲೂಕು ಪಂಚಾಯತ್‌ಗೆ ೨೦೦೫ ರಲ್ಲಿ ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ ಆಯ್ಕೆಯಾದ ಸದಸ್ಯರ ಅಧಿಕೃತ ಪಟ್ಟಿ ದಿನಾಂಕ ಜನವರಿ ೨, ೨೦೦೬.

(೭) ಕರ್ನಾಟಕ ರಾಜ್ಯ ಪತ್ರ , ಅಧಿಕೃತವಾಗಿ ಪ್ರಕಟಿಸಲಾದುದು ವಿಶೇಷ ಪತ್ರಿಕೆ ಭಾಗ – ೬–ಎ ಬಂಟ್ವಾಳ ತಾಲೂಕು ಪಂಚಾಯತ್‌ಗೆ ೧೯೯೫ರಲ್ಲಿ ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ ಆಯ್ಕೆಯಾದ ಸದಸ್ಯರ ಅಧಿಕೃತ ಪಟ್ಟಿ ದಿನಾಂಕ ಮಾರ್ಚ್ ೩೧, ೧೯೯೫.

(೮) ಕರ್ನಾಟಕ ರಾಜ್ಯ ಪತ್ರ, ಅಧಿಕೃತವಾಗಿ ಪ್ರಕಟಿಸಲಾದುದು ವಿಶೇಷ ಪತ್ರಿಕೆ ಭಾಗ –೬–ಎ ಬಂಟ್ವಾಳ ತಾಲೂಕು ಪಂಚಾಯತ್‌ಗೆ ೨೦೦೦ ದಲ್ಲಿ ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ ಆಯ್ಕೆಯಾದ ಸದಸ್ಯರ ಅಧಿಕೃತ ಪಟ್ಟಿ ದಿನಾಂಕ ಜೂನ್ ೩೦, ೨೦೦೦.

(೯) ಕರ್ನಾಟಕ ರಾಜ್ಯ ಪತ್ರ, ಅಧಿಕೃತವಾಗಿ ಪ್ರಕಟಿಸಲಾದುದು ವಿಶೇಷ ಪತ್ರಿಕೆ ಭಾಗ – ೬–ಎ ಬಂಟ್ವಾಳ ತಾಲೂಕು ಪಂಚಾಯತ್‌ಗೆ ೨೦೦೫ರಲ್ಲಿ ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ ಆಯ್ಕೆಯಾದ ಸದಸ್ಯರ ಅಧಿಕೃತ ಪಟ್ಟಿ ದಿನಾಂಕ ಜನವರಿ ೨ ೨೦೦೬.

(೧೦) ಕರ್ನಾಟಕ ರಾಜ್ಯ ಪತ್ರ, ಅಧಿಕೃತವಾಗಿ ಪ್ರಕಟಿಸಲಾದುದು ವಿಶೇಷ ಪತ್ರಿಕೆ ಭಾಗ – ೬–ಎ ಬೆಳ್ತಂಗಡಿ ತಾಲೂಕು ಪಂಚಾಯತ್‌ಗೆ ೧೯೯೫ರಲ್ಲಿ ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ ಆಯ್ಕೆಯಾದ ಸದಸ್ಯರ ಅಧಿಕೃತ ಪಟ್ಟಿ ದಿನಾಂಕ ಮಾರ್ಚ್ ೩೧, ೧೯೯೫.

(೧೧) ಕರ್ನಾಟಕ ರಾಜ್ಯ ಪತ್ರ, ಅಧಿಕೃತವಾಗಿ ಪ್ರಕಟಿಸಲಾದುದು ವಿಶೇಷ ಪತ್ರಿಕೆ ಭಾಗ – ೬–ಎ ಬೆಳ್ತಂಗಡಿ ತಾಲೂಕು ಪಂಚಾಯತ್‌ಗೆ ೨೦೦೦ ದಲ್ಲಿ ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ ಆಯ್ಕೆಯಾದ ಸದಸ್ಯರ ಅಧಿಕೃತ ಪಟ್ಟಿ ದಿನಾಂಕ ಜೂನ್ ೩೦, ೨೦೦೦.

(೧೨) ಕರ್ನಾಟಕ ರಾಜ್ಯ ಪತ್ರ, ಅಧಿಕೃತವಾಗಿ ಪ್ರಕಟಿಸಲಾದುದು ವಿಶೇಷ ಪತ್ರಿಕೆ ಭಾಗ – ೬–ಎ ಬೆಳ್ತಂಗಡಿ ತಾಲೂಕು ಪಂಚಾಯತ್‌ಗೆ ೨೦೦೫ ದಲ್ಲಿ ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ ಆಯ್ಕೆಯಾದ ಸದಸ್ಯರ ಅಧಿಕೃತ ಪಟ್ಟಿ ದಿನಾಂಕ ಜನವರಿ ೨, ೨೦೦೬.

(೧೩) ಕರ್ನಾಟಕ ರಾಜ್ಯ ಪತ್ರ, ಅಧಿಕೃತವಾಗಿ ಪ್ರಕಟಿಸಲಾದುದು ವಿಶೇಷ ಪತ್ರಿಕೆ ಭಾಗ –೬–ಎ ಪುತ್ತೂರು ತಾಲೂಕು ಪಂಚಾಯತ್‌ಗೆ ೧೯೯೫ರಲ್ಲಿ ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ ಆಯ್ಕೆಯಾದ ಸದಸ್ಯರ ಅಧಿಕೃತ ಪಟ್ಟಿ ದಿನಾಂಕ ಮಾರ್ಚ್ ೩೧, ೧೯೯೫.

(೧೪) ಕರ್ನಾಟಕ ರಾಜ್ಯ ಪತ್ರ, ಅಧಿಕೃತವಾಗಿ ಪ್ರಕಟಿಸಲಾದುದು ವಿಶೇಷ ಪತ್ರಿಕೆ ಭಾಗ –೬–ಎ ಪುತ್ತೂರು ತಾಲೂಕು ಪಂಚಾಯತ್‌ಗೆ ೨೦೦೦ ದಲ್ಲಿ ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ ಆಯ್ಕೆಯಾದ ಸದಸ್ಯರ ಅಧಿಕೃತ ಪಟ್ಟಿ ದಿನಾಂಕ ಜೂನ್ ೩೦, ೨೦೦೦.

(೧೫) ಕರ್ನಾಟಕ ರಾಜ್ಯ ಪತ್ರ, ಅಧಿಕೃತವಾಗಿ ಪ್ರಕಟಿಸಲಾದುದು ವಿಶೇಷ ಪತ್ರಿಕೆ ಭಾಗ – ೬–ಎ ಪುತ್ತೂರು ತಾಲೂಕು ಪಂಚಾಯತ್‌ಗೆ ೨೦೦೫ ರಲ್ಲಿ ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ ಆಯ್ಕೆಯಾದ ಸದಸ್ಯರ ಅಧಿಕೃತ ಪಟ್ಟಿ ದಿನಾಂಕ ಜನವರಿ ೨, ೨೦೦೬.

(೧೬) ಕರ್ನಾಟಕ ರಾಜ್ಯ ಪತ್ರ, ಅಧಿಕೃತವಾಗಿ ಪ್ರಕಟಿಸಲಾದುದು ವಿಶೇಷ ಪತ್ರಿಕೆ ಭಾಗ – ೬–ಎ ಸುಳ್ಯ ತಾಲೂಕು ಪಂಚಾಯತ್‌ಗೆ ೧೯೯೫ರಲ್ಲಿ ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ ಆಯ್ಕೆಯಾದ ಸದಸ್ಯರ ಅಧಿಕೃತ ಪಟ್ಟಿ ದಿನಾಂಕ ಮಾರ್ಚ್ ೩೧, ೧೯೯೫.

(೧೭) ಕರ್ನಾಟಕ ರಾಜ್ಯ ಪತ್ರ, ಅಧಿಕೃತವಾಗಿ ಪ್ರಕಟಿಸಲಾದುದು ವಿಶೇಷ ಪತ್ರಿಕೆ ಭಾಗ – ೬–ಎ ಸುಳ್ಯ ತಾಲೂಕು ಪಂಚಾಯತ್‌ಗೆ ೨೦೦೦ ದಲ್ಲಿ ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ ಆಯ್ಕೆಯಾದ ಸದಸ್ಯರ ಅಧಿಕೃತ ಪಟ್ಟಿ ದಿನಾಂಕ ಜೂನ್ ೩೦, ೨೦೦೦.

(೧೮) ಕರ್ನಾಟಕ ರಾಜ್ಯ ಪತ್ರ, ಅಧಿಕೃತವಾಗಿ ಪ್ರಕಟಿಸಲಾದುದು ವಿಶೇಷ ಪತ್ರಿಕೆ ಭಾಗ –೬–ಎ ಸುಳ್ಯ ತಾಲೂಕು ಪಂಚಾಯತ್‌ಗೆ ೨೦೦೬ ರಲ್ಲಿ ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ ಆಯ್ಕೆಯಾದ ಸದಸ್ಯರ ಅಧಿಕೃತ ಪಟ್ಟಿ ದಿನಾಂಕ ಜನವರಿ ೨, ೨೦೦೬.

(೧೯) ಮೂಡಬಿದ್ರಿ ಪುರಸಭೆಗೆ ೨೮–೦೯–೨೦೦೭ ರಂದು ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ ಆಯ್ಕೆಯಾದ ಸದಸ್ಯರ ಅಧಿಕೃತ ಪಟ್ಟಿಯ ಸಂಬಂಧಿಸಿದಂತೆ ಜಿಲ್ಲಾಧಿಕಾರಿಯವರ ಅಧಿಸೂಚನೆ, ನಂ. ಇಎಲ್‌ಸಿ ಸಿ.ಆರ್ ೧೬/೨೦೦೭–೦೮, ತಾರೀಕ ೧–೧೦–೦೭.

(೨೦) ಉಳ್ಳಾಲ ಪುರಸಭೆಗೆ ೨೮–೦೯–೦೭ ರಂದು ನಡೆದ ಸಾರ್ವತ್ರಿಕ ಚುನವಣೆಗಳಲ್ಲಿ ಆಯ್ಕೆಯಾದ ಸದಸ್ಯರ ಅಧಿಕೃತ ಪಟ್ಟಿಗೆ ಸಂಬಂಧಿಸಿದಂತೆ ಜಿಲ್ಲಾಧಿಕಾರಿಯವರ ಅಧಿಸೂವನೆ, ನಂ. ಇ.ಎಲ್ ಎನ್ ಸಿ.ಆರ್ ೧೬/೨೦೦೭–೦೮, ತಾರೀಕು ೧–೧೦–೦೭.

(೨೧) ಪುತ್ತೂರು ಪುರಸಭೆಗೆ ೨೮–೦೯–೦೭ ರಂದು ನಡೆದ ಸಾರ್ವತ್ರಿಕ ಚುನವಣೆಗಳಲ್ಲಿ ಆಯ್ಕೆಯಾದ ಸದಸ್ಯರ ಅಧಿಕೃತ ಪಟ್ಟಿಗೆ ಸಂಬಂಧಿಸಿದಂತೆ ಜಿಲ್ಲಾಧಿಕಾರಿಯವರ ಅಧಿಸೂವನೆ, ನಂ. ಇ.ಎಲ್ ಎನ್ ಸಿ.ಆರ್ ೧೬/೨೦೦೭–೦೮, ತಾರೀಕು ೧–೧೦–೦೭.

(೨೨) ಬೆಳ್ತಂಗಡಿ ಪಟ್ಟಣ ಪಂಚಾಯತಿಗೆ ೨೮–೦೯–೦೭ ರಂದು ನಡೆದ ಸಾರ್ವತ್ರಿಕ ಚುನವಣೆಗಳಲ್ಲಿ ಆಯ್ಕೆಯಾದ ಸದಸ್ಯರ ಅಧಿಕೃತ ಪಟ್ಟಿಗೆ ಸಂಬಂಧಿಸಿದಂತೆ ಜಿಲ್ಲಾಧಿಕಾರಿಯವರ ಅಧಿಸೂಚನೆ, ನಂ. ಇ.ಎಲ್ ಎನ್ ಸಿ.ಆರ್ ೧೬/೨೦೦೭–೦೮, ತಾರೀಕು ೧–೧೦–೦೭.

(೨೩) ಸುಳ್ಯ ಪಟ್ಟಣ ಪಂಚಾಯತಿಗೆ ೨೮–೦೯–೦೭ ರಂದು ನಡೆದ ಸಾರ್ವತ್ರಿಕ ಚುನವಣೆಗಳಲ್ಲಿ ಆಯ್ಕೆಯಾದ ಸದಸ್ಯರ ಅಧಿಕೃತ ಪಟ್ಟಿಗೆ ಸಂಬಂಧಿಸಿದಂತೆ ಜಿಲ್ಲಾಧಿಕಾರಿಯವರ ಅಧಿಸೂಚನೆ, ನಂ. ಇ.ಎಲ್ ಎನ್ ಸಿ.ಆರ್ ೧೬/೨೦೦೭–೦೮, ತಾರೀಕು ೧–೧೦–೦೭.

(೨೪) ಬಂಟ್ವಾಳ ಪಟ್ಟಣ ಪಂಚಾಯತಿಗೆ ೨೮–೦೯–೦೭ ರಂದು ನಡೆದ ಸಾರ್ವತ್ರಿಕ ಚುನವಣೆಗಳಲ್ಲಿ ಆಯ್ಕೆಯಾದ ಸದಸ್ಯರ ಅಧಿಕೃತ ಪಟ್ಟಿಗೆ ಸಂಬಂಧಿಸಿದಂತೆ ಜಿಲ್ಲಾಧಿಕಾರಿಯವರ ಅಧಿಸೂಚನೆ, ನಂ. ಇ.ಎಲ್ ಎನ್ ಸಿ.ಆರ್ ೧೬/೨೦೦೭–೦೮, ತಾರೀಕು ೧–೧೦–೦೭.

(೨೫) ಕರ್ನಾಟಕ ರಾಜ್ಯ ಪತ್ರ ಅಧಿಕೃತವಾಗಿ ಪ್ರಕಟಿಸಲಾದುದು ವಿಶೇಷ ಪತ್ರಿಕೆ ಭಾಗ ೬–ಎ ದಿನಾಂಕ ೨೮/೯/೨೦೦೭ ರಂದು ಮಂಗಳೂರು ನಗರ ಪಾಲಿಕೆಗೆ ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ ಆಯ್ಕೆಯಾದ ಸದಸ್ಯರ ಅಧಿಕೃತ ಪಟ್ಟಿ ದಿನಾಂಕ ಅಕ್ಟೋಬರ್ ೨೯, ೨೦೦೭.

# ಅಧ್ಯಾಯ – ೪

# ಕ್ರೈಸ್ತರ ರಾಜಕೀಯ ಬದುಕು, ಭಾಗವಹಿಸುವಿಕೆ ಹಾಗೂ ದೂರದೃಷ್ಟಿ

(ಕ್ಷೇತ್ರ ಕಾರ್ಯಾಧಾರಿತ ವಿವರಗಳು)

## ಅಧ್ಯಾಯ – ೪

# ಕ್ರೈಸ್ತರ ರಾಜಕೀಯ ಬದುಕು, ಭಾಗವಹಿಸುವಿಕೆ ಹಾಗೂ ದೂರದೃಷ್ಟಿ

## (ಕ್ಷೇತ್ರ ಕಾರ್ಯಾಧಾರಿತ ವಿವರಗಳು)

ಈ ಅಧ್ಯಯನವು ದಕ್ಷಿಣ ಕನ್ನಡ ಜಿಲ್ಲೆಯ ಕ್ರೈಸ್ತ ಸಮುದಾಯದ ರಾಜಕೀಯ ಭಾಗವಹಿಸುವಿಕೆಯ ಮಟ್ಟವನ್ನು ಶೋಧಿಸುವ ಮುಖ್ಯ ಉದ್ದೇಶವಿಟ್ಟುಕೊಂಡು ನಡೆಸಲಾಗಿದೆ. ಈ ಅಧ್ಯಾಯದಲ್ಲಿ ಸಂಶೋಧಕನು ೨೦೦೯ ರ ಜುಲಾಯಿ, ಆಗೋಸ್ತು ತಿಂಗಳುಗಳಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು ಹಾಗೂ ಬೆಳ್ತಂಗಡಿ ತಾಲೂಕುಗಳಿಗೆ ಸೇರಿದ ಪ್ರದೇಶಗಳಲ್ಲಿ ಪ್ರಶ್ನಾವಳಿ ವಿಧಾನದ ಮೂಲಕ ಪ್ರಾಥಮಿಕ ಮಾಹಿತಿಯನ್ನು ಕ್ರೈಸ್ತ ಸಮುದಾಯಕ್ಕೆ ಸೇರಿದ ಆಯ್ದ ೭೬ ವ್ಯಕ್ತಿಗಳಿಂದ ಸಂಗ್ರಹಿಸಲಾಯಿತು. ಈ ಜಿಲ್ಲೆಯ ಕ್ರೈಸ್ತ ಸಮುದಾಯದ ರಾಜಕೀಯ ಬದುಕು, ಭಾಗವಹಿಸುವಿಕೆ ಮತ್ತು ಅವರ ರಾಜಕೀಯ ದೂರದೃಷ್ಟಿಗೆ ಸಂಬಂಧಿಸಿದಂತೆ ಸಂಗ್ರಹಿಸಲಾದ ವಿವರಗಳನ್ನು ಈ ಕೆಳಗಿನ ಶೀರ್ಷಿಕೆಗಳಡಿಯಲ್ಲಿ ಕೋಷ್ಠಕಗಳ ಮೂಲಕ ಅಭಿವ್ಯಕ್ತಗೊಳಿಸಲಾಗಿದೆ.

(೧) ಕೌಟುಂಬಿಕ ಹಿನ್ನಲೆ – ಪ್ರಶ್ನಾವಳಿಗೆ ಉತ್ತರಿಸಿದವರ ವಯಸ್ಸು, ಲಿಂಗ, ಉದ್ಯೋಗ, ವಾಸ ಸ್ಥಳ, ಆದಾಯ, ಕ್ರೈಸ್ತ ಪಂಗಡ ಹಾಗೂ ವಿದ್ಯಾರ್ಹತೆಗಳಿಗೆ ಸಂಬಂಧಿಸಿದಂತೆ ಸಾಮಾನ್ಯ ವಿವರಗಳನ್ನೊಳಗೊಂಡ ಕೋಷ್ಠಕಗಳು

(೨) ಕ್ರೈಸ್ತರ ರಾಜಕೀಯ ಮಾಹಿತಿ ಮೂಲಗಳು ಮತ್ತು ಅವುಗಳ ವಿಶ್ಲೇಷಣೆ.

(೩) ಭಾಗವಹಿಸುವ ಕಾರ್ಯಕ್ರಮಗಳು

(೪) ಸೌಕರ್ಯ – ಸಮಸ್ಯೆ ಪರಿಹಾರ ಮಾರ್ಗಗಳು

(೫) ರಾಜಕೀಯ ಮತ್ತು ಮತ ಚಲಾವಣೆ

(೬) ಪಕ್ಷಾರ್ಹತೆ ಹಾಗೂ ಗೆಲುವುಗಳ ಮೌಲ್ಯಮಾಪನ

(೭) ಕ್ರೈಸ್ತ ಪೌರರ ವರ್ಗೀಕರಣ, ಪಲ್ಲೊಗ್ಳುವಿಕೆಗಳ ಮಹತ್ವ

(೮) ಚರ್ಚ್ (ಧರ್ಮಸಭೆ) ಮತ್ತು ರಾಜಕೀಯ ಭಾಗವಹಿಸುವಿಕೆ

(೯) ಕ್ರಿಶ್ಚಿಯನ್ನರು ಹಾಗೂ ರಾಜಕಾರಣ

(೧೦)ಇತರೆ ವಿವರಗಳು

**೪.೧. ಪ್ರಶ್ನಾವಳಿಗೆ ಉತ್ತರಿಸಿದವರಿಗೆ ಸಂಬಂಧಿಸಿದಂತೆ ಸಾಮಾನ್ಯ ಮಾಹಿತಿಗಳು**

ಪ್ರಶ್ನಾವಳಿಗೆ ಉತ್ತರಿಸಿದವರ ಕೌಟುಂಬಿಕ ಹಿನ್ನಲೆಯ ಪರಿಚಯ ನಮ್ಮ ಅಧ್ಯಯನ ವಿಷಯಕ್ಕೆ ಸಂಬಂಧಿಸಿದಂತೆ ಪ್ರಾಥಮಿಕ ಮಾಹಿತಿ ಸಂಗ್ರಹಣೆಯ ಸಂಧರ್ಭದಲ್ಲಿ ಕೈಗೆತ್ತಿಕೊಳ್ಳುವ ಪರಿಪಾಠವಿದೆ. ಅದರಂತೆ ಪ್ರಶ್ನಾವಳಿಯ ಆರಂಭದಲ್ಲಿ ಅವರ (ಉತ್ತರಿಸಿದವರ) ಲಿಂಗ, ವಯಸ್ಸು, ಉದ್ಯೋಗ, ವಾಸಸ್ಥಳ, ಆದಾಯ, ಕ್ರೈಸ್ತ ಪಂಗಡ ಹಾಗೂ ವಿದ್ಯಾರ್ಹತೆಗಳಿಗೆ ಸಂಬಂಧಿಸಿದಂತೆ ಸಾಮಾನ್ಯ ಮಾಹಿತಿಗಳನ್ನು ಸಂಗ್ರಹಿಸಲಾಯಿತು. ಒಟ್ಟಿಗೆ ನೂರು ಪ್ರಶ್ನಾವಳಿಗಳನ್ನು ಕ್ಷೇತ್ರಕಾರ್ಯದ ಸಂಧರ್ಭದಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ವ್ಯಾಪ್ತಿಯೊಳಗೆ ಬರುವ ಮಂಗಳೂರು ಮತ್ತು ಬೆಳ್ತಂಗಡಿ ತಾಲೂಕುಗಳಲ್ಲಿ ಆಯ್ದ ಮಂದಿಗೆ ಹಂಚಲಾಯಿತು. ಅದರಲ್ಲಿ ಕೇವಲ ೭೬ ಮಂದಿ ಮಾತ್ರ ಉತ್ತರಿಸಿದ್ದಾರೆ. ಈ ಎಪ್ಪತ್ತಾರು ಮಂದಿಯಲ್ಲಿ ೫೪ ಮಂದಿ ಪುರುಷರು ಹಾಗೂ ೨೨ ಮಂದಿ ಮಹಿಳೆಯರು ಪ್ರಶ್ನಾವಳಿಗುತ್ತರಿಸುವಲ್ಲಿ ಪಾಲ್ಗೊಂಡಿದ್ದಾರೆ. ಈ ಪ್ರಶ್ನಾವಳಿಗುತ್ತರಿಸಿದವರಲ್ಲಿ ಈ ಕೆಳಕಂಡ ವಯೋಮಾನ ಗುಂಪುಗಳಿಗೆ ಸೇರಿದವರಿದ್ದಾರೆ.

ಕೋಷ್ಟಕ ೪.೧.೧.

**ಮಾಹಿತಿದಾರರ ವಯೋಮಾನ ವರ್ಗೀಕರಣ**

| ಕ್ರ. ಸಂಖ್ಯೆ | ವಯೋಮಾನ | ಸಂಖ್ಯೆ | ಶೇಕಡಾವಾರು |
|---|---|---|---|
| ೧ | ೧೮–೩೪ | ೧೨ | ೧೫.೭೮% |
| ೨ | ೩೫–೪೪ | ೨೬ | ೩೪.೨೧% |
| ೩ | ೪೫–೫೪ | ೨೮ | ೩೬.೮೪% |
| ೪ | ೫೫ ರಿಂದ ಮೇಲ್ಪಟ್ಟು | ೧೦ | ೧೩.೧೫% |
| ೫ | ಒಟ್ಟು | ೭೬ | ೧೦೦.೦೦% |

* ಮೂಲ, ಸಂಶೋಧಕನ ಕ್ಷೇತ್ರಕಾರ್ಯಾಧಾರಿತ ಮಾಹಿತಿ.

ಹೀಗೆ ಮಾಹಿತಿ ಸಂಗ್ರಹಣೆ ಅರ್ಥ ಪೂರ್ಣಗೊಳಿಸಲು ಈ ಮೇಲೆ ಕಾಣಿಸಿದಂತೆ ಎಲ್ಲಾ ವಯೋಮಾನ ಗುಂಪಿನವರನ್ನು ಒಳಗೊಳ್ಳಿಸಲಾಯಿತು. ಆದರೆ ಮಧ್ಯ ವಯಸ್ಕ ಗುಂಪಿನವರಿಗೆ ಸ್ವಲ್ಪ ಹೆಚ್ಚಿಗೆ ಪ್ರಾತಿನಿಧ್ಯ ಕಲ್ಪಿಸಿ ಅವರ ರಾಜಕೀಯ ಬದುಕಿನ ಅನುಭವೀ ಮಾಹಿತಿ ಸಂಗ್ರಹಿಸಲಾಯಿತು.

ಮಾಹಿತಿದಾರರ ಆರ್ಥಿಕ ಹಿನ್ನಲೆಯನ್ನು ಗಮನದಲ್ಲಿನ್ನಕೊಂಡು ಸಮುದಾಯದ ಎಲ್ಲಾ ವರ್ಗಕ್ಕೆ ಸೇರಿದವರನ್ನು ಮಾಹಿತಿದಾರರ ಪಟ್ಟಿಯಲ್ಲಿ ಒಳಗೊಳ್ಳಿಸಲಾಗಿದೆ. ಮಾಹಿತಿದಾರರ ಔದ್ಯೋಗಿಕ ವರ್ಗೀಕರಣದ ನೆಲೆಯಲ್ಲಿ ಈ ಕೆಳಗಿನಂತೆ ಪ್ರಾತಿನಿಧ್ಯವನ್ನು ಕೊಡಲಾಗಿದೆ.

ಕೋಷ್ಠಕ ಸಂಖ್ಯೆ ೪.೧.೨.

**ಔದ್ಯೋಗಿಕ ನೆಲೆಯಲ್ಲಿ ಮಾಹಿತಿದಾರರ ವರ್ಗೀಕರಣ**

| ಕ್ರ. ಸಂಖ್ಯೆ | ಉದ್ಯೋಗ | ಸಂಖ್ಯೆ | ಶೇಕಡಾವಾರು |
|---|---|---|---|
| ೧ | ಕೃಷಿಕ | ೦೮ | ೧೦.೫೨% |
| ೨ | ಕೃಷಿ ಕಾರ್ಮಿಕ | ೦೩ | ೩.೯೪% |
| ೩ | ಮನೆ ವಾಳ್ತೆ | ೦೪ | ೫.೨೬% |
| ೪ | ನಿರುದ್ಯೋಗಿ | ೦೩ | ೩.೯೪% |
| ೫ | ಉದ್ಯೋಗಿ | ೫೮ | ೭೬.೩೧% |
| ೬ | ಒಟ್ಟು | ೭೬ | ೧೦೦.೦೦% |

* ಮೂಲ, ಸಂಶೋಧಕನ ಕ್ಷೇತ್ರಕಾಯಾಧಾರಿತ ಮಾಹಿತಿ.

ಮೇಲಿನ ಕೋಷ್ಠಕದಲ್ಲಿ ಉದ್ಯೋಗಿಗಳೇ ಹೆಚ್ಚಿನ ಸಂಖ್ಯೆಯಲ್ಲಿ ಕ್ಷೇತ್ರಕಾರ್ಯದಲ್ಲಿ ಸಂಶೋಧಕನಿಗೆ ಮಾಹಿತಿದಾರರಾಗಿ ಲಭಿಸಿರುವುದು. ಉದ್ಯೋಗಿಗಳಿಗೆ ಹೆಚ್ಚಿನ ರಾಜಕೀಯ ವಿದ್ಯಾಮಾನಗಳ ಕುರಿತು ತಿಳುವಳಿಕೆಯ ಮಟ್ಟ ಹೆಚ್ಚಿರುತ್ತದೆ. ಕ್ಷೇತ್ರಕಾರ್ಯದಲ್ಲಿ ನೆರವಾದ ಮಾಹಿತಿದಾರರಲ್ಲಿ ಹೆಚ್ಚಿನವರು ಅಂದರೆ ೪೯ (೬೪.೪೭%) ಮಂದಿ ಗ್ರಾಮಾಂತರ ಪ್ರದೇಶಕ್ಕೆ ಸೇರಿದವರಾಗಿದ್ದಾರೆ. ಹಾಗೂ ೨೭ (೩೫.೫೨%) ಮಂದಿ ನಗರ ಪ್ರದೇಶಕ್ಕೆ ಸೇರಿದವರು.

ಕ್ಷೇತ್ರಕಾರ್ಯಕ್ಕೆ ಸಹಕರಿಸಿದ ಮಾಹಿತಿದಾರರ ಆದಾಯಕ್ಕೆ ಸಂಬಂಧಿಸಿದ ಮಾಹಿತಿಗಳು ಈ ಕೆಳಗಿನಂತಿವೆ.

ಕೋಷ್ಠಕ ಸಂಖ್ಯೆ ೪.೧.೩

**ಮಾಹಿತಿದಾರರ ವರಮಾನಾಧಾರಿತ ವರ್ಗೀಕರಣ**

| ಕ್ರ. ಸಂಖ್ಯೆ | ವರಮಾನ ಗುಂಪು | ಸಂಖ್ಯೆ | ಶೇಕಡಾವಾರು ಪ್ರಮಾಣ |
|---|---|---|---|
| ೧ | ರೂ. ೧,೦೦೦/–ದಿಂದ ರೂ. ೧೦,೦೦೦/– | ೦೯ | ೧೧.೮೪% |
| ೨ | ರೂ. ೧೦,೦೦೦/–ದಿಂದ ರೂ. ೨೦,೦೦೦/– | ೧೩ | ೧೭.೧೦% |
| ೩ | ರೂ. ೨೦,೦೦೦/–ದಿಂದ ಮೇಲ್ಪಟ್ಟು | ೫೪ | ೭೧.೦೫% |
| | ಒಟ್ಟು | ೭೬ | ೧೦೦.೦೦% |

* ಮೂಲ: ಸಂಶೋಧಕನ ಕ್ಷೇತ್ರಕಾರ್ಯಾಧಾರಿತ ಮಾಹಿತಿ.

ದಕ್ಷಿಣ ಕನ್ನಡದ ಕ್ರೈಸ್ತ ಸಮುದಾಯದಲ್ಲಿ ಅನೇಕ ಗುಂಪು ಮತ್ತು ಪಂಗಡಗಳಿವೆ. ಅವರಾಡುವ ಭಾಷೆಯ ನೆಲೆಯಲ್ಲಿ ಇಲ್ಲಿನ ಕ್ರೈಸ್ತ ಸಮುದಾಯವನ್ನು ಮೂರು ಮುಖ್ಯ ಗುಂಪುಗಳಾಗಿ, ಅಧ್ಯಯನದ ಅನುಕೂಲಕ್ಕೋಸ್ಕರ ವರ್ಗೀಕರಿಸಲಾಗಿದೆ. ಆ ಮೂರು ಗುಂಪುಗಳಾವುವೆಂದರೆ ಕೊಂಕಣಿ ಕ್ರೈಸ್ತ, ಕನ್ನಡ ಬಾಷಿಗರಾದ ಪ್ರೋಟೆಸ್ಟಾಂಟ್ ಕ್ರೈಸ್ತ ಹಾಗೂ ಮಲಯಾಳಿ ಕ್ರೈಸ್ತರು. ಈ ಮೂರು ಗುಂಪುಗಳಿಗೆ ಕೆಳಗೆ ತೋರಿಸಿರುವ ಕೋಷ್ಟಕದಲ್ಲಿ ನಮೂದಿಸಿದಂತೆ ಮಾಹಿತಿ ಸಂಗ್ರಹಣದ ಸಂದರ್ಭದಲ್ಲಿ ಪ್ರಾತಿನಿಧ್ಯ ಕೊಡಲಾಗಿತ್ತು.

ಕೋಷ್ಟಕ ಸಂಖ್ಯೆ ೪.೧.೪. **ಪಂಗಡಾಧಾರಿತ ಮಾಹಿತಿದಾರರು**

| ಕ್ರ. ಸಂಖ್ಯೆ | ಪಂಗಡಗಳು | ಸಂಖ್ಯೆ | ಶೇಕಡಾವಾರು |
|---|---|---|---|
| ೧ | ಕೊಂಕಣಿ ಕ್ರೈಸ್ತ | ೫೦ | ೬೫.೭೮% |
| ೨ | ಪ್ರೊಟೆಸ್ಟೆಂಟ್ ಕ್ರೈಸ್ತ | ೦೮ | ೧೦.೫೨% |
| ೩ | ಮಲಯಾಳಿ ಕ್ರೈಸ್ತ | ೧೮ | ೨೩.೬೮% |
| ೪ | ಒಟ್ಟು | ೭೬ | ೧೦೦.೦೦% |

* ಮೂಲ: ಸಂಶೋಧಕನ ಕ್ಷೇತ್ರಾಕಾರ್ಯಾಧಾರಿತ ಮಾಹಿತಿ.

ಕೊಂಕಣಿ ಭಾಷಿಗರಾದ ಕ್ರೈಸ್ತರಿಗೆ ಹೆಚ್ಚಿಗೆ ಪ್ರಾತಿನಿಧ್ಯ ಇಲ್ಲಿ ಕೊಟ್ಟಿರುವುದೇಕೆಂದರೆ ಅವರು ದಕ್ಷಿಣ ಕನ್ನಡದ ಕ್ರೈಸ್ತ ಸಮುದಾಯದಲ್ಲಿ ದೊಡ್ಡ ಗುಂಪಿಗೆ ಸೇರಿದವರು. ಮಂಗಳೂರು ಧರ್ಮ ಪ್ರಾಂತ್ಯದ ಇತ್ತೀಚೆಗಿನ ಲೆಕ್ಕದಂತೆ ದ.ಕ. ಕಂದಾಯ ಜಿಲ್ಲೆಯ ವ್ಯಾಪ್ತಿಯಲ್ಲಿ ಅಂದಾಜು ಎರಡು ಮುಕ್ಕಾಲು (೨/೩/೪) ಲಕ್ಷದಷ್ಟು ಕೊಂಕಣಿ ಕ್ರೈಸ್ತರಿದ್ದಾರೆ. ಸುಮಾರು ಒಂದರಿಂದ ಒಂದೂವರೆ ಲಕ್ಷದಷ್ಟು ಮಲಯಾಳಿ ಕ್ರೈಸ್ತರಿದ್ದಾರೆ ಮತ್ತು ಸುಮಾರು ೧೨ ಸಾವಿರದಷ್ಟು ಪ್ರೊಟೆಸ್ಟಾಂಟ್ ಸಮುದಾಯಕ್ಕೆ ಸೇರಿದ ಕ್ರೈಸ್ತರಿದ್ದಾರೆ. ಇಷ್ಟು ಮಾತ್ರವಲ್ಲದೆ ಇಲ್ಲಿನ ಕ್ರೈಸ್ತ ಸಮುದಾಯದಲ್ಲಿ ಸಣ್ಣ ಪುಟ್ಟ ಒಳಪಂಗಡಗಳಿದ್ದಾವೆ.

ರಾಜಕೀಯ ಭಾಗವಹಿಸುವಿಕೆಯಲ್ಲಿ ಜನರ ಶಿಕ್ಷಣ ಮಟ್ಟವೂ ಸಹ ಒಂದು ನಿರ್ಧಾರಕ ಅಂಶವೆನ್ನಬಹುದು. ಇಲ್ಲಿನ ಕ್ರೈಸ್ತ ಸಮುದಾಯಕ್ಕೆ ಸೇರಿದ ವಿವಿಧ ಮಟ್ಟದ ವಿದ್ಯಾರ್ಹತೆಯನ್ನು ಹೊಂದಿರುವ ಮಾಹಿತಿದಾರರನ್ನು ಇಲ್ಲಿನ ಅಧ್ಯಯನಕ್ಕೊಳಪಡಿಸಿರುವುದು ಈ ಕೆಳಗಿನ ಕೋಷ್ಟಕದಿಂದ ಅಭಿವ್ಯಕ್ತಗೊಳ್ಳಬಹುದು.

ಕೋಷ್ಟಕ ಸಂಖ್ಯೆ ೪.೧.೫.

**ಮಾಹಿತಿದಾರರು ವಿದ್ಯಾರ್ಹತೆಯ ನೆಲೆಯಲ್ಲಿ**

| ಕ್ರ. ಸಂಖ್ಯೆ | ವಿದ್ಯಾರ್ಹತೆ | ಸಂಖ್ಯೆ | ಶೇಕಡಾವಾರು ಪ್ರಮಾಣ |
|---|---|---|---|
| ೧ | ಅನಕ್ಷರಸ್ಥ | ೦೧ | ೧.೩೧% |
| ೨ | ಪ್ರಾಥಮಿಕ ಶಿಕ್ಷಣ | ೦೪ | ೫.೨೬% |
| ೩ | ಪ್ರೌಢ ಶಿಕ್ಷಣ | ೧೧ | ೧೪.೪೭% |
| ೪ | ಪದವಿ ಪೂರ್ವ ಶಿಕ್ಷಣ | ೦೭ | ೯.೨೧% |
| ೫ | ಪದವಿ ಶಿಕ್ಷಣ | ೨೪ | ೩೧.೫೭% |
| ೬ | ಸ್ನಾತ್ತಕೋತ್ತರ | ೨೯ | ೩೮.೧೫% |
| ೭ | ಒಟ್ಟು | ೭೬ | ೧೦೦.೦೦% |

* ಮೂಲ: ಸಂಶೋಧಕನ ಕ್ಷೇತ್ರ–ಕಾರ್ಯಧಾರಿತ ಮಾಹಿತಿ.

**೪.೨. ಕ್ರೈಸ್ತರ ರಾಜಕೀಯ ಮಾಹಿತಿಯ ಮೂಲಗಳು**

ಸಮುದಾಯದ ರಾಜಕೀಯ ಮಾಹಿತಿಯ ಮೂಲಗಳು ಯಾವುದೆಂದು ಅರಿತರೆ, ಅವರ ರಾಜಕೀಯ ಭಾಗವಹಿಸುವಿಕೆಯ ಮೇಲಿನ ಆಸಕ್ತಿಯೆಷ್ಟಿರಬಹುದೆಂದು ತಿಳಿಯಲು ಸಾಧ್ಯವಾಗುತ್ತದೆ. ಇತರರಂತೆ ಕ್ರೈಸ್ತರೂ ಸಹ ರಾಜಕೀಯಕ್ಕೆ ಸಂಬಂಧಿಸಿದಂತೆ ವಿವಿಧ ಮೂಲಗಳಿಂದ ಮಾಹಿತಿಗಳನ್ನು ವಿವಿಧ ಮಟ್ಟಗಳಲ್ಲಿ ಕ್ರೋಢಿಕರಿಸುತ್ತಾರೆಂದು ತಿಳಿಯಬಹುದಾಗಿದೆ. ಇಲೆಕ್ಟ್ರಾನಿಕ್ ಸುದ್ದಿ ಮಾಧ್ಯಮಗಳ ಭರಾಟೆಯ ಈ ದಿನಗಳಲ್ಲೂ ವೃತ್ತ ಪತ್ರಿಕೆಗಳ ಮೇಲಿನ ಬೇಡಿಕೆ ಈ ಜಿಲ್ಲೆಯಲ್ಲೂ ಇನ್ನೂ ಜೀವಂತವಾಗಿದೆಯೆನ್ನಬಹುದು. ಕ್ಷೇತ್ರಕಾರ್ಯಾಧಾರಿತ ಮಾಹಿತಿಗಳ ಪ್ರಕಾರ ಇಲ್ಲಿನ ಕ್ರೈಸ್ತ ಸಮುದಾಯದವರು ರಾಜಕೀಯಕ್ಕೆ ಸಂಬಂಧಿಸಿದ ಮಾಹಿತಿಯನ್ನು ಈ ಕೆಳಗೆ ನಮೂದಿಸಿರುವ ವಿವಿಧ ಪತ್ರಿಕೆಗಳಿಂದ ಪಡೆಯುತ್ತಾರೆಂಬುದನ್ನು ಗಮನಿಸಬಹುದಾಗಿದೆ.

ಕೋಷ್ಟಕ ಸಂಖ್ಯೆ ೪.೨.೧.

**ಕ್ರೈಸ್ತರಲ್ಲಿ ವಿವಿಧ ಪತ್ರಿಕೆಗಳ ಓದುಗರ ಪ್ರಮಾಣ**

| ಕ್ರ. ಸಂಖ್ಯೆ | ಪತ್ರಿಕೆ | ಓದುಗರ ಸಂಖ್ಯೆ | ಶೇಕಡಾವಾರು ಪ್ರಮಾಣ |
|---|---|---|---|
| ೧ | ಉದಯವಾಣಿ | ೪೪ | ೫೭.೮೯% |
| ೨ | ವಿಜಯ ಕರ್ನಾಟಕ | ೧೮ | ೨೩.೬೮% |
| ೩ | ಪ್ರಜಾವಾಣಿ | ೦೪ | ೫.೨೬% |
| ೪ | ಇಂಗ್ಲೀಷ್ | ೦೮ | ೧೦.೫೨% |
| ೫ | ಇತರ | ೦೨ | ೨.೬೩% |
| ೬ | ಒಟ್ಟು | ೭೬ | ೧೦೦.೦೦% |

* ಮೂಲ: ಸಂಶೋಧಕನ ಕ್ಷೇತ್ರಕಾರ್ಯಧಾರಿತ ಮಾಹಿತಿ:

ಜಿಲ್ಲೆಯಲ್ಲಿ ಕ್ರೈಸ್ತ ಸಮುದಾಯದವರೂ ಮಾಹಿತಿಗಾಗಿ ಹೆಚ್ಚಿಗೆ ನೆಚ್ಚಿಕೊಂಡಿರುವುದು ಉದಯವಾಣಿ ದಿನಪತ್ರಿಕೆಯೆಂಬುದನ್ನು ಇಲ್ಲಿ ಗಮನಿಸಬಹುದಾಗಿದೆ. ನಂತರದ ಸ್ಥಾನ ವಿಜಯ

ಕರ್ನಾಟಕ್ಕೆ ಸಲ್ಲುತ್ತದೆ. ಕನ್ನಡ ಹಾಗೂ ಇಂಗ್ಲೀಷ್ ದೈನಿಕಗಳೊಂದಿಗೆ ಅಲ್ಪ ಪ್ರಮಾಣದಲ್ಲಿ ಕೊಂಕಣಿ ಪತ್ರಿಕೆಗಳ ಓದುಗರೂ ಸಹ ಇದ್ದಾರೆ. ಪತ್ರಿಕೆಗಳಲ್ಲಿ ಪ್ರಕಟವಾಗುವಂತಹ ಎಲ್ಲಾ ವಿಚಾರಗಳನ್ನೂ ಗಮನಿಸುತ್ತಾರೆಂಬುದಾಗಿ ಹೆಚ್ಚಿನ ಮಾಹಿತಿದಾರರು ಹೇಳಿಕೊಂಡಿದ್ದಾರೆ. ಎಪ್ಪತ್ತಾರು ಮಾಹಿತಿದಾರರ ಪೈಕಿ ೬೬(೮೬.೮೪%) ಮಂದಿ ದೂರದರ್ಶನ ಕಾರ್ಯಕ್ರಮಗಳನ್ನು ವೀಕ್ಷಿಸುತ್ತಾರೆಂದು ತಿಳಿಸಿದ್ದಾರೆ. ಅದರೆ ಈ ದಿನಗಳಲ್ಲಿ ರೇಡಿಯೋ ಕಾರ್ಯಕ್ರಮಗಳನ್ನು ಆಲಿಸುವವರ ಸಂಖ್ಯೆ ಎಪ್ಪತ್ತಾರರಲ್ಲಿ ಕೇವಲ ಹತ್ತು ಮಂದಿ (೧೩.೧೫) ಮಾತ್ರ ಆಗಿರುತ್ತದೆ. ಸುದ್ದಿ ಮಾಧ್ಯಮಗಳಲ್ಲಿ ಅದಂತಹ ಕ್ರಾಂತಿ ರಾಜಕೀಯ ಭಾಗವಹಿಸುವಿಕೆಯ ಮೇಲೂ ಖಂಡಿತವಾಗಿಯೂ ತನ್ನದೇ ಆದ ಪ್ರಭಾವವನ್ನು ಬೀರುತ್ತದೆಂಬುವುದು ಸಾಮಾನ್ಯ ತಿಳುವಳಿಕೆಯ ವಿಚಾರವಾಗಿದೆ.

**೪.೩. ಭಾಗವಹಿಸುವ ಕಾರ್ಯಕ್ರಮಗಳು**

ಮಾನವ ಸಂಘ ಜೀವನ ನಡೆಸುತ್ತಾನೆ. ಅರಿಸ್ಟಾಟಲನ ಪ್ರಕಾರ ಮನುಷ್ಯ ಸಮಾಜ ಜೀವಿ ಮತ್ತು ರಾಜಕೀಯ ಜೀವಿಯೂ ಸಹ ಹೌದೆಂಬುದಾಗಿ ಹೇಳಿದ್ದಾನೆ. ಸಾಮೂಹಿಕ/ ಸಮಾಜಿಕ ಕಾರ್ಯಚಟುವಟಿಕೆಯಲ್ಲಿ ಭಾಗಿಯಾಗಲಾರದವನು ರಾಜಕೀಯ, ರಾಷ್ಟ್ರೀಯ ಚಟುವಟಿಗಳಲ್ಲೂ ಭಾಗವಹಿಸಲಾರನು. ಈ ದಿಸೆಯಲ್ಲಿ ಕ್ರೈಸ್ತ ಸಮುದಾಯವು ಈ ಮೇಲೆ ತಿಳಿಸಿದ ಕ್ಷೇತ್ರಗಳಲ್ಲಿ ಅವನ ಭಾಗೀದಾರಿಕೆಯ ಪ್ರಮಾಣಕ್ಕೆ ಸಂಬಂಧಿಸಿದಂತೆ ಪ್ರಾಥಮಿಕ ಮಾಹಿತಿಯನ್ನು ಸಂಗ್ರಹಿಸಲಾಯಿತು. ಪ್ರಶ್ನಾವಳಿಗುತ್ತರಿಸಿದ ಎಪ್ಪತ್ತಾರು ಮಂದಿಯ ಪೈಕಿ ಎಪ್ಪತ್ತೆರಡು ಮಂದಿಯೂ ರಾಷ್ಟ್ರೀಯ ಹಬ್ಬಗಳಾದ ಸ್ವಾತಂತ್ರ್ಯ ದಿನಾಚರಣೆ, ಗಣರಾಜ್ಯ ದಿನಾಚರಣೆಗಳಲ್ಲಿ ಭಾಗವಹಿಸುವರೆಂದು ತಿಳಿಸಿದ್ದಾರೆ. ಆದಕಾರಣ ರಾಷ್ಟ್ರೀಯ ಹಬ್ಬಗಳಲ್ಲಿ ಅವರ ಭಾಗವಹಿಸುವಿಕೆಯ ಪ್ರಮಾಣ ಬಹಳಷ್ಟು ಹೆಚ್ಚಿದೆ (ಶೇಕಡ ೯೪.೨೩%).

ಅದೇ ರೀತಿಯಲ್ಲಿ ತಮ್ಮದೇ ಸಮುದಾಯದ ಹುಟ್ಟುಹಬ್ಬ, ಮದುವೆ ಹಾಗೂ ಇತರೇ ಸಾಮಾಜಿಕ ಚಟುವಟಿಕೆಗಳಲ್ಲಿ ನೂರಕ್ಕೆ ನೂರು ಶೇಕಡ (ಅಂದರೆ ಎಲ್ಲಾ ಎಪ್ಪತ್ತಾರು ಮಂದಿ) ಭಾಗವಹಿಸುವವರೆಂದು ಮಾಹಿತಿ ನೀಡಿದ್ದಾರೆ. ಆದರೆ ಕ್ರೈಸ್ತೇತರರ ಸಾಮಾಜಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸುವಿಕೆಯ ವಿಚಾರದಲ್ಲಿ ಶೇಕಡ ೯೭.೩೬ ರಷ್ಟು ಮಂದಿ ಭಾಗವಹಿಸುತ್ತಾರೆ.

ಮೇಲ್ಕಾಣಿಸಿದ ಅಂಕಿ ಅಂಶಗಳು ಕ್ರೈಸ್ತರ ಭಾಗವಹಿಸುವಿಕೆಯ ಪ್ರಮಾಣ ರಾಷ್ಟ್ರೀಯ, ಸಾಮಾಜಿಕ/ಸಾಮುದಾಯಿಕ (ಕ್ರೈಸ್ತ ಹಾಗೂ ಕ್ರೈಸ್ತೇತರರ) ಕಾರ್ಯಕ್ರಮಗಳಲ್ಲೂ ಉತ್ತಮವಾಗಿದೆಯೆಂದು ತಿಳಿಯಬಹುದಾಗಿದೆ.

## ೪.೪. ಸೌಕರ್ಯ – ಸಮಸ್ಯೆ – ಪರಿಹಾರ ಮಾರ್ಗಗಳು

ನಾಗರಿಕ ಆವಶ್ಯಕತೆಗಳು, ಮೂಲಭೂತ ಸೌಕರ್ಯಗಳಿಗೆ ಸಂಬಂಧಿಸಿದಂತೆ ಯಾವುದೇ ಅಡಚಣೆಗಳು/ಸಮಸ್ಯೆಗಳು ಎದುರಾಗುವ ಸಂಧರ್ಭದಲ್ಲಿ ಕ್ರೈಸ್ತ ಸಮುದಾಯ ಹೇಗೆ ಪ್ರತಿಕ್ರಿಯಿಸುತ್ತದೆ/ಸ್ಪಂದಿಸುತ್ತದೆಂದು ತಿಳಿಯುವ ಪ್ರಯತ್ನ ಮಾಡಲಾಯಿತು. ಉದಾಹರಣೆಗೆ ಕುಡಿಯುವ ನೀರು ಸರಬರಾಜು, ವಿದ್ಯುತ್ಚ್ಛಕ್ತಿ, ರಸ್ತೆ ಸಂಪರ್ಕ ಇತ್ಯಾದಿ ಸಮಸ್ಯೆಗಳ ಪರಿಹಾರಕ್ಕೆ ಅವರು ಅನುಸರಿಸುವ ಮಾರ್ಗಗಳು/ವಿಧಾನಗಳಾವುವೆಂಬ ಪ್ರಶ್ನೆಗೆ ಕೊಟ್ಟ ಆಯ್ಕೆಗಳಲ್ಲಿ, ಸಂಬಂಧಿಸಿದವರಿಗೆ ಮನವಿ ಅರ್ಪಿಸುವುದರ ಮೂಲಕ ಮೇಲಿನ ಸಮಸ್ಯಗಳಿಗೆ ಪರಿಹಾರ ಕಂಡುಕೊಳ್ಳಲಾಗುವುದೆಂದು ಉತ್ತರಿಸಿದ್ದಾರೆ. ಒಂದು ವೇಳೆ ಸಂಬಂಧಿಸಿದ ಇಲಾಖೆಗಳು/ಅಧಿಕಾರಿಗಳು ತಮ್ಮ ಮನವಿಗಳಿಗೆ ಸ್ಪಂದಿಸದಿದ್ದರೆ, ಕೊನೆಯದಾಗಿ ಪ್ರತಿಭಟನೆಗಳನ್ನು ಹಮ್ಮಿಕೊಳ್ಳುವ ಆಯ್ಕೆಯನ್ನು ಕೈಗೆತ್ತಿಕೊಳ್ಳಬಹುದಾಗಿದೆ.

ಕ್ರೈಸ್ತ ಸಮುದಾಯದ ಮಂದಿಗೆ ನೀವು ಯಾವತ್ತದಾರೂ ರಾಜಕೀಯ ಪ್ರತಿಭಟನೆಗಳಲ್ಲಿ ಭಾಗವಹಿಸಿದ್ದೀರಾ, ಎಂಬ ಪ್ರಶ್ನೆಗೆ ಬಹಳಷ್ಟು ಕಡಿಮೆ ಮಂದಿ ಸಕಾರಾತ್ಮಕವಾಗಿ ಸ್ಪಂದಿಸಿದ್ದಾರೆ.

ಕೋಷ್ಟಕ ಸಂಖ್ಯೆ ೪.೪.೧.

**ಪ್ರತಿಭಟನೆಗಳಲ್ಲಿ ಕ್ರೈಸ್ತರ ಪಾಲ್ಗೊಳ್ಳುವಿಕೆಯ ಪ್ರಮಾಣ**

| ಕ್ರ. ಸಂಖ್ಯೆ | ಕ್ರೈಸ್ತ ಗುಂಪುಗಳು | ಪ್ರತಿಭಟನೆಗಳಲಿ ಪಾಲುಗೊಂಡವರು | ಶೇಕಡಾವಾರು |
|---|---|---|---|
| ೧ | ಕೊಂಕಣಿ ಕ್ರೈಸ್ತ (೫೦) | ೦೮ | ೧೬.೦೦% |
| ೨ | ಪ್ರೊಟೆಸ್ಟಾಂಟ ಕ್ರೈಸ್ತ (೦೮) | ೦೨ | ೨೫.೦೦% |
| ೩ | ಮಲಯಾಳಿ ಕ್ರೈಸ್ತ (೧೮) | ೦೬ | ೩೩.೦೦% |
| ೪ | ಒಟ್ಟು (೭೬) | ೧೬ | ೨೧.೦೫% |

* ಮೂಲ: ಸಂಶೋಧಕನ ಕ್ಷೇತ್ರಕಾರ್ಯಾಧಾರಿತ ಮಾಹಿತಿ.

ಕ್ರೈಸ್ತ ಸಮುದಾಯಕ್ಕೆ ಸೇರಿದ ಯಾವುದೇ ಪಂಗಡಗಳ ಪ್ರತಿಭಟನೆಗಳಲ್ಲಿ ಭಾಗವಹಿಸುವಿಕೆಯ ಪ್ರಮಾಣ ಬಹಳಷ್ಟು ಕಡಿಮೆ ಮಟ್ಟದಲ್ಲಿ ಕಂಡು ಬರುತ್ತದೆ. ಜಿಲ್ಲೆಯಲ್ಲಿ ಕಳೆದ ವರುಷ ನಡೆದ ಚರ್ಚ್ ದಾಳಿ ವಿರುದ್ದದ ಪ್ರತಿಭಟನೆಗಳಲ್ಲಿ, ದಲಿತ ಕ್ರೈಸ್ತರ ಸವಲತ್ತುಗಳ ನಿರಾಕರಣೆಯ ವಿರುದ್ದ ನಡೆದ ಪ್ರತಿಭಟನಗಳಲ್ಲಿ ವಿಶೇಷ ಅರ್ಥಿಕ ವಲಯ ಸ್ಥಾಪನೆ ವಿರುದ್ಧದ ಸಂತ್ರಸ್ತರ ಪರ ಹೋರಾಟಗಳಲ್ಲಿ ಪರಿಸರ ಹೋರಾಟಗಳಲ್ಲಿ, ಇತ್ಯಾದಿಗಳಲ್ಲಿ ಭಾಗವಹಿಸಿದ ಉದಾಹರಣೆಗಳಿವೆ. ಆದರೆ, ಒಟ್ಟು ಕ್ರೈಸ್ತರ ಹೋರಾಟಗಳಲ್ಲಿ ಪಾಲ್ಗೊಳ್ಳುವಿಕೆಯ ಪ್ರಮಾಣ ಕಡಿಮೆಯೆಂದರೆ ತಪ್ಪಾಗಲಾರದು. ಇದು ಇಲ್ಲಿನ ಕ್ರೈಸ್ತ ಸಮುದಾಯದ ಸೌಮ್ಯ ಸ್ವಭಾವದ ಪ್ರತೀಕವಾಗಿದೆ.

**೪.೫. ರಾಜಕೀಯ ಮತ್ತು ಮತ ಚಲಾವಣೆ**

ಯಾವುದೇ ಸಮುದಾಯವು ರಾಜಕೀಯದಲ್ಲಿ ಸಕ್ರಿಯವಾಗಿ ಭಾಗವಹಿಸಲು ರಾಜಕೀಯ ಮಾಹಿತಿ/ತಿಳುವಳಿಕೆ ಅತ್ಯಗತ್ಯ. ಈ ದಿಸೆಯಲ್ಲಿ ಅವರ ರಾಜಕೀಯ ಮಾಹಿತಿಯ ಮೂಲವನ್ನು ಶೋಧಿಸಲಾಯಿತು. ವರ್ತಮಾನ ಪತ್ರಿಕೆಗಳು ಮತ್ತು ಇಲೆಕ್ಟ್ರಾನಿಕ್ ಮಾಧ್ಯಮಗಳು ಮುಖ್ಯವಾಗಿ ಇಲ್ಲಿನ ಕ್ರೈಸ್ತ ಸಮುದಾಯದ ಮಂದಿಗೆ ರಾಜಕೀಯ ಮಾಹಿತಿಗಳನ್ನು ಒದಗಿಸುವ

ಮೂಲವೆಂಬುದಾಗಿ ತಿಳಿಯಲಾಗಿದೆ. ಇಲ್ಲಿನ ಕ್ರೈಸ್ತ ಸಮುದಾಯದ ರಾಜಕೀಯ ಮಾಹಿತಿ ಮೂಲಗಳ ಬಗ್ಗೆ ಕೆಳಗೆ ತೋರಿಸಿರುವ ಕೋಷ್ಠಕದ ಮೂಲಕ ವಿಶ್ಲೇಷಿಸಬಹುದಾಗಿದೆ.

ಕೋಷ್ಠಕ ಸಂಖ್ಯೆ: ೪.೫.೧. **ಕ್ರೈಸ್ತರ ರಾಜಕೀಯ ಮಾಹಿತಿ ಮೂಲಗಳು**

| ಕ್ರ. ಸಂಖ್ಯೆ | ಮಾಹಿತಿ ಮೂಲಗಳು | ಬಳಸುವವರ ಸಂಖ್ಯೆ | ಶೇಕಡಾವಾರು ಪ್ರಮಾಣ |
|---|---|---|---|
| ೧ | ಟಿ. ವಿ. ಮತ್ತು ಪತ್ರಿಕೆಗಳಿಂದ | ೫೯ | ೭೭.೬೩% |
| ೨ | ಗೆಳೆಯರ ಸಂಪರ್ಕದಿಂದ | ೧೧ | ೧೪.೪೭% |
| ೩ | ಪಕ್ಷಗಳಿಂದ/ಸಂಘಟನೆಗಳಿಂದ | ೦೬ | ೭.೮೯% |
| ೪ | ಒಟ್ಟು | ೭೬ | ೧೦೦.೦೦% |

* ಮೂಲ: ಸಂಶೋಧಕನ ಕ್ಷೇತ್ರಕಾರ್ಯಾಧಾರಿತ ಮಾಹಿತಿ

ಮೇಲಿನ ಕೋಷ್ಠಕದಿಂದ ಈ ಜಿಲ್ಲೆಯಲ್ಲಿ ಪತ್ರಿಕೆ ಹಾಗೂ ಎಲೆಕ್ಟ್ರಾನಿಕ್ ಮಾಧ್ಯಮಗಳು ರಾಜಕೀಯ ಮಾಹಿತಿಗಳನ್ನು ಜನರಿಗೆ ತಲುಪಿಸುವಲ್ಲಿ ಬಹಳಷ್ಟು ಪ್ರಾಮುಖ್ಯ ಪಾತ್ರವಹಿಸುತ್ತದೆಂದು ಸುಸ್ಪಷ್ಟವಾಗುತ್ತದೆ.

ಇನ್ನು ಸಾರ್ವತ್ರಿಕ ಚುನಾವಣೆಗಳಲ್ಲಿ ಮತಚಲಾವಣೆಯ ಪ್ರಮಾಣಕ್ಕೆ ಸಂಬಂಧಿಸಿದಂತೆ ಜಿಲ್ಲೆಯ ಕ್ರೈಸ್ತ ಸಮುದಾಯದ ಪಾಲುಗೊಳ್ಳುವಿಕೆ ಬಗ್ಗೆಯೂ ಮಾಹಿತಿ ಸಂಗ್ರಹಿಸಲಾಯಿತು. ಇತ್ತೀಚೆಗಿನ ಲೋಕಸಭಾ, ವಿಧಾನಸಭಾ ಹಾಗೂ ಸ್ಥಳೀಯ ಸರಕಾರಗಳಿಗೆ ನಡೆದಂತಹ ಚುನಾವಣೆಗಳಲ್ಲಿ ಮತ ಚಲಾವಣೆಯ ಕುರಿತು ಮಾಹಿತಿ ಸಂಗ್ರಹಿಸಲಾಯಿತು. ಈ ಕೆಳಗೆ ಕೊಟ್ಟಿರುವ ಕೋಷ್ಟಕಗಳ ನೆರವಿನಿಂದ ವಿವಿಧ ಕ್ರೈಸ್ತ ಪಂಗಡಗಳು ಚುನಾವಣೆಗಳಲ್ಲಿ ಮತ ಚಲಾಯಿಸಿದುದರ ಕುರಿತು ವಿವರಣೆ ನೀಡಬಹುದಾಗಿದೆ.

ಕೋಷ್ಟಕ ಸಂಖ್ಯೆ ೪:೫.೨.

**೨೦೦೯ರ ಲೋಕಸಭಾ ಚುನಾವಣೆಯಲ್ಲಿ ಜಿಲ್ಲೆಯ ವಿವಿಧ ಕ್ರೈಸ್ತ ಗುಂಪುಗಳ ಮತದಾನದ ಪ್ರಮಾಣ**

| ಕ್ರ. ಸಂಖ್ಯೆ | ಕ್ರೈಸ್ತ ಪಂಗಡಗಳು | ಚುನಾವಣೆಯಾದ ಮತಗಳ ಸಂಖ್ಯೆ | ಶೇಕಡಾವಾರು ಪ್ರಮಾಣ |
|---|---|---|---|
| ೧ | ಕೊಂಕಣಿ ಕ್ರೈಸ್ತರು (೫೦) | ೪೨ | ೮೪.೦೦% |
| ೨ | ಪ್ರೊಟೆಸ್ಟೆಂಟ್ ಕ್ರೈಸ್ತ (೦೮) | ೦೮ | ೧೦೦.೦೦% |
| ೩ | ಮಲಯಾಳಿ ಕ್ರೈಸ್ತ (೧೮) | ೧೬ | ೮೮.೮೮% |
| ೪ | ಒಟ್ಟು (೭೬) | ೬೬ | ೮೬.೮೪% |

* ಮೂಲ: ಸಂಶೋಧಕನ ಕ್ಷೇತ್ರ ಕಾರ್ಯಾಧಾರಿತ ಮಾಹಿತಿ.

ಕಳೆದ ಲೋಕಸಭಾ ಚುನಾವಣೆಗಳಲ್ಲಿ ಮಂಗಳೂರು ಲೋಕಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಕ್ರೈಸ್ತರ ಮತ ಚಲಾವಣೆಯ ಪ್ರಮಾಣ ಶೇಕಡ ೮೬.೮೮ ರಷ್ಟಿದೆಯೆಂದು ತಿಳಿದು ಬರುತ್ತದೆ. ಮಂಗಳೂರು ಲೋಕಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ೨೦೦೯ರ ಲೋಕಸಭೆಗೆ ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ ಶೇಕಡಾವಾರು ಚಲಾಯಿಸಲ್ಪಟ್ಟ ಮತಗಳ ಪ್ರಮಾಣ ೭೪.೪೪% ರಷ್ಟಿದೆ. ೨೦೦೯ರಲ್ಲಿ ದಕ್ಷಿಣ ಕನ್ನಡ ಲೋಕಸಭಾ ಕ್ಷೇತ್ರಕ್ಕೆ ನಡೆದ ಸರ್ವತ್ರಿಕ ಚುನಾವಣೆಗಳಲ್ಲಿ ಕ್ರೈಸ್ತರ ಮತದಾನದ ಪ್ರಮಾಣ ಈ ಕ್ಷೇತ್ರದ ಸರಾಸರಿ ಮತದಾನದ ಪ್ರಮಾಣಕ್ಕಿಂತ ಅಧಿಕವಿದೆ.

ಕೋಷ್ಠಕ ಸಂಖ್ಯೆ: ೪.೫.೩.

೨೦೦೮ ರ ವಿಧಾನಸಭಾ ಚುನಾವಣೆಗಳಲ್ಲಿ ಜಿಲ್ಲೆಯ ವಿವಿಧ ಕ್ರೈಸ್ತ ಗುಂಪುಗಳ ಮತದಾನದ ಪ್ರಮಾಣ

| ಕ್ರ. ಸಂಖ್ಯೆ | ಕ್ರೈಸ್ತ ಪಂಗಡಗಳು | ಚಲಾಯಿಸಲಾದ ಮತಗಳ ಸಂಖ್ಯೆ | ಶೇಕಡಾವಾರು ಪ್ರಮಾಣ |
|---|---|---|---|
| ೧ | ಕೊಂಕಣಿ ಕ್ರೈಸ್ತರು (೫೦ | ೪೩ | ೮೬.೦೦% |
| ೨ | ಪ್ರೊಟೆಸ್ಟಾಂಟ ಕ್ರೈಸ್ತರು (೦೮) | ೦೮ | ೧೦೦.೦೦% |
| ೩ | ಮಲಯಾಳಿ ಕ್ರೈಸ್ತರು (೧೮) | ೧೬ | ೮೮.೦೦% |
| ೪ | ಒಟ್ಟು (೭೬) | ೬೭ | ೮೮.೧೫% |

* ಮೂಲ: ಸಂಶೋಧಕನ ಕ್ಷೇತ್ರ ಕಾರ್ಯಾಧಾರಿತ ಮಾಹಿತಿ.

೨೦೦೮ ರ ವಿಧಾನ ಸಭಾ ಚುನಾವಣೆಗಳಲ್ಲೂ ಕ್ರೈಸ್ತರ ಮತ ಚಲಾವಣೆಯ ಪ್ರಮಾಣ ಉನ್ನತ ಮಟ್ಟದಲ್ಲಿತ್ತೆಂಬುದು ಮೇಲಿನ ಕೋಷ್ಠಕದಿಂದ ಸ್ಪಷ್ಟವಾಗುತ್ತದೆ. ವಿವಿಧ ಕ್ರೈಸ್ತ ಗುಂಪುಗಳಿಗೆ ಸೇರಿದ ಮತದಾರರು ಜಿಲ್ಲೆಯಲ್ಲಿ ಈ ವಿಧಾನಸಭಾ ಚುನಾವಣೆಯಲ್ಲಿ ದೊಡ್ಡ ಪ್ರಮಾಣದಲ್ಲಿ ಮತದಾನ ಮಾಡಿರುವುದು ಈ ಕೋಷ್ಠಕದ ಮೂಲಕ ಕಂಡು ಕೊಳ್ಳಬಹುದಾಗಿದೆ.

ಕೋಷ್ಟಕ ಸಂಖ್ಯೆ ೪.೫.೪.

**ಸ್ಥಳೀಯ ಸರಕಾರಗಳಿಗೆ ಜರುಗಿದ ಚುನಾವಣೆಗಳಲ್ಲಿ ಜಿಲ್ಲೆಯ ವಿವಿಧ ಕ್ರೈಸ್ತ ಗುಂಪುಗಳ ಮತದಾನದ ಪ್ರಮಾಣ**

| ಕ್ರ. ಸಂಖ್ಯೆ | ಕ್ರೈಸ್ತ ಪಂಗಡಗಳು | ಮತದಾನ ಮಾಡಿದವರ ಸಂಖ್ಯೆ | ಶೇಕಡಾವಾರು ಮತದಾನದ ಪ್ರಮಾಣ |
|---|---|---|---|
| ೧ | ಕೊಂಕಣಿ ಕ್ರೈಸ್ತರು (೫೦) | ೩೪ | ೬೮.೦೦% |
| ೨ | ಪ್ರೊಟೆಸ್ಟಾಂಟ ಕ್ರೈಸ್ತರು (೦೮) | ೦೭ | ೮೭.೫% |
| ೩ | ಮಲಯಾಳಿ ಕ್ರೈಸ್ತರು (೧೮) | ೧೧ | ೬೧.೧೧% |
| ೪ | ಒಟ್ಟು (೭೬) | ೫೨ | ೬೮.೪೨% |

- ಮೂಲ: ಸಂಶೋಧಕನ ಕ್ಷೇತ್ರ ಕಾರ್ಯಾಧಾರಿತ ಮಾಹಿತಿ

ಮೇಲೆ ಕೊಟ್ಟಿರುವ ಕೋಷ್ಟಕದ ಸಹಾಯದಿಂದ ದಕ್ಷಿಣ ಕನ್ನಡ ಕಂದಾಯ ಜಿಲ್ಲೆಯ ವ್ಯಾಪ್ತಿಯಲ್ಲಿ ಸ್ಥಳೀಯ ಸರಕಾರದ ವಿವಿಧ ಸ್ಥರಗಳಿಗೆ ೨೦೦೫ ಮತ್ತು ೨೦೦೭ ರ ಚುನಾವಣೆಗಳಲ್ಲಿ ಇಲ್ಲಿನ ಕ್ರೈಸ್ತ ಸಮುದಾಯದ ವಿವಿಧ ಗುಂಪುಗಳ ಮತದಾನದ ಪ್ರಮಾಣದ ಬಗ್ಗೆ ಮಾಹಿತಿ ನೀಡುತ್ತದೆ. ಕ್ರೈಸ್ತರ ಲೋಕಸಭೆ ಮತ್ತು ವಿಧಾನ ಸಭೆಗಳಲ್ಲಿನ ಮತದಾನದ ಪ್ರಮಾಣಕ್ಕೆ ತುಲನೆ ಮಾಡಿದಾಗ ಜಿಲ್ಲೆಯಲ್ಲಿ ಕ್ರೈಸ್ತರ ಸ್ಥಳೀಯ ಸರಕಾರಗಳಿಗೆ ನಡೆದ ಚುನಾವಣೆಗಳಲ್ಲಿ ಮತದಾನದ ಪ್ರಮಾಣ (೬೮.೪೨%) ಬಹಳಷ್ಟು ಕಡಿಮೆಯಿರುವುದು ಕಂಡು ಬರುತ್ತದೆ. ಇಲ್ಲಿನ ಕ್ರೈಸ್ತ ಸಮುದಾಯಕ್ಕೆ ಸ್ಥಳೀಯ ಸರಕಾರಗಳಲ್ಲಿ ಪಾಲ್ಗೊಳ್ಳುವ ಆಸಕ್ತಿ ಕಡಿಮೆ ಇದೆಯೆಂಬುದಾಗಿ ಕಂಡು ಬರುತ್ತದೆ. ವಿಶೇಷವೇನೆಂದರೆ, ಕ್ರೈಸ್ತ ಸಮುದಾಯದ ಮೂರು ಮುಖ್ಯ ಪಂಗಡಗಳ ಮತದಾನದ ಪ್ರಮಾಣದಲ್ಲೂ ಕಡಿಮೆ ಮಟ್ಟಕ್ಕಿಳಿದಿರುವುದು ಕಂಡು ಬರುತ್ತದೆ. ಸ್ಥಳೀಯ ಸರಕಾರಗಳಲ್ಲಿ ಸಕ್ರಿಯವಾಗಿ ಪಾಲುಗೊಳ್ಳುವಿಕೆಯು ಯಾವುದೇ ಸಮುದಾಯ/ಸಮಾಜದ ರಾಜಕೀಯ ಬದುಕು, ಭಾಗವಹಿಸುವಿಕೆಗಳ ತರಬೇತಿ ಶಾಲೆಯಿದ್ದಂತೆ

ಮಾತ್ರವಲ್ಲದೆ ಆ ಸಮುದಾಯಕ್ಕೆ ರಾಜಕೀಯ ಕ್ಷೇತ್ರದಲ್ಲಿ ಒಂದು ಭದ್ರ ಅಡಿಪಾಯವನ್ನೂ ಒದಗಿಸುತ್ತದೆ.

ಇತ್ತೀಚೆಗಿನ ಚುನಾವಣೆಗಳಲ್ಲಿ ಕ್ರೈಸ್ತ ಸಮುದಾಯದ ಮತದಾನದ ಪ್ರಮಾಣದಲ್ಲಿ ಏರಿಕೆಯ ಪ್ರವೃತ್ತಿಯನ್ನು ಸ್ಪಷ್ಟವಾಗಿ ಕಂಡುಕೊಳ್ಳಬಹುದಾಗಿದೆ. ಆದರೆ ಸ್ಥಳೀಯ ಚುನಾವಣೆಗಳಲ್ಲಿ ಮತದಾನದ ಪ್ರಮಾಣ ಸ್ವಲ್ಪ ಕಡಿಮೆಯಿದೆ. ಅಪರೂಪಕ್ಕೆ ಕೆಲವೆಡೆ ಕ್ರೈಸ್ತ ಸಮುದಾಯಕ್ಕೆ ಸೇರಿದ ಮತದಾರರ ಹೆಸರು ಮತದಾರರ ಪಟ್ಟಿಯಲ್ಲಿ ಸೇರ್ಪಡೆಗೊಂಡಿಲ್ಲ ಎಂಬ ಮಾಹಿತಿಗಳು ಕಂಡು ಬರುತ್ತದೆ. ಮತ ಚಲಾಯಿಸುವುದಕ್ಕೆ ಆಸಕ್ತಿಯಿಲ್ಲದವರ ಪ್ರಮಾಣ ಬಹಳಷ್ಟು ಕಡಿಮೆಯಿದೆಯೆಂದು ಕಂಡು ಬರುತ್ತದೆ.

ಚುನಾವಣೆಗಳಲ್ಲಿ ಯಾವ ಅಭ್ಯರ್ಥಿಗೆ ಮತ ಚಲಾಯಿಸಬೇಕೆಂಬ ಕ್ರೈಸ್ತರ ನಿರ್ಧಾರವು ಅನೇಕ ಅಂಶಗಳ ಮೇಲೆ ಆಧರಿಸಿವೆ. ಈ ಕೆಳಗೆ ನಮೂದಿಸಲಾದ ಕೋಷ್ಟಕದ ನೆರವಿನಿಂದ ವಿಶ್ಲೇಷಿಸಬಹುದಾಗಿದೆ.

ಕೋಷ್ಟಕ ಸಂಖ್ಯೆ: ೪.೫.೫.

**ಕ್ರೈಸ್ತರ ಮತ ಚಲಾವಣೆಗೆ ಆಧಾರಿತ ಅಂಶಗಳು**

| ಕ್ರ. ಸಂಖ್ಯೆ | ಮತಚಲಾವಣೆಗೆ ಆಧಾರ ಅಂಶಗಳು | ಬಿದ್ದ ಮತಗಳ ಸಂಖ್ಯೆ | ಶೇಕಡಾವಾರು ಪ್ರಮಾಣ |
|---|---|---|---|
| ೧ | ಅಭ್ಯರ್ಥಿಯ ಪಕ್ಷ | ೨೩ | ೩೦.೨೬% |
| ೨ | ಅಭ್ಯರ್ಥಿಯ ವ್ಯಕ್ತಿತ್ವ | ೪೪ | ೫೭.೮೯% |
| ೩ | ಜಾತಿ/ಧರ್ಮ | ೦೧ | ೧.೩೧% |
| ೪ | ಅವನ ಶಿಕ್ಷಣ ಮಟ್ಟ | ೦೫ | ೬.೫೭% |
| ೫ | ಶ್ರೀಮಂತಿಕೆ/ಹಣ | ೦೦ | 0.00% |
| ೬ | ಇತರೆ ಅಂಶಗಳು | ೦೩ | ೩.೯೪% |
| ೭ | ಒಟ್ಟು | ೭೬ | ೧೦೦.೦೦% |

* ಮೂಲ: ಸಂಶೋಧಕನ ಕ್ಷೇತ್ರ ಕಾರ್ಯಾಧಾರಿತ ಮಾಹಿತಿ.

ಸಾರ್ವತ್ರಿಕ ಚುನಾವಣೆಗಳಲ್ಲಿ ಯಾವ ಅಭ್ಯರ್ಥಿಗೆ ಮತ ಚಲಾಯಿಸಬೇಕೆಂಬ ಕ್ರೈಸ್ತರ ನಿರ್ಧಾರವು ಅಭ್ಯರ್ಥಿಯ ಪಕ್ಷ, ಅವನ ವ್ಯಕ್ತಿತ್ವ ಮತ್ತು ಕಾರ್ಯಕ್ಷಮತೆ, ಶಿಕ್ಷಣ ಮಟ್ಟಗಳನ್ನು ಆಧರಿಸಲಾಗಿದೆ. ಈ ಎಲ್ಲಾ ಅಂಶಗಳ ಪೈಕಿ ಅಭ್ಯರ್ಥಿಯ ವ್ಯಕ್ತಿತ್ವ ಹಾಗೂ ಅವನ ಕಾರ್ಯ ಕ್ಷಮತೆಗೆ ಹೆಚ್ಚಿನ ಪ್ರಾಮುಖ್ಯತೆ ಕೊಟ್ಟಿರುವುದು ಸ್ಪಷ್ಟವಾಗಿದೆ. ಈ ನಿಟ್ಟಿನಲ್ಲಿ ಅಭ್ಯರ್ಥಿಯ ಪಕ್ಷ ಇನ್ನೊಂದು ಮುಖ್ಯ ಅಂಶವೆನಿಸಿದೆ.

**೪.೬. ಪಕ್ಷಾರ್ಹತೆ ಮತ್ತು ಗೆಲುವುಗಳ ಮೌಲ್ಯ ಮಾಪನ**

ಯಾವ ಪ್ರಮುಖ ಅಂಶಗಳು ಕ್ರೈಸ್ತರು ಒಂದು ರಾಜಕೀಯ ಪಕ್ಷವನ್ನು ಬೆಂಬಲಿಸುವಲ್ಲಿ ನಿರ್ಧಾರಕವೆನಿಸುತ್ತದೆ ಅಥವಾ ಕ್ರೈಸ್ತರ ಒಲವು ಯಾವ ರಾಜಕೀಯ ಪಕ್ಷದ ಕಡೆಗೆ ಮತ್ತು ಆ ಪಕ್ಷವನ್ನು ಯಾವ ಮುಖ್ಯ ಕಾರಣಗಳಿಗೋಸ್ಕರ ಬೆಂಬಲಿಸುವರು ಮತ್ತು ಕ್ರೈಸ್ತರ ಅನಿಸಿಕೆಯ ಪ್ರಕಾರ ತಮ್ಮ ಕ್ಷೇತ್ರದ ಅಭ್ಯರ್ಥಿಯ ಗೆಲುವಿಗೆ ಕಾರಣೀಭೂತ ಅಂಶಗಳಾವುವು ಎಂಬ ವಿಚಾರಗಳ ಕುರಿತು ಮೌಲ್ಯ ಮಾಪನ ಮಾಡಲಾಗಿದೆ.

ಆರಂಭದಲ್ಲಿ ಕ್ರೈಸ್ತರು ಯಾವ ಆಧಾರದಲ್ಲಿ ಒಂದು ಪಕ್ಷವನ್ನು ಉತ್ತಮ ಅಥವಾ, ಸ್ವೀಕಾರಾರ್ಹ ಪಕ್ಷವೆಂದು ನಿರ್ಧರಿಸುವರೆಂಬುವುದನ್ನು ಈ ಕೆಳಗೆ ನಮೂದಿಸಿರುವ ಕೋಷ್ಠಕದ ನೆರವಿನ ಮೂಲಕ ವಿಶ್ಲೇಷಿಸಬಹುದಾಗಿದೆ.

ಕೋಷ್ಠಕ ಸಂಖ್ಯೆ ೪.೬.೧. **ಕ್ರೈಸ್ತರ ಪ್ರಕಾರ ಪಕ್ಷದ ಸ್ವೀಕಾರಾರ್ಹತೆಗಳು**

| ಕ್ರ. ಸಂಖ್ಯೆ | ಸ್ವೀಕಾರಾರ್ಹ ಅಂಶಗಳು | ಮಾಪಿತ ಮೌಲ್ಯ | ಶೇಕಡಾವಾರು ಮೌಲ್ಯ |
|---|---|---|---|
| ೧ | ಪಕ್ಷದ ನಾಯಕತ್ವ | ೧೫ | ೧೯.೭೩% |
| ೨ | ಅಲ್ಪ ಸಂಖ್ಯಾತರ ಕುರಿತು ಪಕ್ಷದ ನಿಲುವು | ೩೩ | ೪೩.೪೨% |
| ೩ | ಪಕ್ಷದ ಸಾಧನೆ ಮತ್ತು ಇತಿಹಾಸ | ೧೪ | ೧೮.೪೨% |
| ೪ | ಆರ್ಥಿಕ ಧೋರಣೆಗಳು | ೦೯ | ೧೧.೮೪% |
| ೫ | ಇತರೇ ಅಂಶಗಳು | ೦೫ | ೬.೫೭% |
| ೬ | ಒಟ್ಟು | ೭೬ | ೧೦೦.೦೦% |

* ಮೂಲ: ಸಂಶೋಧಕನ ಕ್ಷೇತ್ರ ಕಾರ್ಯಾಧರಿತ ಮಾಹಿತಿ.

ಕ್ರೈಸ್ತರು ಒಂದು ಅಲ್ಪ ಸಂಖ್ಯಾತ ವರ್ಗಕ್ಕೆ ಸೇರಿದವರಿದ್ದು ಅವರ ಹಿತ ರಕ್ಷಣೆಗೆ ಬದ್ಧವಾದ ನಿಲುವನ್ನು ವ್ಯಕ್ತ ಪಡಿಸುವ ಪಕ್ಷವು ಅವರಿಗೆ ಸ್ವೀಕಾರಾರ್ಹ ಪಕ್ಷವೆನಿಸುತ್ತದೆಯೆಂಬುವುದು ಈ ಕೋಷ್ಠಕದ ಮೂಲಕ ವ್ಯಕ್ತಗೊಂಡಿದೆ.

ಇನ್ನು ಕ್ರೈಸ್ತರ ಒಲವು ಯಾವ ರಾಜಕೀಯ ಪಕ್ಷದೆಡೆಗೆ ಎಂಬ ಪ್ರಶ್ನೆಗೆ ಬಹು ನಿರೀಕ್ಷಿತ ಉತ್ತರ ಲಭ್ಯವಾಗಿದೆ. ಇದಕ್ಕೆ ಅಭಿವ್ಯಕ್ತಗೊಂಡ ಉತ್ತರ ಈ ಕೆಳಗಿನ ಕೋಷ್ಠಕವು ತಿಳಿಸುತ್ತದೆ.

ಕೋಷ್ಠಕ ಸಂಖ್ಯೆ: ೪.೬.೨.

**ಸಾಮಾನ್ಯವಾಗಿ ಕ್ರೈಸ್ತರು ಬೆಂಬಲಿಸುವ ಪಕ್ಷ**

| ಕ್ರ. ಸಂಖ್ಯೆ | ಪಕ್ಷಗಳು | ವ್ಯಕ್ತವಾದ ಬೆಂಬಲ | ಬೆಂಬಲದ ಶೇಕಡಾವಾರು |
|---|---|---|---|
| ೧ | ಭಾರತೀಯ ಉಷ್ಟ್ರೀಯ ಕಾಂಗ್ರೆಸ್ | ೫೯ | ೭೭.೬೩% |
| ೨ | ಭಾರತೀಯ ಜನತಾ ಪಕ್ಷ | ೦೪ | ೫.೨೬% |
| ೩ | ಜಾತ್ಯಾತೀತ ಜನತಾ ದಳ | ೦೮ | ೧೦.೫೩% |
| ೪ | ಕಮ್ಯುನಿಷ್ಟ್ ಪಕ್ಷಗಳು | ೦೫ | ೬.೫೮% |
| ೫ | ಒಟ್ಟು | ೭೬ | ೧೦೦.೦೦% |

* ಮೂಲ: ಸಂಶೋಧಕನ ಕ್ಷೇತ್ರ ಕಾರ್ಯಾಧರಿತ ಮಾಹಿತಿ.

ಶೇಕಡಾ ೭೭.೬೩ ರಷ್ಟು (೫೯/೭೬) ಮಂದಿ ಜಿಲ್ಲೆಯ ಕ್ರೈಸ್ತರು ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ಸಿಗೆ ತಮ್ಮ ಬೆಂಬಲ ಅಥವಾ ಒಲವನ್ನು ತೋರುತ್ತಿದೆಯೆಂಬುವುದು ಈ ಕೋಷ್ಠಕದಿಂದ ಅಭಿವ್ಯಕ್ತಗೊಂಡಿದೆ. ಇನ್ನು ಆ ಪಕ್ಷವನ್ನು ಬೆಂಬಲಿಸಲು ಇರುವ ಮುಖ್ಯ ಕಾರಣಗಳು ಈ ಕೆಳಗಿನ ಕೋಷ್ಠಕದಿಂದ ತಿಳಿದುಕೊಳ್ಳಬಹುದಾಗಿದೆ.

ಕೋಷ್ಠಕ ಸಂಖ್ಯೆ: ೪.೬.೩.

ಕಾಂಗ್ರೆಸ್ಸಿಗೆ ಕ್ರೈಸ್ತರು ಒಲವು ತೋರಿಸಲು ಪೂರಕ ಅಂಶಗಳು

| ಕ್ರ. ಸಂಖ್ಯೆ | ಒಲವಿಗೆ ಕಾರಣಗಳು | ಒಲವಿನ ಪ್ರಮಾಣ | ಒಲವು ಶೇಕಡಾವಾರು |
|---|---|---|---|
| ೧ | ಉತ್ತಮ ನಾಯಕತ್ವ | ೨೭ | ೩೫.೫೨% |
| ೨ | ಜಾತ್ಯಾತೀತ ಪಕ್ಷ | ೪೨ | ೫೫.೨೬% |
| ೩ | ಸಾಂಪ್ರದಾಯಿಕ ಕಾರಣಗಳು | ೦೩ | ೩.೯೪% |
| ೪ | ಇತರೇ ಕಾರಣಗಳು | ೦೪ | ೫.೨೬% |
| ೫ | ಒಟ್ಟು | ೭೬ | ೧೦೦.೦೦% |

* ಮೂಲ: ಸಂಶೋಧಕನ ಕ್ಷೇತ್ರ ಕಾರ್ಯಾಧಾರಿತ ಮಾಹಿತಿ.

ಜಾತ್ಯಾತೀತ ರಾಷ್ಟ್ರೀಯ ಪಕ್ಷವೆಂಬ ಕಾರಣಕ್ಕಾಗಿ ಕ್ರೈಸ್ತ ಸಮುದಾಯಗಳು ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ಸಿನ ಕಡೆಗೆ ತಮ್ಮ ಒಲವನ್ನು ಬೀರುವುದಕ್ಕೆ ಮುಖ್ಯ ಕಾರಣವೆಂದು ಮೇಲ್ಕಾಣಿಸಿದ ಪಟ್ಟಿ (ಕೋಷ್ಠಕ)ಯ ವಿಶ್ಲೇಷಣೆಯಿಂದ ತಿಳಿದು ಬರುತ್ತದೆ.

ಇನ್ನು ತಮ್ಮ ಕ್ಷೇತ್ರದ ಅಭ್ಯರ್ಥಿಯ ಗೆಲುವಿಗೆ ಯಾವುದೆಲ್ಲಾ ಅಂಶಗಳು ಪ್ರಧಾನ ಪಾತ್ರವಹಿಸಿವೆಯೆಂಬ ಸವಾಲಿಗೆ ಉತ್ತರವನ್ನು ಈ ಕೆಳಗೆ ನಮೂದಿಸಿರುವ ಕೋಷ್ಠಕದ ನೆರವಿನಿಂದ ಅರ್ಥೈಸಿಕೊಳ್ಳಬಹುದಾಗಿದೆ.

ಕೋಷ್ಠಕ ಸಂಖ್ಯೆ ೪:೬.೪. **ಅಭ್ಯರ್ಥಿಗಳ ಗೆಲುವಿಗೆ ಕಾರಣವಾದ ಪ್ರಧಾನ ಅಂಶಗಳು**

| ಕ್ರ. ಸಂಖ್ಯೆ | ಗೆಲುವಿಗೆ ಕಾರಣವಾದ ಅಂಶಗಳು | ಅಂಕಿತ ಮೌಲ್ಯ | ಶೇಕಡಾವಾರು ಮೌಲ್ಯ |
|---|---|---|---|
| ೧ | ಅಭ್ಯರ್ಥಿಯ ಧರ್ಮ/ ಜಾತಿ | ೧೯ | ೨೫.೦೦% |
| ೨ | ವ್ಯಕ್ತಿತ್ವ/ಕಾರ್ಯಕ್ಷಮತೆ | ೧೮ | ೨೩.೬೮% |
| ೩ | ಅವನ ಪಕ್ಷದ ಜನಪ್ರಿಯತೆ | ೩೫ | ೪೬.೦೫% |
| ೪ | ಅವನ ಹಣ/ಶ್ರೀಮಂತಿಕೆ | ೦೩ | ೩.೯೪% |
| ೫ | ಇತರೇ ಅಂಶಗಳು | ೦೧ | ೧.೩೧% |
| ೬ | ಒಟ್ಟು | ೭೬ | ೧೦೦.೦೦% |

* ಮೂಲ: ಸಂಶೋಧಕನ ಕ್ಷೇತ್ರ–ಕಾರ್ಯಾಧಾರಿತ ಮಾಹಿತಿ.

ಪ್ರಸ್ತುತ ಅಧ್ಯಾಯನದಲ್ಲಿ ಪ್ರಶ್ನಾವಳಿಗುತ್ತರಿಸಿದವರಲ್ಲಿ ಮೂವತ್ತೈದು ಮಂದಿ ಅಂದರೆ ೪೬.೦೫% ರಷ್ಟು ಮಂದಿ ತಮ್ಮ ಕ್ಷೇತ್ರದ ಅಭ್ಯರ್ಥಿಯ ಗೆಲುವಿಗೆ ಅವನ ಪಕ್ಷದ ಜನಪ್ರಿಯತೆಯೇ ಮುಖ್ಯ ಕಾರಣವೆಂದು ಮೌಲ್ಯವನ್ನು ಮಾಪಿಸಿದ್ದಾರೆ. ಧರ್ಮ, ಜಾತಿ ವ್ಯಕ್ತಿತ್ವಗಳೆಲ್ಲ ನಂತರದ ಸ್ಥಾನವನ್ನು ಪಡೆದಂತೆ ಕಂಡು ಬರುತ್ತದೆ.

**೪.೭. ಕ್ರೈಸ್ತ ಪೌರರುಗಳ ವರ್ಗೀಕರಣ ಹಾಗೂ ರಾಜಕೀಯ ಭಾಗವಹಿಸುವಿಕೆಯ ಮಹತ್ವ**

ಕ್ರೈಸ್ತರು ರಾಜಕೀಯವಾಗಿ ಸಾಂಪ್ರದಾಯಿಕ ಮನೋಭಾವ ಅಥವಾ ರಾಜಕೀಯ ಪರಿವರ್ತಕ (ರ್‍ಯಾಡಿಕಲ್ಸ್) ಗುಂಪಿಗೆ/ವರ್ಗಕ್ಕೆ ಸೇರುತ್ತಾರೋ ಎಂದು ತಿಳಿಯುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಈ ನಿಟ್ಟಿನಲ್ಲಿ ಪ್ರಶ್ನಾವಳಿಗುತ್ತರಿಸಿದವರ ಅಭಿಪ್ರಾಯ ಈ ಕೆಳಗಿನಂತಿವೆ.

ಕೋಷ್ಟಕ ಸಂಖ್ಯೆ: ೪.೭.೧.

**ಸೈದ್ಧಾಂತಿಕ ತಳಹದಿಯಲ್ಲಿ ಕ್ರೈಸ್ತ ಪೌರರುಗಳ ವರ್ಗೀಕರಣ**

| ಕ್ರ. ಸಂಖ್ಯೆ | ವರ್ಗಗಳು | ಅವರ ಸಂಖ್ಯೆ | ಶೇಕಡಾವಾರು |
|---|---|---|---|
| ೧ | ರಾಜಕೀಯವಾಗಿ ಸಾಂಪ್ರದಾಯಿಕ ಮನೋಭಾವದವರು | ೨೮ | ೩೬.೮೪% |
| ೨ | ರಾಜಕೀಯವಾಗಿ ಮೂಲಭೂತ ಪರಿವರ್ತಕರು | ೨೪ | ೩೧.೫೭% |
| ೩ | ಇವೆರಡರ ನಡುವೆ ಇರುವವರು | ೨೪ | ೩೧.೫೭% |
| ೪ | ರಾಜಕೀಯದಲ್ಲಿ ಪಾಲುಗೊಳ್ಳಲೇ ಬಾರದೆನ್ನುವ ಅಭಿಪ್ರಾಯದವರು | ೦೦ | ೦೦.೦೦% |
| ೫ | ಒಟ್ಟು | ೭೬ | ೧೦೦.೦೦% |

* ಮೂಲ: ಸಂಶೋಧಕನ ಕ್ಷೇತ್ರ ಕಾರ್ಯಾಧಾರಿತ ಮಾಹಿತಿ.

ಮೇಲೆ ಕಾಣಿಸಿದ ಕೋಷ್ಟಕದಿಂದ ತಿಳಿದುಬರುವುದೇನೆಂದರೆ ಕ್ರೈಸ್ತ ಪೌರರುಗಳಲ್ಲಿ ಶೇಕಡ ೩೬.೮೪ ರಷ್ಟು ಮಂದಿ ರಾಜಕೀಯವಾಗಿ ಸಾಂಪ್ರದಾಯಿಕ ಮನೋಭಾವದವರು, ಶೇಕಡ ೩೧.೫೭ ರಷ್ಟು ಜನ ರಾಜಕೀಯ ಪರವರ್ತನೆಗಳನ್ನು ಬಯಸುವವರು ಹಾಗೂ ಇಷ್ಟೇ ಸಂಖ್ಯೆಯ ಇನ್ನೊಂದು ವರ್ಗವು ಮೇಲಿನ ವರ್ಗಗಳಿಗಿಂತ ಭಿನ್ನವಾಗಿದ್ದು, ಸಾಂಪ್ರದಾಯಿಕ ಹಾಗೂ ಪರಿವರ್ತಕ ಇವೆರಡರ ಸಮ್ಮಿಶ್ರಿತ ವರ್ಗದವರು. ರಾಜಕೀಯದ ಪ್ರಕ್ರಿಯೆಗಳಲ್ಲಿ ಪಾಲುಗೊಳ್ಳಲೇ ಬಾರದೆನ್ನುವ ಮನೋಭಾವದವರು ಈ ಸಮುದಾಯದಲ್ಲಿ ಕಂಡು ಬರುವುದಿಲ್ಲ.

ಇನ್ನು ರಾಜಕೀಯ ಪಕ್ಷಾಧಾರಿತ ಚಟುವಟಿಕೆಗಳಲ್ಲಿ ಕ್ರೈಸ್ತ ಪೌರರುಗಳ ಸಕ್ರಿಯ ಪಾಲುಗೊಳ್ಳುವಿಕೆಯು ಈ ಕೆಳಗೆ ಕೊಟ್ಟಿರುವ ಕೋಷ್ಟಕದ ಮೂಲಕ ತಿಳಿದು ಕೊಳ್ಳಬಹುದಾಗಿದೆ.

ಕೋಷ್ಠಕ ಸಂಖ್ಯೆ ೪.೭.೨.

**ಕ್ರೈಸ್ತರು ರಾಜಕೀಯ ಪಕ್ಷಗಳಲ್ಲಿ ತೊಡಗಿಸಿಕೊಂಡ ಬಗೆ**

| ಕ್ರ. ಸಂಖ್ಯೆ | ಪಾಲುಗೊಳ್ಳುವಿಕೆ ರೀತಿ | ಪಾಲುಗೊಳ್ಳುವಿಕೆ ಪ್ರಮಾಣ | ಶೇಕಡಾವಾರು ಪ್ರಮಾಣ |
|---|---|---|---|
| ೧ | ಪಕ್ಷದ ಪದಾಧಿಕಾರಿಯಾಗಿ | ೦೨ | ೨.೬೩% |
| ೨ | ಪಕ್ಷದ ಸಕ್ರಿಯ ಸದಸ್ಯನಾಗಿ | ೦೨ | ೨.೬೩% |
| ೩ | ಚುನಾವಣಾ ಪ್ರಚಾರಗಳಲ್ಲಿ ಪಾಲ್ಗೊಳ್ಳುವಿಕೆ | ೦೯ | ೧೧.೮೪% |
| ೪ | ಮತದಾನದ ಮೂಲಕ | ೬೨ | ೮೧.೫೭% |
| ೫ | ಇತರೇ ರೀತಿಯಲ್ಲಿ | ೦೧ | ೧.೩೧% |
| ೬ | ಒಟ್ಟು | ೭೬ | ೧೦೦.೦೦% |

* ಮೂಲ: ಸಂಶೋಧಕನ ಕ್ಷೇತ್ರಕಾರ್ಯಾಧಾರಿತ ಮಾಹಿತಿ.

ಕ್ರೈಸ್ತ ಪೌರರುಗಳು ರಾಜಕೀಯ ಪಕ್ಷಗಳಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿರುವುದು ಕಂಡುಬರುವುದಿಲ್ಲ. ಪಕ್ಷದ ಸಕ್ರಿಯ ಕಾರ್ಯಕರ್ತರು ಸದಸ್ಯರಾಗಿ ತೊಡಗಿಸಿಕೊಂಡವರ ಪ್ರಮಾಣ ಬಹಳಷ್ಟು ಕಡಿಮೆಯಿದೆಯೆಂದು ಕಂಡು ಬರುತ್ತದೆ. ಹೆಚ್ಚಿನ ಕ್ರೈಸ್ತ ಪೌರರು ಕೇವಲ ಮತದಾನದ ಮೂಲಕವಷ್ಟೆ ರಾಜಕೀಯ ಪಕ್ಷಗಳನ್ನು ಬೆಂಬಲಿಸುವ ಬಗೆಯನ್ನು ಇಲ್ಲಿ ಗಮನಿಸ ಬಹುದಾಗಿದೆ. ಇಲ್ಲಿ ಇತರೇ ರೀತಿಯಲ್ಲಿ ಅಂದರೆ ಪಕ್ಷಕ್ಕೆ ದೇಣಿಗೆ ನೀಡುವುದು, ಪಕ್ಷದ ನಾಯಕರುಗಳ ಹಾಗೂ ಪ್ರಚಾರ ಸಭೆಗಳಲ್ಲಿ ಭೇಟಿ ನೀಡುವುದು, ಇತ್ಯಾದಿಗಳಾಗಿವೆ.

ಒಬ್ಬ ಪೌರನಾಗಿ ಕ್ರೈಸ್ತನು ರಾಜಕೀಯ ಪ್ರಕ್ರಿಯಗಳಲ್ಲಿ ಚಟುವಟಿಕೆಗಳಲ್ಲಿ ಭಾಗವಹಿಸುವಿಕೆಯನ್ನು ಬಹಳ ಪ್ರಾಮುಖ್ಯ ಕಾರ್ಯವೆಂದು/ಜವಾಬ್ದಾರಿಯೆಂದು ಪರಿಗಣಿಸಿದ್ದಾರೆ. ಈ ನಿಟ್ಟಿನಲ್ಲಿ ಪೂರಕ ಮಾಹಿತಿಗಳನ್ನು ಕೆಳಗೆ ನಮೂದಿಸಿರುವ ಕೋಷ್ಠಕದ ಮೂಲಕ ಕಂಡುಕೊಳ್ಳಬಹುದಾಗಿದೆ.

ಕೋಷ್ಟಕ ಸಂಖ್ಯೆ: ೪:೭.೩.

**ಕ್ರೈಸ್ತರು ರಾಜಕೀಯ ಭಾಗವಹಿಸುವಿಕೆಗೆ ಕಲ್ಪಿಸಿರುವ ಮಹತ್ವ**

| ಕ್ರಮ ಸಂಖ್ಯೆ | ಕಲ್ಪಿಸಿರುವ ಮಹತ್ವ | ಪ್ರಮಾಣ | ಶೇಕಡಾವಾರು |
|---|---|---|---|
| ೧ | ಅತ್ಯಂತ ಪ್ರಾಮುಖ್ಯ | ೬೦ | ೭೮.೯೪% |
| ೨ | ಸಾಮಾನ್ಯ ಪ್ರಾಮುಖ್ಯ | ೧೪ | ೧೮.೪೨% |
| ೩ | ತೀರಾ ಸಾಮಾನ್ಯ | ೦೨ | ೨.೬೩% |
| ೪ | ಪ್ರಾಮುಖ್ಯವಲ್ಲ | ೦೦ | ೦೦.೦೦% |
| ೫ | ಒಟ್ಟು | ೭೬ | ೧೦೦.೦೦% |

* ಮೂಲ: ಸಂಶೋಧಕನ ಕ್ಷೇತ್ರಕಾರ್ಯಾಧಾರಿತ ಮಾಹಿತಿ.

ಇಲ್ಲಿನ ಕ್ರೈಸ್ತ ಸಮುದಾಯದ ಪರಿಗಣನೆಯಲ್ಲಿ ರಾಜಕೀಯ ಭಾಗವಹಿಸುವಿಕೆಗೆ ಶೇಕಡ ೭೮.೯೪% ರಷ್ಟು ಮಂದಿ ಅತ್ಯಂತ ಪ್ರಾಮುಖ್ಯತೆಯ ವಿಚಾರವೆಂದು ರೇಟಿಂಗ್ ಕೊಟ್ಟಿದ್ದಾರೆ. ರಾಜಕೀಯ ಭಾಗವಹಿಸುವಿಕೆಗೆ ಪ್ರಾಮುಖ್ಯತೆಯಿಲ್ಲವೆಂಬುದಾಗಿ ಯಾರೂ ಅಭಿಪ್ರಾಯ ಪಟ್ಟಿಲ್ಲವೆನ್ನುವುದು ಗಮನಾರ್ಹವಾಗಿದೆ.

### ೪.೮. ಚರ್ಚ್ (ಧರ್ಮಸಭೆ) ಮತ್ತು ರಾಜಕೀಯ ಭಾಗವಹಿಸುವಿಕೆ

ಕ್ರೈಸ್ತ ಸಮುದಾಯವು ಚರ್ಚ್ (ಧರ್ಮಸಭೆಯ) ತಳಹದಿಯಲ್ಲಿ ಸುಸಂಘಟಿತವಾಗಿದೆ. ಕ್ರೈಸ್ತರ ಧಾರ್ಮಿಕ ಬದುಕಿನಲ್ಲಿ ಧರ್ಮಸಭೆಯು ಬಹಳಷ್ಟು ಪ್ರಾಮುಖ್ಯ ಪಾತ್ರವನ್ನು ನಿಭಾಯಿಸುತ್ತದೆ. ಈ ಭಾಗದಲ್ಲಿ ಧರ್ಮಸಭೆ ಮತ್ತು ರಾಜಕೀಯ ಭಾಗವಹಿಸುವಿಕೆ ನಡುವಣ ಸಂಬಂಧಗಳ ಕುರಿತು ಕ್ರೈಸ್ತರ ಮನೋಭಾವವನ್ನು ಗ್ರಹಿಸುವ ಪ್ರಯತ್ನ ಮಾಡಲಾಗಿದೆ.

ರಾಷ್ಟ್ರೀಯ ಮತ್ತು ರಾಜಕೀಯ ವಿಚಾರಗಳು ಚರ್ಚ್ ಮಟ್ಟದಲ್ಲಿ ಹೇಗೆ ಮತ್ತು ಎಷ್ಟರ ಮಟ್ಟಿಗೆ ಪ್ರಸ್ತುತವಿದೆಯೆಂದು ಕೇಳಲಾಯಿತು. ಈ ನಿಟ್ಟಿನಲ್ಲಿ ಸಂಗ್ರಹಿಸಲಾದ ಮಾಹಿತಿ ಕೆಳಗಿನ ಕೋಷ್ಟಕದಲ್ಲಿ ಅಡಕವಾಗಿದೆ.

ಕೋಷ್ಟಕ ಸಂಖ್ಯೆ: ೪.೮.೧. **ರಾಷ್ಟ್ರೀಯ ವಿಚಾರಗಳು ಚರ್ಚಿನಲ್ಲಿವೆಯೇ**

(೧) ಗಣರಾಜ್ಯ ದಿನಾಚರಣೆ, ಸ್ವಾತಂತ್ರ್ಯ ದಿನಾಚರಣೆಗಳು ಇತ್ಯಾದಿ ರಾಷ್ಟ್ರೀಯ ದಿನಗಳಂದು ಚರ್ಚಿನಲ್ಲಿ ವಿಶೇಷ ಪ್ರಾರ್ಥನೆ. ೭೬ ಮಂದಿಯಲ್ಲಿ ೫೩ ಮಂದಿ ಇದೆಯೆಂದು ಉತ್ತರಿಸಿದ್ದಾರೆ (ಶೇ. ೬೯.೭೩).

(೨) ಪ್ರತಿ ಆದಿತ್ಯವಾರ ದಿವ್ಯ ಬಲಿಪೂಜೆಯ ಸಂಧರ್ಭದಲ್ಲಿ ರಾಷ್ಟ್ರ ಮತ್ತು ಆಳುವವರಿಗೋಸ್ಕರ ಪ್ರಾರ್ಥನೆ ಇದೆಯೆ? ಇದಕ್ಕೆ ೬೩/೭೬ ಮಂದಿ ಇದೆಯೆಂದು ತಿಳಿಸಿದ್ದಾರೆ (೮೨.೮೯%).

(೩) ದೇಶ ರಕ್ಷಣೆ, ನೆರೆ, ಬರಗಾಲಗಳಂತಹ ರಾಷ್ಟ್ರೀಯ ಅಗತ್ಯಗಳಿಗೆ ನಿಧಿ ಸಂಗ್ರಹವಿದೆಯೇ? ಇದಕ್ಕೆ ೪೫/೭೬ ಮಂದಿ ಸಕಾರಾತ್ಮಕವಾಗಿ ಉತ್ತರಿಸಿದ್ದಾರೆ (೫೯.೨೧%).

(೪) ಆದರೆ ಸಾಮಾಜಿಕ, ರಾಜಕೀಯ ಬೆಳವಣಿಗೆಗಳ ಕುರಿತು ಗುಂಪು ಚರ್ಚೆಗಳು ಚರ್ಚಿನಲ್ಲವೆಯೇ? ಈ ನಿಟ್ಟಿನಲ್ಲಿ ೦೫/೭೬ ಮಂದಿ ಸಕಾರಾತ್ಮಕವಾಗಿ ಉತ್ತರಿಸಿದ್ದಾರೆ (೬.೫೭%).

ಮೇಲೆ ತಿಳಿಸಿದ ಕಾರ್ಯಕ್ರಮಗಳನ್ನು ಚರ್ಚಿನಲ್ಲಿ ನಡೆಸುವುದರ ಕುರಿತು ಇಲ್ಲಿನ ಕ್ರೈಸ್ತ ಸಮುದಾಯದ ಅಭಿಪ್ರಾಯ ಈ ಕೆಳಗಿನ ಕೋಷ್ಟಕದ ನೆರವಿನಿಂದ ತಿಳಿಯ ಬಹುದಾಗಿದೆ.

ಕೋಷ್ಟಕ ಸಂಖ್ಯೆ: ೪.೮.೨.

**ರಾಷ್ಟ್ರೀಯ ಪ್ರಾಮುಖ್ಯತೆಯ ವಿಷಯಗಳಲ್ಲಿ ಚರ್ಚ್‌ನ ಸಹಕಾರದ ಕುರಿತು ಕ್ರೈಸ್ತರ ಅಭಿಮತ**

| ಕ್ರ. ಸಂಖ್ಯೆ | ಕ್ರೈಸ್ತರ ಅಭಿಮತ | ಅಭಿಮತದ ಪ್ರಮಾಣ | ಶೇಕಡಾವಾರು |
|---|---|---|---|
| ೧ | ಪೂರ್ತಿ ಸಹಮತವಿದೆ | ೬೫ | ೮೫.೫೨% |
| ೨ | ಆಂಶಿಕವಾಗಿ ಒಪ್ಪುತ್ತೇನೆ | ೦೭ | ೯.೨೧% |
| ೩ | ನನಗೆ ತಿಳಿದಿಲ್ಲ/ಗೊತ್ತಿಲ್ಲ | ೦೧ | ೧.೩೧% |
| ೪ | ನನ್ನ ವಿರೋಧವಿದೆ | ೦೩ | ೩.೯೪% |
| ೫ | ಒಟ್ಟು | ೭೬ | ೧೦೦.೦೦% |

* ಮೂಲ: ಸಂಶೋಧಕನ ಕ್ಷೇತ್ರ ಕಾರ್ಯಾಧಾರಿತ ಮಾಹಿತಿ.

ರಾಷ್ಟ್ರೀಯ ದಿನಾಚರಣೆ, ರಾಷ್ಟ್ರಕ್ಕಾಗಿ ಮತ್ತು ಅದರ ನಾಯಕರುಗಳಿಗಾಗಿ ವಿಶೇಷ ಪ್ರಾರ್ಥನೆ, ರಾಷ್ಟ್ರೀಯ ವಿಪತ್ತುಗಳಾದ ನೆರೆ, ಬರ ಇತ್ಯಾದಿಗಳ ಸಂಧರ್ಭದಲ್ಲಿ ನಿಧಿ ಸಂಗ್ರಹಿಸಿ ಸಹಕರಿಸುವುದು ಇತ್ಯಾದಿ ವಿಚಾರಗಳಲ್ಲಿ ಚರ್ಚುಗಳ ಸಹಕಾರವನ್ನು ಈ ಸಮುದಾಯದ ಶೇಕಡ ೮೫.೫೨ ರಷ್ಟು ಮಂದಿ ತಮ್ಮ ಪೂರ್ತಿ ಸಹಮತವನ್ನು ವ್ಯಕ್ತಪಡಿಸಿರುತ್ತಾರೆ.

ರಾಜಕೀಯದಲ್ಲಿ ಧರ್ಮ ಸಭೆಯು (ಚರ್ಚ್) ಸಕ್ರಿಯವಾಗಿ ಪಾಲುಗೊಳ್ಳುವ ನಿಟ್ಟಿನಲ್ಲಿ ಕ್ರೈಸ್ತ ಪೌರರ ಅಭಿಪ್ರಾಯವನ್ನು ಈ ಕೆಳಗಿನ ಕೋಷ್ಟಕದಲ್ಲಿ ಕ್ರೋಢೀಕರಿಸಲಾಗಿದೆ.

ಕೋಷ್ಠಕ ಸಂಖ್ಯೆ ೪.೮.೩.

**ಸಕ್ರಿಯ ರಾಜಕಾರಣದಲ್ಲಿ ಚರ್ಚಿನ ಪಾಲ್ಗೊಳ್ಳುವಿಕೆಯ ಕುರಿತು ಕ್ರೈಸ್ತ ಪೌರರ ಅಭಿಮತ**

| ಕ್ರ. ಸಂಖ್ಯೆ | ಕ್ರೈಸ್ತರ ಅಭಿಮತ | ಅಭಿಮತದ ಪ್ರಮಾಣ | ಶೇಕಡಾವಾರು |
|---|---|---|---|
| ೧ | ಸ್ವಾಗತಾರ್ಹ | ೩೪ | ೪೪.೭೩% |
| ೨ | ಹೆಚ್ಚಿಗೆ ಪಾಲುಗೊಳ್ಳುವುದು ಅಗತ್ಯವಿಲ್ಲ | ೩೫ | ೪೬.೦೫% |
| ೩ | ನನಗೆ ಆಸಕ್ತಿಯಿಲ್ಲ | ೦೬ | ೭.೮೯% |
| ೪ | ಇತರೇ | ೦೧ | ೧.೩೧% |
| ೫ | ಒಟ್ಟು | ೭೬ | ೧೦೦.೦೦% |

* ಮೂಲ: ಸಂಶೋಧಕನ ಕ್ಷೇತ್ರ ಕಾರ್ಯಾಧಾರಿತ ಮಾಹಿತಿ.

ಚರ್ಚ್ ಸಕ್ರಿಯ ರಾಜಕಾರಣದಲ್ಲಿ ಹೆಚ್ಚಿಗೆ ಪಾಲುಗೊಳ್ಳುವ ಅಗತ್ಯವಿಲ್ಲವೆಂಬುದಾಗಿ ಹೆಚ್ಚಿನ ಕ್ರೈಸ್ತ ಪೌರರು ಅಭಿಪ್ರಾಯ ಪಟ್ಟಿದ್ದಾರೆ.

## ೪.೯. ಕ್ರಿಶ್ಚಿಯನ್ನರು ಮತ್ತು ರಾಜಕಾರಣ

ಈ ಅಧ್ಯಯನದಲ್ಲಿ ಕ್ರೈಸ್ತ ನಂಬಿಕೆಗಳು ಅಥವಾ ತತ್ವಗಳು ಮತ್ತು ಕ್ರೈಸ್ತರ ರಾಜಕೀಯ ಬದುಕು/ಭಾಗವಹಿಸುವಿಕೆಗಳ ನಡುವಣ ಸಂಬಂಧಗಳ ಕುರಿತೂ ಸಮೀಕ್ಷೆ ಮಾಡಲಾಯಿತು. ಈ ಸಮೀಕ್ಷೆಯ ಪ್ರಕಾರ ಕ್ರೈಸ್ತ ಧರ್ಮದ ನಂಬಿಕೆಗಳು/ತತ್ವಗಳು ಕ್ರೈಸ್ತರ ರಾಜಕೀಯ ಬದುಕು/ಭಾಗವಹಿಸುವಿಕೆಗೆ ಸಾಧಕವಾಗಿದೆಯೇ ಹೊರತು ಭಾಧಕವಾಗಿಲ್ಲವೆಂಬ ನಿಟ್ಟಿನಲ್ಲಿ ಅನಿಸಿಕೆಗಳು ವ್ಯಕ್ತವಾಗಿವೆ. ಕ್ರೈಸ್ತ ನಂಬಿಕೆಗಳು ಕ್ರೈಸ್ತರ ರಾಜಕೀಯ ಬದುಕಿಗೆ ಪೂರಕವೆಂದು ಸಮೀಕ್ಷೆ ಮಾಡಲಾದ ಎಪ್ಪತ್ತಾರು ಮಂದಿಯ ಪೈಕಿ ಅರುವತ್ತಾರು ಮಂದಿ ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ (೮೬.೮೪%)

ಅದೇ ರೀತಿಯಲ್ಲಿ ರಾಜಕಾರಣವು ಕ್ರಿಶ್ಚಿಯನ್ನರಿಗೆ ಯೋಗ್ಯವಾದ ಕಸಬೆಂದು ಸಮೀಕ್ಷೆ ಮಾಡಿದವರ ಪೈಕಿ ಎಪ್ಪತ್ತಾರರಲ್ಲಿ ನಲ್ವತ್ತಾರು ಮಂದಿ ತಮ್ಮ ಅನಿಸಿಕೆ ವ್ಯಕ್ತಪಡಿಸಿದ್ದಾರೆ (ಶೇಕಡ ೬೦.೫೨)

ಕ್ರೈಸ್ತರು ರಾಜಕಾರಣದಲ್ಲಿ ತಮ್ಮದೇ (ಧಾರ್ಮಿಕ ನೆಲೆಯಲ್ಲಿ) ಆದ ಒಂದು ರಾಜಕೀಯ ಪಕ್ಷವನ್ನು ಸಂಘಟಿಸಿ ಚುನಾವಣೆಗಳಲ್ಲಿ ಸ್ಪರ್ಧಿಸುವುದು ಉತ್ತಮವೇ, ಯಾ ಕೇವಲ ಕ್ರೈಸ್ತ ಸಂಘಟನೆಗಳನ್ನು ರೂಪಿಸಿ ಕ್ರೈಸ್ತರಿಗೆ ರಾಜಕೀಯ ಭಾಗವಹಿಸುವಿಕೆಗೆ ಸಂಬಂಧಿಸಿದಂತೆ ತರಬೇತಿಗಳ ಮೂಲಕ ಅರಿವು ಮೂಡಿಸುವುದು ಉತ್ತಮವೇ? ಕ್ರೈಸ್ತರ ಸಕ್ರಿಯ ರಾಜಕೀಯ ಭಾಗವಹಿಸುವಿಕೆಗೆ ಯಾವುದು ಸರಿ, ಎಂಬುದಾಗಿ ಸಮೀಕ್ಷಿಸಿದಾಗ, ಕ್ರೈಸ್ತರ ಅಭಿಮತ ಈ ಕೆಳಗಿನ ಕೋಷ್ಟಕದಲ್ಲಿರುವಂತೆ ಮೂಡಿ ಬಂದಿದೆ.

ಕೋಷ್ಟಕ ಸಂಖ್ಯೆ: ೪.೯.೧.

**ಕ್ರೈಸ್ತರು ಮತ್ತು ರಾಜಕಾರಣ – ಯಾವುದು ಸರಿ?**

| ಕ್ರ. ಸಂಖ್ಯೆ | ಯಾವುದು ಸರಿ | ಅಭಿಮತ | ಶೇಕಡಾವಾರು |
|---|---|---|---|
| ೧ | ಕ್ರೈಸ್ತರು ತಮ್ಮದೇ ಆದ ಪ್ರತ್ಯೇಕ ರಾಜಕೀಯ ಪಕ್ಷ ಸಂಘಟಿಸಿ ಚುನಾವಣೆಗಳಲ್ಲಿ ಸ್ಪರ್ಧಿಸುವುದು | ೨೦ | ೨೬.೩೧% |
| ೨ | ರಾಜಕೀಯ ತರಬೇತಿಯ ಮೂಲಕ ಕ್ರೈಸ್ತರ ಭಾಗ ವಹಿಸುವಿಕೆಯ ಅರಿವು ಮೂಡಿಸುವುದು | ೪೩ | ೫೬.೫೭% |
| ೩ | ಇನ್ನಿತರ ವಿಧಾನಗಳು | ೧೩ | ೧೭.೧೦% |
| ೪ | ಒಟ್ಟು | ೭೬ | ೧೦೦.೦೦% |

* ಮೂಲ, ಸಂಶೋಧಕನ ಕ್ಷೇತ್ರ ಕಾರ್ಯಧಾರಿತ ಮಾಹಿತಿ.

ಕ್ರಿಶ್ಚಿಯನ್ನರಿಗೆ ಧಾರ್ಮಿಕ ನೆಲೆಯಲ್ಲಿ ಪ್ರತ್ಯೇಕವಾದ ಪಕ್ಷ ಸಂಘಟಿಸಿ ಚುನಾವಣೆಗಳಲ್ಲಿ ಸ್ಪರ್ಧಿಸುವ ಆಸಕ್ತಿ ಕಡಿಮೆಯಿದೆಯೆಂದು ಕಂಡು ಬರುತ್ತದೆ. ಆದರೆ ಕೆಥೋಲಿಕ್ ಸಭಾ, ಮಲಯಾಳಿ ಕ್ರಿಶ್ಚಿಯನ್ ಅಸೋಸಿಯೇಶನ್ ಮುಂತಾದುವುಗಳ ಮೂಲಕ ಕ್ರೈಸ್ತರಿಗೆ ಸೂಕ್ತ

ತರಬೇತಿಗಳ ಮೂಲಕ ರಾಜಕೀಯ ಭಾಗವಹಿಸುವಿಕೆ ಪ್ರಕ್ರಿಯಗಳಲ್ಲಿ ಸಕ್ರಿಯವಾಗಿ ಪಾಲುಗೊಳ್ಳುವ ನಿಟ್ಟನಲ್ಲಿ ಅರಿವು ಮೂಡಿಸಬೇಕಿದೆಯೆಂಬ ಅಭಿಪ್ರಾಯ ಇಲ್ಲಿ ಹೆಚ್ಚಾಗಿ ಕಂಡು ಬರುತ್ತದೆ (ಶೇಕಡ ೫೬.೫೭ ರಷ್ಟು).

**೪.೧೦. ಕ್ರೈಸ್ತರ ರಾಜಕೀಯ ಭಾಗವಹಿಸುವಿಕೆಗೆ ಸಂಬಂಧಿಸಿದಂತೆ ಇತರೇ ವಿವರಗಳು**

ಕ್ರೈಸ್ತರ ರಾಜಕೀಯ ಭಾಗವಹಿಸುವಿಕೆಗೆ ಸಂಬಂಧಿಸಿದಂತೆ ಈ ಕೆಳಗೆ ನಮೂದಿಸಲಾಗಿರುವ ವಿಷಯಗಳ ಕುರಿತು ಮಾಹಿತಿ ಸಂಗ್ರಹಿಸಲಾಗಿದೆ.

ಮೊದಲನೆಯದಾಗಿ, ಪ್ರಶ್ನಾವಳಿಯಲ್ಲಿ ನಿಮಗೆ ಪ್ರಿಯವಾದ ನಾಯಕರು ಯಾರು ಎಂದು ಕೇಳಲಾದ ಪ್ರಶ್ನೆಗೆ ಹೆಚ್ಚಿನವರು ಶ್ರೀಯುತ ಜಾರ್ಜ್ ಫೆರ್ನಾಂಡಿಸರ ಹೆಸರನ್ನು ಸೂಚಿಸಿದ್ದಾರೆ. ಉಳಿದಂತೆ ಪಟ್ಟಿಯಲ್ಲಿ ಶ್ರೀಯುತ ಆಸ್ಕರ್ ಫೆರ್ನಾಂಡಿಸ್, ಎ.ಕೆ. ಆಂಟನಿ, ದಿ.ವೈ. ರಾಜಶೇಖರ ರೆಡ್ಡಿ ಮುಂತಾದವರ ಹೆಸರುಗಳು ಇವೆ.

ಅದೇ ರೀತಿಯಲ್ಲಿ ಕ್ರೈಸ್ತೇತರರಲ್ಲಿ ನಿಮ್ಮ ಮೆಚ್ಚಿನ ನಾಯಕರು ಯಾರೆಂದು ಕೇಳಲಾದ ಪ್ರಶ್ನೆಗೆ ಡಾ. ಮನಮೋಹನಸಿಂಗ್ ರವರ ಹೆಸರು ಹೆಚ್ಚಿನವರು ಸೂಚಿಸಿದ್ದಾರೆ. ಉಳಿದಂತೆ ಎ.ಬಿ.ವಾಜಪೇಯಿ, ಅಬ್ದುಲ್ ಕಲಾಮ್, ಎಂ. ವೀರಪ್ಪ ಮೈಲಿ, ಜನಾರ್ಧನ ಪೂಜಾರಿ ಮುಂತಾದವರ ಹೆಸರುಗಳು ಪಟ್ಟಿಯಲ್ಲಿವೆ.

ಇನ್ನು ಧರ್ಮವನ್ನು ರಾಜಕಾರಣದಲ್ಲಿ ಬೆರೆಸುವುದರ ಕುರಿತಾದ ಪ್ರಶ್ನೆಗೆ ಇಲ್ಲಿನ ಕ್ರೈಸ್ತ ಸಮುದಾಯದ ಅನಿಸಿಕೆಗಳು ಈ ಕೆಳಗಿನಂತಿವೆ. ಧರ್ಮ, ರಾಜಕೀಯಗಳ ಮಿಶ್ರಣ ನಮ್ಮ ಧರ್ಮ ನಿರಪೇಕ್ಷ ರಾಷ್ಟ್ರದಲ್ಲಿ ಉಚಿತವಲ್ಲವೆಂಬುದಾಗಿ ೭೨/೭೬ (೯೪.೭೩%) ರಷ್ಟು ಮಂದಿ ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಭವಿಷ್ಯದಲ್ಲಿ ಕ್ರೈಸ್ತ ಹುರಿಯಾಳುಗಳು ಗೆಲ್ಲುವ ಸಾಧ್ಯತೆಗಳಿವೆಯೇ ಎಂದು ಕೇಳಲಾದ ಪ್ರಶ್ನೆಗೆ ೭೬ ರಲ್ಲಿ ೫೧ ಮಂದಿ (೬೭.೧೦%) ಗೆಲ್ಲುವ ಸಾಧ್ಯತೆಗಳು ಇದೆಯೆಂಬುದಾಗಿಯೂ ಉಳಿದಂತೆ ೨೫ ಮಂದಿ (ಶೇಕಡ ೩೨.೮೯) ಭವಿಷ್ಯದಲ್ಲಿ ಕ್ರೈಸ್ತ ಅಭ್ಯರ್ಥಿಗಳು ಜಯ ಶಾಲಿಯಾಗುವ ಸಾಧ್ಯತೆಗಳು ಕಡಿಮೆಯಿದೆಯೆಂದೂ ಅಭಿಪ್ರಾಯ ಪಟ್ಟಿದ್ದಾರೆ.

ಕ್ರೈಸ್ತರೊಳಗೆ ಏಕತೆ ಇದೆಯೇಯೆಂದು ಕೇಳಲಾದ ಪ್ರಶ್ನೆಗೆ, ಏಕತೆಯ ಕೊರತೆಯಿದೆಯೆಂಬುದಾಗಿ ೭೬ರಲ್ಲಿ ೫೦ ಮಂದಿ (ಶೇಕಡ ೬೫.೭೮ ರಷ್ಟು) ಅಭಿಪ್ರಾಯ ಪಟ್ಟಿದ್ದಾರೆ.

ಮಹಿಳೆಯರಿಗೆ ರಾಜಕೀಯ ಮೀಸಲಾತಿಯ ಅವಶ್ಯಕತೆ ಇದೆಯೇ ಎಂದು ಕೇಳಲಾದ ಪ್ರಶ್ನೆಗೆ ಹೆಚ್ಚಿನವರು ಇದೆಯೆಂಬುದಾಗಿ ತಮ್ಮ ಅನಿಸಿಕೆ ವ್ಯಕ್ತಪಡಿಸಿದ್ದಾರೆ.

ಉಳಿದಂತೆ ಪ್ರಶ್ನಾವಳಿಯಲ್ಲಿ ಒಳಗೊಳ್ಳಿಸಲಾದ – ಕ್ರೈಸ್ತ ಸಮುದಾಯದ ರಾಜಕೀಯ ಭವಿಷ್ಯಕ್ಕೆ ಏನು ಅಡೆತಡೆಗಳಿವೆ ಮತ್ತು ಕ್ರೈಸ್ತರ ರಾಜಕೀಯ ಪಾಲುಗೊಳ್ಳುವಿಕೆಯನ್ನು ಸುಧಾರಿಸುವ ನಿಟ್ಟಿನಲ್ಲಿ ಅವರ ಸಲಹೆ ಸೂಚನೆಗಳನ್ನು ಮುಂದಿನ ಅಧ್ಯಾಯದಲ್ಲಿ ಕೈಗೆತ್ತಿ ಕೊಳ್ಳಲಾಗುತ್ತದೆ.

# ಅಧ್ಯಾಯ – ೫

# ಕ್ರೈಸ್ತರ ರಾಜಕೀಯ ಭಾಗವಹಿಸುವಿಕೆಗೆ ಸವಾಲುಗಳು

## ಅಧ್ಯಾಯ – ೫

# ಕ್ರೈಸ್ತರ ರಾಜಕೀಯ ಭಾಗವಹಿಸುವಿಕೆಗೆ ಸವಾಲುಗಳು

ಪ್ರಸ್ತುತ ಅಧ್ಯಾಯದಲ್ಲಿ ಕ್ರೈಸ್ತರ ರಾಜಕೀಯ ಭಾಗವಹಿಸುವಿಕೆಗೆ ಸಂಬಂಧಿಸಿದಂತೆ ಎದುರಾಗುವ ಅಡಚಣೆಗಳು ಹಾಗೂ ಸವಾಲುಗಳನ್ನು ಕುರಿತು ವಿಶ್ಲೇಷಣೆ ಮಾಡಲಾಗಿದೆ. ಕ್ಷೇತ್ರ ಕಾರ್ಯದ ಸಂಧರ್ಭದಲ್ಲಿ ಪ್ರಶ್ನಾವಳಿಯಲ್ಲಿ ಈ ವಿಷಯಕ್ಕೆ ಸಂಬಂಧಿಸಿದಂತೆ ಆಯ್ದವ್ಯಕ್ತಿಗಳಲ್ಲಿ ಕ್ರೈಸ್ತರ ರಾಜಕೀಯ ಭವಿಷ್ಯಕ್ಕೆ ಅಡೆ ತಡೆಗಳು ಯಾವುದೆಂದು ಕೇಳಲಾಯಿತು. ಹೆಚ್ಚಿನವರು ತಮ್ಮ ಅಭಿಪ್ರಾಯಗಳನ್ನು ವ್ಯಕ್ತ ಪಡಿಸಿದ್ದಾರೆ. ಅವರು ಗುರುತಿಸಿರುವಂತೆ ಕ್ರೈಸ್ತರ ರಾಜಕೀಯ ಭಾಗವಹಿಸುವಿಕೆಯಲ್ಲಿ ಎದುರಾಗುವ ಕೆಲವೊಂದು ಪ್ರಮುಖ ಅಡೆ–ತಡೆಗಳು ಈ ಕೆಳಗಿನಂತಿವೆ.

(೧) ಕ್ರೈಸ್ತರಲ್ಲಿ ತಾವು ಅಲ್ಪ ಸಂಖ್ಯಾತರೆಂಬ ಭಾವನೆ

(೨) ಕ್ರೈಸ್ತರೊಳಗೆ ಏಕತೆಯ ಕೊರತೆಯಿದೆ.

(೩) ಕ್ರೈಸ್ತರು ರಾಜಕೀಯವಾಗಿ ಸುಸಂಘಟಿತಗೊಂಡಿಲ್ಲ.

(೪) ಕ್ರೈಸ್ತರಲ್ಲಿ ಸಮರ್ಥ ನಾಯಕತ್ವದ ಕೊರತೆಯಿದೆ.

(೫) ಕ್ರೈಸ್ತ ಧರ್ಮ ಗುರುಗಳ ತಟಸ್ಥ ಮನೋಭಾವ, ಕ್ರೈಸ್ತ ಅಭ್ಯರ್ಥಿಗಳಿಗೆ ಚರ್ಚಿನ ಬೆಂಬಲ ಮತ್ತು ಹಣದ ಕೊರತೆ.

(೬) ರಾಜಕೀಯ ಕೊಳಕೆಂಬ ಮನೋಭಾವ ಕ್ರೈಸ್ತರಲ್ಲಿ ರಾಜಕೀಯ ಬಡತನಕ್ಕೆ ಕಾರಣ.

(೭) ಕ್ರೈಸ್ತರ ಧಾರ್ಮಿಕ ಮನೋಭಾವನೆಗಳು ಮತ್ತು ನಂಬಿಕೆಗಳು.

(೮) ಚುನಾವಣೆಗಳಲ್ಲಿ ಗೆಲ್ಲಲು ಜಾತಿ, ಧರ್ಮ ಮತ್ತು ಹಣದ ದುರ್ಬಳಕೆಯಾಗುತ್ತಿರುವುದು.

(೯) ಕ್ರೈಸ್ತರು ಮತಾಂತರ ಮಾಡುವವರೆಂಬ ಸಲ್ಲದ ಹಣೆ ಪಟ್ಟಿ.

(೧೦) ಕ್ರೈಸ್ತರು ಹೊರಗಿನವರೆಂಬ ಭಾವನೆ

(೧೧) ಇತ್ತೀಚೆಗಿನ ದಿನಗಳಲ್ಲಿ ಜಿಲ್ಲೆಯಲ್ಲಿ ಸಂಭವಿಸುತ್ತಿರುವ ಕೋಮುಧ್ರುವೀಕರಣ

(೧೨) ಜಿಲ್ಲೆಯಲ್ಲಿ ಕ್ರೈಸ್ತರು ಹರಡಿ ಹಂಚಿ ಹೋಗಿದ್ದಾರೆ. ಯಾವುದೇ ಒಂದು ನಿರ್ದಿಷ್ಟ ಚುನಾವಣಾ ಕ್ಷೇತ್ರಕ್ಕೆ ಸೀಮಿತವಾಗಿ ವಾಸ್ತವ್ಯ ಹೂಡದೇ ಇರುವುದು.

(೧೩) ಕ್ರೈಸ್ತ ಸಮುದಾಯದ ಎಲ್ಲಾ ಪಂಗಡಗಳನ್ನು ಪ್ರತಿನಿಧಿಸುವ ಒಂದು ಸಾಮಾನ್ಯ ವೇದಿಕೆಯ ಕೊರತೆ.

(೧೪) ಜಿಲ್ಲೆಯ ಕ್ರೈಸ್ತರಲ್ಲಿ ಪ್ರತಿಭಾವಂತರು ಉದ್ಯೋಗಕ್ಕಾಗಿ ಹೊರದೇಶಗಳಿಗೆ ವಲಸೆ ಹೋಗುತ್ತಿರುವುದು

(೧೫) ಸಾಮಾನ್ಯವಾಗಿ ರಾಜಕೀಯ ಪ್ರವೇಶಿಸಿದ ನಂತರ ಅಭ್ಯರ್ಥಿಗಳು ಪ್ರಾಮಾಣಿಕತೆಯನ್ನು ಕಳೆದುಕೊಂಡು ಜನರ ಅಪನಂಬಿಕೆಗೆ ಗುರಿಯಾಗುತ್ತಿರುವುದು ಮೊದಲಾದ ಅಡಚಣೆಗೆಗಳನ್ನು ಗುರುತಿಸಲಾಗಿದೆ.

ಕ್ರೈಸ್ತರ ರಾಜಕೀಯ ಬದುಕು ಭಾಗವಹಿಸುವಿಕೆಗೆ ಎದುರಾಗುವ ಪ್ರಮುಖ ಸವಾಲುಗಳು ಮತ್ತು ಅವರ ರಾಜಕೀಯ ಭವಿಷ್ಯವನ್ನು ಉತ್ತಮ ಪಡಿಸುವ ನಿಟ್ಟಿನಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಪ್ರಸಿದ್ದ ಹಾಗೂ ಜನಪ್ರಿಯ ಕ್ರೈಸ್ತ ನಾಯಕರುಗಳು/ಪ್ರತಿನಿಧಿಗಳೊಂದಿಗೆ ವೈಯಕ್ತಿಕ ಸಂದರ್ಶನದ ಮೂಲಕವೂ ಈ ದಿಸೆಯಲ್ಲಿ ಉಪಯುಕ್ತ ಮಾಹಿತಿಯನ್ನು ಸಂಗ್ರಹಿಸಲಾಯಿತು. ಸಂದರ್ಶನ ಮತ್ತು ಪ್ರಶ್ನಾವಳಿ ವಿಧಾನಗಳ ಮೂಲಕ ಕ್ರೈಸ್ತ ಸಮುದಾಯದ ರಾಜಕೀಯ ಭಾಗವಹಿಸುವಿಕೆಗೆ ಸಂಬಂಧಿಸಿದಂತೆ ಸಂಗ್ರಹಿಸಲಾದ ಮಾಹಿತಿಯ ಆಧಾರದಲ್ಲಿ ಈ ಕೆಳಗೆ ಕೊಟ್ಟಿರುವಂತೆ ಮುಖ್ಯ ಸವಾಲುಗಳನ್ನು ಗುರುತಿಸಿ ವಿಶ್ಲೇಷಿಸಲಾಗಿದೆ.

* ಕ್ರೈಸ್ತರು ಅಲ್ಪ ಸಂಖ್ಯಾತ ಸಮುದಾಯ.
* ಕ್ರೈಸ್ತ ಸಮುದಾಯದಲ್ಲಿ ಏಕತೆಯ ಕೊರತೆ
* ಕ್ರೈಸ್ತ ಮತದಾರರು ಹಂಚಿ ಹರಡಿ ಹೋಗಿರುವುದು.
* ಜಾತಿ ಲೆಕ್ಕಾಚಾರದ ರಾಜಕಾರಣ
* ಜಿಲ್ಲೆಯಲ್ಲಿ ಸಂಭವಿಸುತ್ತಿರುವ ಕೋಮುಧ್ರುವೀಕರಣ.
* ಕ್ರೈಸ್ತರ ಧಾರ್ಮಿಕ ಮನೋಭಾವನೆಗಳು, ನಂಬಿಕೆಗಳು.

**೫.೧. ಕ್ರೈಸ್ತರು ಅಲ್ಪ ಸಂಖ್ಯಾತ ಸಮುದಾಯ**

ಕ್ರೈಸ್ತರು ನಮ್ಮ ದೇಶದಲ್ಲಿ ಅಲ್ಪ ಸಂಖ್ಯಾತ ಸಮುದಾಯಗಳ ಪೈಕಿ, ಅಲ್ಪ ಸಂಖ್ಯಾತ ಸಮುದಾಯವಾಗಿದೆ. ೨೦೦೧ ರ ಜನಗಣತಿಯ ಅಂಕಿ ಅಂಶಗಳ ಪ್ರಕಾರ ಈ ದೇಶದ ಒಟ್ಟು ಜನಸಂಖ್ಯೆಯಲ್ಲಿ ಕ್ರೈಸ್ತರು ಕೇವಲ ಶೇಕಡ ೨.೩೪ ರಷ್ಟು ಮಂದಿ ಮಾತ್ರ ಇರುತ್ತಾರೆ. ಮುಸ್ಲಿಮ್ ಅಲ್ಪ ಸಂಖ್ಯಾತ ಸಮುದಾಯಕ್ಕೆ ಹೋಲಿಸಿದಾಗ ಎರಡೂ ಸಮುದಾಯಗಳ ಜನಸಂಖ್ಯೆಯ ಪ್ರಮಾಣದಲ್ಲಿ ಅಜಗಜಾಂತರ ವ್ಯತ್ಯಾಸವಿದೆ. ಇನ್ನು ರಾಜ್ಯದಲ್ಲಿ ಕ್ರೈಸ್ತ ಸಮುದಾಯದ ಪ್ರಮಾಣ ಕೇವಲ ಶೇಕಡಾ ೨ ರಷ್ಟು ಮಾತ್ರವಿದೆ. ಇದು ಕ್ರೈಸ್ತರಲ್ಲಿ ತಾವು ಅಲ್ಪ ಸಂಖ್ಯಾತರೆಂಬ ಭಾವನೆಯನ್ನು ಗಟ್ಟಿಯಾಗಿ ಮೂಡಿಸಿದೆ ಮಾತ್ರವಲ್ಲದೆ ತಾವು ರಾಜಕೀಯದಲ್ಲಿ ನಿರ್ಣಾಯಕ ಪಾತ್ರವಹಿಸಲು ಸಾಧ್ಯವಿಲ್ಲವೆಂಬ ಕೊರಗು ಅವರನ್ನು ಕಾಡುತ್ತದೆ. ಈ ತೆರನಾದ ಒಂದು ಮನೋಭಾವ ಅವರನ್ನು ರಾಜಕೀಯದಲ್ಲಿ ಸಕ್ರಿಯವಾಗಿ ಭಾಗವಹಿಸುವಲ್ಲಿ ಹಿಂಜರಿಯುವಂತೆ ಮಾಡುತ್ತದೆ. ಇಷ್ಟು ಮಾತ್ರವಲ್ಲದೆ ರಾಜಕೀಯದಿಂದ, ಮತದಾನಗಳಿಂದ ದೂರ ಉಳಿಯಲು ಅವರಿಗೆ ಒಂದು ಒಳ್ಳೆಯ ನೆವನ ಸಿಕ್ಕಿದಂತೆ ಆಯಿತು.

ಇನ್ನು ಕಳೆದ ೨೦ ವರುಷಗಳ ವಿಧಾನಸಭಾ ಚುನಾವಣೆಗಳಲ್ಲಿ ಈ ಜಿಲ್ಲೆಯಿಂದ ಒಬ್ಬ ಕ್ರೈಸ್ತ ಅಭ್ಯರ್ಥಿಯೂ ಕರ್ನಾಟಕದ ವಿಧಾನಸಭೆಗೆ ಆಯ್ಕೆಯಾಗದೇ ಇರುವುದು, ಇಲ್ಲಿಯ ತನಕ ಒಬ್ಬನೆ ಒಬ್ಬ ಕ್ರೈಸ್ತ ಪ್ರತಿನಿಧಿ ಲೋಕಸಭೆಗೆ ಮಂಗಳೂರು ಲೋಕಸಭಾ ಚುನಾವಣಾ ಕ್ಷೇತ್ರದಿಂದ ಆಯ್ಕೆಗೊಳ್ಳದಿರುವುದು, ಮತ್ತು ಸ್ಥಳೀಯ ಸರಕಾರಗಳಲ್ಲಿ ಚುನಾವಣೆಯಿಂದ ಚುನಾವಣೆಗೆ ಕ್ರೈಸ್ತರ ಪ್ರಾತಿನಿಧ್ಯದ ಪ್ರಮಾಣ ಕುಸಿಯುತ್ತಿರುವುದು, ಇತ್ಯಾದಿ, ಇತ್ಯಾದಿಗಳು ಕ್ರೈಸ್ತರು ಒಂದು ಅಲ್ಪ ಸಂಖ್ಯಾತ ಸಮುದಾಯವಾಗಿ ರಾಜಕೀಯ ಪ್ರಾತಿನಿಧ್ಯತೆಯನ್ನು ಕಳಕೊಂಡಿರುವುದು ಮಾತ್ರವಲ್ಲದೆ. ಕ್ರೈಸ್ತರು ಒಂದು ಅಲ್ಪಸಂಖ್ಯಾತ ಸಮುದಾಯವಾಗಿ ಭವಿಷ್ಯದಲ್ಲಿ ರಾಜಕೀಯ ಭಾಗವಹಿಸುವಿಕೆಯಲ್ಲಿ ಸಂಪೂರ್ಣವಾಗಿ ಆಸಕ್ತಿ ಕಳೆದುಕೊಳ್ಳುವ ಅಪಾಯವಿದೆ. ಈ ರೀತಿಯ ರಾಜಕೀಯ ಅಭದ್ರತೆಯ ಭಾವನೆಯನ್ನು ಆದಷ್ಟು ಬೇಗ ನಿವಾರಿಸಿದರೆ ಮಾತ್ರ ಪ್ರಜಾ ಪ್ರಭುತ್ವ ವ್ಯವಸ್ಥೆಯ ಅರ್ಥಪೂರ್ಣ ಆಚರಣೆ ಸಾಧ್ಯ.

### ೫.೨. ಕ್ರೈಸ್ತ ಸಮುದಾಯದಲ್ಲಿ ಐಕ್ಯತೆಯ ಕೊರತೆ

ಕ್ರೈಸ್ತರ ಸಕ್ರಿಯ ರಾಜಕೀಯ ಭಾಗವಹಿಸುವಿಕೆಗೆ ಸವಾಲಾಗಿ ಪರಿಣಮಿಸಿರುವ ಪ್ರಮುಖ ಸಮಸ್ಯೆಯೇ ಕ್ರೈಸ್ತ ಸಮುದಾಯದಲ್ಲಿ ಕಂಡು ಬರುವ ಐಕ್ಯತೆಯ ಕೊರತೆ. ಕ್ರೈಸ್ತ ನಾಯಕರೊಂದಿಗಿನ ಸಂದರ್ಶನ ಹಾಗೂ ಪ್ರಶ್ನಾವಳಿಗೆ ಉತ್ತರಿಸಿದವರಲ್ಲಿಯೂ ಹೆಚ್ಚಿನವರು ಐಕ್ಯತೆಯ ಕೊರತೆಯೇ ಕ್ರೈಸ್ತರ ರಾಜಕೀಯ ಸಹಭಾಗಿತ್ವಕ್ಕೆ ದೊಡ್ಡ ಸವಾಲೆಂದು ಅಭಿಪ್ರಾಯ ಪಟ್ಟಿದ್ದಾರೆ. ಕ್ರೈಸ್ತ ಸಮುದಾಯದ ಏಕತೆಯ ಕೊರತೆಗೆ ಒಂದು ಮುಖ್ಯ ಕಾರಣ ಅನೇಕ ಪಂಗಡಗಳಿಗೆ ಸೇರಿದವರು ಈ ಸಮುದಾಯದ ವ್ಯಾಪ್ತಿಯಡಿಯಲ್ಲಿ ಬರುತ್ತಾರೆ. ಎಲ್ಲಾ ಕ್ರೈಸ್ತ ಪಂಗಡಗಳಿಗೆ ಸೇರಿದವರನ್ನು ಒಟ್ಟಿಗೆ ತರುವ ಪ್ರಯತ್ನಕ್ಕೆ. ಆಂಗ್ಲ ಭಾಷೆಯಲ್ಲಿ 'ಎಕ್ಯುಮೆನಿಸಂ' ಎಂದೆನ್ನುವರು. ಈ ದಿಸೆಯಲ್ಲಿ ಪ್ರಯತ್ನಗಳಾಗಿವೆ. ಆದರೆ ಫಲಿತಾಂಶ ಮಾತ್ರ ದೊರೆತಿಲ್ಲ ಹಾಗೂ ಸಕಾರಾತ್ಮಕ

ಫಲಿತಾಂಶಗಳು ದೊರೆಯುವ ಸಾಧ್ಯತೆಗಳು ಬಹಳ ಕಡಿಮೆಯಿದೆ.

ಇನ್ನು ಪ್ರತಿಯೊಂದು ಪಂಗಡಗಳಲ್ಲಿಯೂ ಒಳ ಪಂಗಡಗಳಿವೆ. ಭಾಷೆ, ಜಾತಿ, ಹಣ, ಹಳ್ಳಿಯವ ಪಟ್ಟಣಿಗ, ಮುಂದುವರೆದವ ದಲಿತ, ಇತ್ಯಾದಿಗಳ ಆಧಾರದಲ್ಲಿ ಅಸಮಾನತೆಯಿದೆ. ಈ ಪಂಗಡಗಳ ನಡುವೆ ಸಹಕಾರ ಮನೋಭಾವದ ಕೊರತೆಯೂ ಕಂಡು ಬರುತ್ತದೆ. ಸಮುದಾಯದ ಈ ರೀತಿಯ ಆಂತರಿಕ ಒಗ್ಗಟ್ಟಿನ ಕೊರತೆಯು ಅದರ ರಾಜಕೀಯ ಬದುಕಿನ ಮೇಲೆ ದುಷ್ಪರಿಣಾಮ ಬೀರುತ್ತದೆ. ಪ್ರತಿಯೊಂದು ಪಂಗಡಕ್ಕೂ ಪ್ರತ್ಯೇಕ ಪ್ರತ್ಯೇಕ ಸಂಘಟನೆಗಳಿವೆಯೇ ಹೊರತು ಎಲ್ಲಾ ಪಂಗಡಗಳನ್ನು ಪ್ರತಿನಿಧಿಸುವ ಒಂದು ಸಾಮಾನ್ಯ ವೇದಿಕೆಯ ಕೊರತೆಯಿದೆ. “ನಾವೆಲ್ಲ ಹಿಂದುಗಳು ನಾವೆಲ್ಲ ಒಂದೇ” ಎಂಬಂತಹ ಧ್ಯೇಯ ವಾಕ್ಯ ಕ್ರೈಸ್ತರಲ್ಲಿ ಕಂಡು ಬರುತ್ತಿಲ್ಲ. ಆದರೆ ಕಳೆದ ವರುಷ ನಡೆದ ಚರ್ಚ್ ಮೇಲಣ ದಾಳಿಯು ಕ್ರೈಸ್ತ ಸಮುದಾಯ ಒಗ್ಗೂಡಬೇಕಾದ ಅನಿವಾರ್ಯತೆಯನ್ನು ಎತ್ತಿ ತೋರಿಸಿದೆ. ಒಗ್ಗಟ್ಟಿನಲ್ಲಿ ಬಲವಿದೆ ಎಂಬ ಪಾಠವನ್ನು ಅದು ನೆನಪಿಸಿದೆ. ಆದರೆ ಇಲ್ಲಿನ ಕ್ರೈಸ್ತ ಸಮುದಾಯವು ಏಕತೆಯನ್ನು ಸಾಧಿಸುವ ನಿಟ್ಟಿನಲ್ಲಿ ಹೆಚ್ಚೇನೂ ಸಾಧಿಸಿದಂತೆ ಕಾಣಿಸುತ್ತಿಲ್ಲವಾಗಿದೆ. ಈ ಏಕತೆಯ ಕೊರತೆಯು ಇನ್ನು ಮುಂದೆಯೂ ಕ್ರೈಸ್ತರ ರಾಜಕೀಯ ಬದುಕಿನ ಮೇಲೆ ನಕಾರಾತ್ಮಕವಾಗಿ ಬಾಧಿಸಬಹುದಾಗಿದೆ.

ಈ ಜಿಲ್ಲೆಯ ಕ್ರೈಸ್ತ ಸಮುದಾಯದ ಸುಮಾರು ಅರ್ಧದಷ್ಟು ಜನ ನಗರ/ಪಟ್ಟಣ ಪ್ರದೇಶಗಳಲ್ಲಿ ವಾಸವಾಗಿರುತ್ತಾರೆ. ಅವರಲ್ಲಿ ಸಾಕಷ್ಟು ಜನ ವಿದ್ಯಾವಂತರು, ನೌಕರಿಗಳಲ್ಲಿ ಇರುವವರು ಇದ್ದಾರೆ. ಇವರಿಗೆ ರಾಜಕೀಯದಲ್ಲಿ ಹೆಚ್ಚಿಗೆ ಆಸಕ್ತಿ ಇಲ್ಲದಿರುವುದು ಕಂಡು ಬರುತ್ತದೆ. ರಾಜಕೀಯ ನಮಗೆ ಅಗತ್ಯವಿಲ್ಲವೆಂದು ರಾಜಕೀಯ ಪ್ರಕ್ರಿಯೆಗಳಾದ ಮತದಾನ ಇತ್ಯಾದಿಗಳಲ್ಲಿ ಭಾಗವಹಿಸುವಿಕೆಗೆ ಆಸಕ್ತಿ ತೋರುತ್ತಿರಲಿಲ್ಲ. ಆದರೆ ಚರ್ಚ್ ಮೇಲಣ ದಾಳಿಯ ನಂತರ ಅವರ ಮತದಾನದ ಪ್ರಮಾಣದಲ್ಲಿ ಹೆಚ್ಚಳವಾದುದು ಕಂಡುಬರುತ್ತದೆ.

ಹೀಗೆ ಪಂಗಡಗಳ ಒಳಗಡೆ ಒಳಪಂಗಡಗಳು ಇರುತ್ತವೋ ಅದೇ ತೆರನಾಗಿ ಈ ಒಳಪಂಗಡಗಳೊಳಗೆ ಗುಂಪುಗಾರಿಕೆಗಳು ಇರುತ್ತದೆ. ಇಲ್ಲಿ ರಾಜಕೀಯದೊಳಗೆ ರಾಜಕೀಯ ನಡೆಯುತ್ತದೆ. ಹೀಗೆ ಆಂತರಿಕ ಕಚ್ಚಾಟಗಳು ಸಮುದಾಯದ ರಾಜಕೀಯ ಬೆಳವಣಿಗೆಗೆ ತೊಡಕನ್ನುಂಟುಮಾಡಿವೆ. ಕೆಲವೊಮ್ಮೆ ಚುನಾವಣೆಗಳಲ್ಲಿ ಕ್ರೈಸ್ತ ಅಭ್ಯರ್ಥಿಗಳ ಸೋಲಿಗೂ ಗುಂಪುಗಾರಿಕೆ ದಾರಿಮಾಡಿಕೊಟ್ಟ ದೃಷ್ಟಾಂತಗಳು ಸಿಗುತ್ತವೆ. ಒಟ್ಟಾರೆಯಾಗಿ ಈ ರೀತಿಯ ಬೆಳವಣಿಗೆಗಳು ಕ್ರೈಸ್ತರ ಸಕ್ರಿಯ ರಾಜಕೀಯ ಭಾಗವಹಿಸುವಿಕೆಯ ಮೇಲೆ ದುಷ್ಪರಿಣಾಮ ಬೀರುತ್ತದೆಯೆಂದು ಹೇಳಬಹುದು.

**೫.೩. ಕ್ರೈಸ್ತ ಮತದಾರರು ಹಂಚಿ ಹರಡಿ ಹೋಗಿರುವುದು**

ಕ್ರೈಸ್ತರ ಸಕ್ರಿಯ ರಾಜಕೀಯ ಭಾಗವಹಿಸುವಿಕೆಗೆ ಅಡ್ಡಿಯಾಗಿರುವ ಇನ್ನೊಂದು ಸಮಸ್ಯೆಯೆಂದರೆ, ಕ್ರೈಸ್ತರು ಕೇವಲ ಅಲ್ಪಸಂಖ್ಯಾತ ಸಮುದಾಯವಾಗಿರುವುದಲ್ಲದೆ ಅವರು ಜಿಲ್ಲೆಯಾದ್ಯಂತ ಹಂಚಿ ಹರಡಿ ಹೋಗಿರುತ್ತಾರೆ. ಕ್ರೈಸ್ತರು ಇತರ ಸಮುದಾಯಗಳಂತೆ ಒಂದೇ ರಾಜ್ಯ/ ಪ್ರದೇಶದ ವ್ಯಾಪ್ತಿಗೆ ಅವರ ವಾಸ್ತವ್ಯ ಸೀಮಿತಗೊಂಡಿಲ್ಲ. ಎಲ್ಲಾ ಚುನಾವಣಾ ಕ್ಷೇತ್ರಗಳಲ್ಲೂ ಅವರು ಕಂಡುಬರುತ್ತಾರೆ. ಆದರೆ ಯಾವುದೇ ಚುನಾವಣಾ ಕ್ಷೇತ್ರಕ್ಕೆ ಸೀಮಿತವಾಗಿ ಅವರು ವಾಸಿಸುತ್ತಿಲ್ಲ. ಜಿಲ್ಲೆಯ ಮಟ್ಟಿಗೆ ಹೇಳುವುದಾದರೆ, ಮಂಗಳೂರು ದಕ್ಷಿಣ ವಿಧಾನ ಸಭಾ ಕ್ಷೇತ್ರವನ್ನು ಹೊರತು ಪಡಿಸಿದಂತೆ ಕ್ರೈಸ್ತ ಮತದಾರರು ಇತರ ಕ್ಷೇತ್ರಗಳಲ್ಲಿ ಚುನಾವಣಾ ಫಲಿತಾಂಶಗಳ ಮೇಲೆ ಸ್ವಂತ ಬಲದಲ್ಲಿ ನಿರ್ಣಾಯಾತ್ಮಕವಾದ ಪ್ರಭಾವ ಬೀರುವುದು ಸಾಧ್ಯವಿಲ್ಲವಾಗಿದೆ. ಈ ವಿಚಾರ ಕ್ರೈಸ್ತರ ರಾಜಕೀಯ ಭಾಗವಹಿಸುವಿಕೆಗೆ ಉತ್ತೇಜನಕಾರಿಯಾಗಿ ಕಂಡು ಬರುತ್ತಿಲ್ಲ.

### ೫.೪ ಜಾತಿ ಲೆಕ್ಕಚಾರದ ರಾಜಕಾರಣ

ಜಾತಿ ಆಧಾರಿತ ರಾಜಕಾರಣ ರಾಜಕೀಯದ ತೆರೆಯ ಮರೆಯಲ್ಲಿ ಇನ್ನೂ ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿರುವುದನ್ನು ಕಂಡುಕೊಳ್ಳಬಹುದಾಗಿದೆ. ಸಂವಿಧಾನವು ಜಾತಿಯ ನೆಲೆಯಲ್ಲಿ ರಾಜಕಾರಣ ಮಾಡುವುದನ್ನು ನಿಷೇಧಿಸಿದರೂ ಸಹ ರಾಜಕೀಯದಲ್ಲಿ ಜಾತಿಯು ತನ್ನ ಪ್ರಭಾವವನ್ನು ಪರೋಕ್ಷವಾಗಿ ಉಳಿಸಿಕೊಂಡಿದೆ. ಪ್ರಬಲ/ ಪ್ರಭಾವೀ ಜಾತಿಗಳ ಹಿನ್ನಲೆಯಿಂದ ಬಂದಂತಹ ಅಭ್ಯರ್ಥಿಗಳನ್ನೇ ರಾಜಕೀಯ ಪಕ್ಷಗಳು ಆಯ್ಕೆ ಮಾಡುವಂತಹ ವಿಚಾರ ಈಗ ರಹಸ್ಯವಾಗಿ ಉಳಿದಿಲ್ಲ. ಪ್ರಭಾವಿ ಜಾತಿಗಳನ್ನೇ ರಾಜಕೀಯ ಬಂಡವಾಳವಾಗಿಟ್ಟುಕೊಂಡು ರೂಪಿಸಲ್ಪಟ್ಟ ಪಕ್ಷಗಳು ಈ ರಾಜ್ಯ/ ರಾಷ್ಟ್ರದಲ್ಲಿ ಕಾಣಬರುತ್ತವೆ. ಕರ್ನಾಟಕದ ರಾಜಕಾರಣದಲ್ಲಿ ಪ್ರಬಲ ಕೋಮುಗಳಾದ ಒಕ್ಕಲಿಗರು ಮತ್ತು ಲಿಂಗಾಯತರು ನಿರ್ಣಾಯಕ ಪಾತ್ರವನ್ನು ವಹಿಸಿದ ರೀತಿಯಲ್ಲಿ ಬಿಲ್ಲವರು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಒಂದು ಪ್ರಭಾವಿ ಜಾತಿಯಾಗಿದ್ದು ಇಲ್ಲಿನ ರಾಜಕಾರಣದಲ್ಲಿ ಅದರ ಹಿಡಿತ ವೆಷ್ಟಿದೆಯೆಂಬುದು ಎಲ್ಲರಿಗೂ ಗೊತ್ತಿದೆ. ಜಾತೀಯತೆ ಮತ್ತು ರಾಜಕಾರಣದ ಕುರಿತು ಬೇಕಾದಷ್ಟು ಅಧ್ಯಯನಗಳನ್ನು ರಜನಿ ಕೊಥಾರಿ ಮತ್ತಿತರರುಗಳು ಮಾಡಿರುವುದು ಕಂಡುಬರುತ್ತದೆ.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮುಖ್ಯ ವಾಹಿನಿಯ ಪಕ್ಷಗಳನ್ನೂ ಸೇರಿಸಿ ಎಲ್ಲಾ ರಾಜಕೀಯ ಪಕ್ಷಗಳು ಚುನಾವಣಾಕಣಕ್ಕೆ ಅಭ್ಯರ್ಥಿಗಳನ್ನು ಜಾತಿ ಲೆಕ್ಕಾಚಾರದ ಆಧಾರದಲ್ಲಿ ಆಯುವುದನ್ನು ಕಾಣಬಹುದಾಗಿದೆ. ಜಾತಿಯ ಆಧಾರದಲ್ಲಿ ಅಭ್ಯರ್ಥಿಗಳ ಗೆಲ್ಲುವ ಸಾಧ್ಯತೆಯನ್ನು ಲೆಕ್ಕಾಚಾರ ಮಾಡುತ್ತಾರೆ. ಅಪರೂಪಕ್ಕೊಮ್ಮೆ ಈ ಜಾತಿಯ ಲೆಕ್ಕಾಚಾರ ಕೈಕೊಟ್ಟರೂ ಹೆಚ್ಚಿನ ಸಂಧರ್ಭಗಳಲ್ಲಿ ಅದು ಯಶಸ್ಸನ್ನು ಈ ಜಿಲ್ಲೆಯ ಚುನಾವಣೆಗಳಲ್ಲಿ ತಂದುಕೊಟ್ಟದ್ದನ್ನು ಈ ಹಿಂದೆ ಕಂಡಿದ್ದೇವೆ.

ಈ ರೀತಿ ಜಾತಿಯ ಆಧಾರದಲ್ಲಿ ಪಕ್ಷಗಳು ಚುನಾವಣೆಗೆ ಅಭ್ಯರ್ಥಿಗಳನ್ನು ಆಯುವುದರಿಂದಾಗಿ ಅಲ್ಪ ಸಂಖ್ಯಾತ ಸಮುದಾಯವಾದ ಕ್ರೈಸ್ತರಿಗೆ ಅನ್ಯಾಯವಾಗಿದೆ.

ಉದಾಹರಣೆಗೆ ಮಂಗಳೂರು ಲೋಕಸಭಾ ಚುನಾವಣಾ ಕ್ಷೇತ್ರದಿಂದ ಪ್ರಮುಖ ಪಕ್ಷಗಳಾದ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಮತ್ತು ಭಾರತೀಯ ಜನತಾ ಪಕ್ಷದ ವತಿಯಿಂದ ೧೯೫೨ ರಿಂದ ೨೦೦೯ರ ತನಕದ ೧೫ ಸಾರ್ವತ್ರಿಕ ಚುನಾವಣೆಗಳಲ್ಲಿ ಕ್ರೈಸ್ತರನ್ನು ಅಭ್ಯರ್ಥಿಯಾಗಿ ಆಯ್ಕೆ ಮಾಡಿಯೇ ಇಲ್ಲ ಮತ್ತು ಮಡಿದ ಉದಾಹರಣೆಗಳಿಲ್ಲ. ಈ ಎರಡು ಪಕ್ಷಗಳನ್ನು ಹೊರತು ಪಡಿಸಿ ಮೂರನೆಯ ಪಕ್ಷದ ಅಭ್ಯರ್ಥಿ ಈ ಕ್ಷೇತ್ರದಿಂದ ಇಷ್ಟರವರೆಗೆ ಆರಿಸಿ ಬಂದಿಲ್ಲ. ಪಕ್ಷೇತರ ಅಭ್ಯರ್ಥಿಗಳು ಈ ಕ್ಷೇತ್ರದಿಂದ ಲೋಕ ಸಭೆಗೆ ಸ್ಪರ್ಧಿಸಿ ಗೆದ್ದ ಉದಾಹರಣೆಯೇ ಇಲ್ಲ. ಹೀಗೆ ಜಾತಿ ಆಧಾರಿತ ರಾಜಕಾರಣ ಕ್ರೈಸ್ತ ಸಮುದಾಯದ ರಾಜಕೀಯ ಭವಿಷ್ಯಕ್ಕೆ ಮುಳುವಾಗಿದೆಯೆಂದರೆ ತಪ್ಪಾಗಲಾರದು.

### ೫.೫. ಜಿಲ್ಲೆಯಲ್ಲಿ ಸಂಭವಿಸುತ್ತಿರುವ ಕೋಮುಧ್ರುವೀಕರಣ

ಕ್ರೈಸ್ತರ ರಾಜಕೀಯ ಭಾಗವಹಿಸುವಿಕೆ ಮತ್ತು ರಾಜಕೀಯ ಪ್ರಾತಿನಿಧ್ಯತೆಗೆ ಕೋಮುವಾದ ಒಂದು ದೊಡ್ಡ ಸವಾಲಾಗಿ ಪರಿಣಮಿಸಿದೆ. ಅದರಲ್ಲೂ ಮುಖ್ಯವಾಗಿ ಕರ್ನಾಟಕದಲ್ಲೂ ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ವಿಶೇಷವಾಗಿ ಈ ಸಮಸ್ಯೆ ಕಂಡು ಬರುತ್ತದೆ. ಸಂವಿಧಾನ ಈ ದೇಶದಲ್ಲಿ ಒಂದು ಧರ್ಮನಿರಪೇಕ್ಷ ರಾಷ್ಟ್ರದ ಸ್ಥಾಪನೆಗೆ ಅವಕಾಶ ಕಲ್ಪಿಸಿ ಕೊಟ್ಟಿತು. ೧೯೫೦ ರಿಂದ ಸುಮಾರು ೧೯೯೦ ತನಕ ನಮ್ಮಲ್ಲಿ ಸೆಕ್ಯೂಲರ್ ವ್ಯವಸ್ಥೆ ಭದ್ರವಾಗಿತ್ತು. ನಂತರದ ದಿನಗಳಲ್ಲಿ ಧರ್ಮ ನಿರಪೇಕ್ಷತೆ ಕೇವಲ ಸಿದ್ಧಾಂತದಲ್ಲಿ ಮಾತ್ರವಿದೆ ಆಚರಣೆಯಲ್ಲಿ ಅಷ್ಟಾಗಿ ಕಂಡು ಬರುತ್ತಿಲ್ಲ. ಕೋಮು ಶಕ್ತಿಗಳು ಜನರ ಧಾರ್ಮಿಕ ಭಾವನೆಗಳನ್ನು ಕೆರಳಿಸಿ ರಾಜಕೀಯ ಲಾಭಗಳಿಸುವ ಪ್ರಯತ್ನ ಮಾಡಿತು. ಕೋಮು ನೆಲೆಯಲ್ಲಿ ಸಮಾಜ ಒಡೆಯುವಂತಹ ಕೆಲಸ ನಿರಂತರವಾಗಿ ನಡೆಯುತ್ತಿರುವುದು ಮಾಧ್ಯಮಗಳಲ್ಲಿ ವರದಿಯಾಗಿವೆ. ರಾಷ್ಟ್ರದಾದ್ಯಂತ ನಡೆದ ಬೆಳವಣೆಗೆಗಳು ದಕ್ಷಿಣ ಕನ್ನಡ ಜಿಲ್ಲೆಯನ್ನೂ ಬಿಡಲಿಲ್ಲ. ಕೋಮು ವೈಷಮ್ಯವು ಈ ಜಿಲ್ಲೆಯಲ್ಲಿ ಪ್ರಮುಖ

ಸವಾಲುಗಳಲ್ಲೊಂದಾಗಿದೆ. ಧಾರ್ಮಿಕ ನೆಲೆಯಲ್ಲಿ ಕೋಮುಧ್ರುವೀಕರಣಗೊಂಡಿರುವುದು ಅಲ್ಪ ಸಂಖ್ಯಾತ ಮತ್ತು ಬಹುಸಂಖ್ಯಾತರ ನಡುವೆ ಅಂತರ ಹೆಚ್ಚಿರುವುದರ ಕುರಿತೂ ಮಾಧ್ಯಮಗಳು ವರದಿ ಮಾಡಿವೆ. ೧೯೯೧ ರಿಂದ ಈಚೆಗೆ ಮಂಗಳೂರು ಲೋಕ ಸಭಾ ಕ್ಷೇತ್ರದಿಂದ ನಡೆದ ಕಳೆದ ಆರು ಚುನಾವಣೆಗಳಲ್ಲಿ ಬಾರತೀಯ ಜನತಾ ಪಕ್ಷದ ಅಭ್ಯರ್ಥಿಗಳು ಗೆದ್ದು ಬರುತ್ತಿರುವುದು ಅದೂ ಸಹ ಚುನಾವಣೆಯಿಂದ ಚುನಾವಣೆಗೆ ದೊಡ್ಡ ಅಂತರದಲ್ಲಿ ಗೆದ್ದು ಬರುತ್ತಿರುವುದು ಇದಕ್ಕೆ ನಿದರ್ಶನ. ಇತ್ತೀಚೆಗಿನವರೆಗೆ ಜಿಲ್ಲೆಯಲ್ಲಿ ಕೇವಲ ಹಿಂದೂ ಮುಸ್ಲಿಂ ಕೋಮು ಗಲಭೆಗಳು ವರದಿಗಳನ್ನು ಮಾತ್ರ ಮಾಧ್ಯಮಗಳಲ್ಲಿ ಕಾಣಬರುತ್ತಿತ್ತು. ೨೦೦೮ ಸೆಪ್ಟೆಂಬರ್ ನಲ್ಲಿ ಮತಾಂತರದ ಹೆಸರಿನಲ್ಲಿ ಚರ್ಚ್ ಮೇಲಣ ದಾಳಿಗಳು ಜಿಲ್ಲೆಯ ಕೋಮು ಸಾಮರಸ್ಯವನ್ನು ಹದಗೆಡಿಸುವಲ್ಲಿ ಹೊಸ ದೃಷ್ಟಾಂತವಾಗಿದೆ.

ಚರ್ಚ್ ಮೇಲಣ ದಾಳಿಗಳು ಜಿಲ್ಲೆಯ ಕ್ರೈಸ್ತ ಸಮುದಾಯದ ಅಭದ್ರತೆಯ ಭಾವನೆಯನ್ನು ಮತ್ತಷ್ಟು ಹೆಚ್ಚಿಸಿದೆ. ಕ್ರೈಸ್ತರು ಜಿಲ್ಲೆಯಲ್ಲಿ ಭೀತಿಯಿಂದ ಬದುಕಬೇಕಾದ ವಾತಾವರಣದ ಸೃಷ್ಟಿಯಾಗಿದೆ. ಈ ತೆರನಾದ ಭೀತಿ ಹಾಗೂ ಅಭದ್ರತೆಯ ವಾತಾವರಣವು ಕ್ರೈಸ್ತರ ರಾಜಕೀಯ ಬದುಕು ಭಾಗವಹಿಸುವಿಕೆಗೆ ಸವಾಲಾಗಿದೆ. ಕೇಂದ್ರದಲ್ಲಿ ಕಾಂಗ್ರೆಸ್ ಸರಕಾರಗಳಿದ್ದಾಗ, ಮೊರಾರ್ಜಿ ಸರಕಾರ ಬಂದಾಗಲೂ ಅಷ್ಟೇ ಏಕೆ ವಾಜಪೇಯಿ ನೇತೃತ್ವದ ರಾಷ್ಟ್ರೀಯ ಪ್ರಜಾಸತ್ತಾತ್ಮಕ ರಂಗ ಅಧಿಕಾರದಲ್ಲಿದ್ದಾಗಲೂ ಸೆಕ್ಯೂಲರ್ ವ್ಯವಸ್ಥೆಗೆ ಅಷ್ಟೊಂದು ಪೆಟ್ಟು ಬಿದ್ದಿರಲಿಲ್ಲ. ಇತ್ತೀಚೆಗಿನ ಬೆಳವಣಿಗೆಗಳಲ್ಲಿ ಕರ್ನಾಟಕದಲ್ಲಿ ಹಾಗೂ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಚರ್ಚ್‌ದಾಳಿಗಳು ನಿರಂತರವಾಗಿ ನಡೆಯುತ್ತಿರುವುದನ್ನು ಸಮೂಹ ಮಾಧ್ಯಮಗಳು ಸಾಕ್ಷೀಕರಿಸಿದೆ.

ಯಾವಾಗ ಧರ್ಮವನ್ನು ರಾಜಕೀಯಕ್ಕೆ ಎಳೆದು ತರಲಾಗುತ್ತದೋ ಆಗ ಧರ್ಮನಿರಪೇಕ್ಷ ರಾಷ್ಟ್ರದ ಕಲ್ಪನೆಗೆ ಚ್ಯುತಿ ಬರುತ್ತದೆ. ಭಾರತದಂತಹ ಅನೇಕ ಮತ ಧರ್ಮಗಳ ಜನರು ಇರುವಂತಹ ರಾಷ್ಟ್ರಗಳಲ್ಲಿ ಸರ್ವಧರ್ಮ ಸಮಭಾವ ಅದರಲ್ಲೂ

ಮುಖ್ಯವಾಗಿ ಮತಕೋಸ್ಕರ ಜನರ ಧಾರ್ಮಿಕ ಭಾವನೆಗಳನ್ನು ಬಳಸುವುದು ಸಂವಿಧಾನಬಾಹಿರವಾಗುತ್ತದೆ. ಆಗ ಪ್ರಜಾಪ್ರಭುತ್ವದ ಅರ್ಥಪೂರ್ಣ ಆಚರಣೆ ಅಸಾಧ್ಯವೆನಿಸಬಹುದು. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಸಮಾಜದ ಎಲ್ಲಾ ವರ್ಗಗಳ ಸಮಾನ ಪ್ರಾತಿನಿಧ್ಯತೆಗೆ/ ಪಾಲ್ಗೊಳ್ಳುವಿಕೆಗೆ ಅವಕಾಶ ವಂಚಿತವಾಗದಂತೆ ಎಚ್ಚರ ವಹಿಸಬೇಕಿದೆ. ಆಗ ಮಾತ್ರ ನಿಜವಾದ ಪ್ರಜಾಪ್ರಭುತ್ವ ಸಾಧ್ಯವೆನಿಸಬಹುದು.

## ೫.೬. **ಕ್ರೈಸ್ತರ ಧಾರ್ಮಿಕ ಮನೋಭಾವ ಮತ್ತು ನಂಬಿಕೆಗಳು**

ಕ್ರೈಸ್ತರ ಧಾರ್ಮಿಕ ಮನೋಭಾವ ಮತ್ತು ನಂಬಿಕೆಗಳೂ ಕ್ರೈಸ್ತರ ರಾಜಕೀಯ ಭಾಗವಹಿಸುವಿಕೆಗೆ ಸಣ್ಣ ಪ್ರಮಾಣದಲ್ಲಿ ತೊಡಕನ್ನುಂಟು ಮಾಡುತ್ತದೆಂದು ಅಭಿಪ್ರಾಯಗಳು ವ್ಯಕ್ತವಾಗಿದೆ. ಭಾರತದಲ್ಲಿ ಕ್ರೈಸ್ತರು ಹೆಚ್ಚಾಗಿ ಸಾಂಪ್ರದಾಯಿಕ ಮನೋಭಾವದವರಾಗಿದ್ದಾರೆ. ಕ್ರೈಸ್ತರಿಗೆ ಇಹಲೋಕದ ಅಧಿಕಾರ ಬದುಕುಗಳಿಗಿಂತ ಪರಲೋಕ (ಸ್ವರ್ಗ) ಪ್ರಾಪ್ತಿಯೇ ಮುಖ್ಯವಾಗಿದೆ. "ಇಹಲೋಕದ ಬದುಕು ನಶ್ವರ ಪರಲೋಕ ಶಾಶ್ವತವಾದುದಾಗಿದೆ". ಈ ರೀತಿಯ ಸಾಂಪ್ರದಾಯಿಕ ಮನೋಭಾವ, ರಾಜಕಾರಣವನ್ನು ಪಾಪಮಯವಾದುದೆಂದು ತಿರಸ್ಕಾರ ಯೋಗ್ಯವಾದುದೆಂದೂ ಪರಿಗಣಿಸಲಾಗಿತ್ತು. ಆದಕಾರಣ ರಾಜಕೀಯ ಭಾಗವಹಿಸುವಿಕೆಗೆ ಕ್ರೈಸ್ತರ ಬದುಕಿನಲ್ಲಿ ಆದ್ಯತೆಯನ್ನು ಹೊಂದಿಲ್ಲ ರಾಜಕಾರಣವು ಇಹಲೋಕಕ್ಕೆ ಸಂಬಂಧಿಸಿದ ವಿಚಾರ ಮತ್ತು ದ್ವಿತೀಯ ಪ್ರಾಶಸ್ತ್ಯತೆಯನ್ನು ಪಡೆದಿದೆ. ಪರಲೋಕ ಸಿದ್ಧಿಗಾಗಿರುವ ಕಾರ್ಯಗಳಿಗೆ ಪ್ರಥಮ ಪ್ರಾಶಸ್ತ್ಯತೆ ಕೊಡಲಾಗಿದೆ. ಆದರೆ ಇತ್ತೀಚೆಗಿನ ದಿನಗಳಲ್ಲಿ ಕ್ರೈಸ್ತರು ಈ ರೀತಿಯ ಸಾಂಪ್ರದಾಯಿಕ ಮನೋಭಾವದಿಂದ ಸಂಪೂರ್ಣವಲ್ಲದಿದ್ದರೂ ಆಂಶಿಕವಾಗಿಯಾದರೂ ಹೊರಬಂದಿರುವುದು ಕಂಡುಬರುತ್ತದೆ.

ಮುಂದಿನ ಅಧ್ಯಾಯದಲ್ಲಿ ಈ ಅಧ್ಯಯನದಿಂದ ಹೊರಬಂದಿರುವ ಪ್ರಮುಖ ಅಂಶಗಳನ್ನು ಪಟ್ಟಿ ಮಾಡಲಾಗುವುದು.

# ಅಧ್ಯಾಯ – ೬

# ಅಧ್ಯಯನದ ಫಲಿತಗಳು

ಹಿಂದಿನ ಅಧ್ಯಾಯಗಳ ಅಧ್ಯಯನದ ಆಧಾರದಲ್ಲಿ ಸಾರಾಂಶ/ಫಲಿತಗಳನ್ನು ಕೊನೆಯಲ್ಲಿ ನೀಡಲಾಗಿರುತ್ತದೆ. ಇಲ್ಲಿ ಕ್ರೈಸ್ತ ಸಮುದಾಯದ ರಾಜಕೀಯ ಭಾಗವಹಿಸುವಿಕೆಯ ಮಟ್ಟದ ಕುರಿತು ಶೋಧಿಸುವ ಪ್ರಯತ್ನವನ್ನು ಮಾಡಲಾಗಿದೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕ್ರೈಸ್ತ ಸಮುದಾಯದ ಸಂಖ್ಯಾವಾರು ಪ್ರಮಾಣಕ್ಕನುಗುಣವಾಗಿ ಲಭಿಸಬೇಕಾಗಿದ್ದ ರಾಜಕೀಯ ಪ್ರಾತಿನಿಧ್ಯತೆಯಲ್ಲಿ ಕೊರತೆಯಿದೆ ಎನ್ನುವುದು ಅಧ್ಯಯನದಿಂದ ಹೊರಬಂದಿರುವ ಅಂಶವಾಗಿದೆ ಹಾಗೂ ಕ್ರೈಸ್ತರು ಮತದಾನದ ಪ್ರಕ್ರಿಯೆಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದರೂ ವಿವಿಧ ರಾಜಕೀಯ ವ್ಯವಸ್ಥೆಗಳಲ್ಲಿ ಪ್ರಾತಿನಿಧ್ಯತೆಯ ಪ್ರಮಾಣ ಇಳಿಕೆಯಾಗಿದೆ. ಇವುಗಳು ಅಧ್ಯಯನ ಊಹೆಗಳಿದ್ದವು ಮತ್ತು ಈ ಊಹೆಗಳನ್ನು ಕ್ಷೇತ್ರಾಧ್ಯಯನದ ಅನುಭವಗಳು ಸಾಕ್ಷೀಕರಿಸಿವೆ.

ಕ್ರೈಸ್ತರ ಜನಸಂಖ್ಯೆ ರಾಜ್ಯದಲ್ಲಿ ಶೇಕಡ ೨ ರಷ್ಟಿದೆ. ವಿಧಾನಸಭೆಯಲ್ಲಿ ಅವರಿಗೆ ಶೇಕಡ ೨ ರಷ್ಟು ಸ್ಥಾನಗಳು ಲಭಿಸಬೇಕಿತ್ತು. ಕಡಿಮೆಯೆಂದರೆ ಎಂಟು ಸ್ಥಾನಗಳಾದರೂ ಲಭಿಸಬೇಕಿತ್ತು. ಆದರೆ ವಿಧಾನಸಭೆಯಲ್ಲಿ ಕೇವಲ ಒಂದು ಸ್ಥಾನ ಮಾತ್ರ ಲಭಿಸಿದೆ. ಅದೇ ರೀತಿಯಲ್ಲಿ ಈ ಜಿಲ್ಲೆಯಲ್ಲಿ ಸುಮಾರು ಮೂರು ಲಕ್ಷಕ್ಕಿಂತ ಮಿಕ್ಕಿ ಜನಸಂಖ್ಯೆಯಿರುವಂತಹ ಕ್ರೈಸ್ತ ಸಮುದಾಯಕ್ಕೆ ಕನಿಷ್ಟ ಎರಡು ವಿಧಾನಸಭಾ ಸ್ಥಾನಗಳಾದರೂ ಲಭಿಸಬೇಕಿತ್ತು. ಆದರೆ ಕಳೆದ ಎರಡು ದಶಕಗಳಿಂದೀಚೆಗೆ ಒಬ್ಬನೆ ಒಬ್ಬ ಶಾಸಕ ಕ್ರೈಸ್ತ ಸಮುದಾಯದಿಂದ ವಿಧಾನಸಭೆಗೆ ಆಯ್ಕೆಯಾಗಿಲ್ಲ.

ಅದೇ ರೀತಿಯಲ್ಲಿ ಮಂಗಳೂರು ಲೋಕಸಭಾ ಕ್ಷೇತ್ರದಿಂದ ಲೋಕಸಭೆಗೆ ನಡೆದ ಕಳೆದ ಹದಿನೈದು ಸಾರ್ವತ್ರಿಕ ಚುನಾವಣೆಗಳಲ್ಲಿ ಯಾವನೇ ಒಬ್ಬ ಕ್ರೈಸ್ತ ಸಂಸದ ಈ ಕ್ಷೇತ್ರವನ್ನು ಪ್ರತಿನಿಧಿಸಿಲ್ಲ. ರಾಷ್ಟ್ರೀಯ ಪಕ್ಷಗಳಾದ ಕಾಂಗ್ರೆಸ್ ಮತ್ತು ಭಾರತೀಯ ಜನತಾ ಪಕ್ಷಗಳೆರಡೂ ಕ್ರೈಸ್ತ ಅಭ್ಯರ್ಥಿಗಳನ್ನು ತಮ್ಮ ಪಕ್ಷಗಳ ವತಿಯಿಂದ ಚುನಾವಣಾ ಸ್ಪರ್ಧಾಕಣಕ್ಕಿಳಿಸಿಲ್ಲ. ಆದರೆ ಕ್ರೈಸ್ತರು ಪಕ್ಷೇತರ ಅಭ್ಯರ್ಥಿಗಳಾಗಿ ಸ್ಪರ್ಧಿಸಿ ಸೋತಿರುತ್ತಾರೆ.

ಇನ್ನು, ಚುನಾವಣೆಯಿಂದ ಚುನಾವಣೆಗೆ ಕ್ರೈಸ್ತರ ಪ್ರಾತಿನಿಧ್ಯ ಜಿಲ್ಲಾ, ತಾಲೂಕು ಹಾಗೂ ಸ್ಥಳೀಯ ಮಟ್ಟದ ಸರಕಾರಗಳಲ್ಲಿ ಇಳಿಕೆಯಾಗಿರುವುದು ಮೂರನೆಯ ಅಧ್ಯಾಯದ ಅಂಕಿ ಅಂಶಗಳಿಂದ ಪುಷ್ಟೀಕರಿಸಲ್ಪಟ್ಟಿದೆ. ರಾಜಕೀಯ ಭಾಗವಹಿಸುವಿಕೆಯಲ್ಲಿ ಸುಮಾರು ಎರಡು ದಶಕಗಳ ಹಿಂದೆ ಸ್ವಲ್ಪ ಮಟ್ಟಿಗೆ ವಿಧಾನಸಭೆಯಲ್ಲಿ, ಕರ್ನಾಟಕ ಸರಕಾರದ ಮಂತ್ರಿ ಮಂಡಲದಲ್ಲಿ ಕ್ರೈಸ್ತ ಪ್ರತಿನಿಧಿಗಳು ಈ ಜಿಲ್ಲೆಯಿಂದ ಇರುತ್ತಿದ್ದರು, ಆದರೆ ಎರಡು ದಶಕಗಳಿಗಿಂತ ಹಿಂದೆ ಎಂಬುವುದು ಮುಖ್ಯ. ೧೯೯೦ರಿಂದೀಚೆಗೆ ಜಿಲ್ಲೆಯಲ್ಲಿ ಕೋಮುಧ್ರುವೀಕರಣ ಪ್ರಾರಂಭಗೊಂಡ ನಂತರ ಕ್ರೈಸ್ತರ ರಾಜಕೀಯ ಭವಿಷ್ಯ ಮತ್ತಷ್ಟು ಚಿಂತಾಜನಕವಾಗಿ ಪರಿಣಮಿಸಿದೆ. ಅದರ ಜತೆಗೆ ರಾಜಕೀಯ ಪಕ್ಷಗಳು ಅಭ್ಯರ್ಥಿಗಳನ್ನು ಆಯುವಾಗ ಮಾಡುವ ಜಾತಿ ಲೆಕ್ಕಾಚಾರ, ಕ್ರೈಸ್ತ ಸಮುದಾಯದಲ್ಲಿ ಕಂಡು ಬರುವ ಏಕತೆಯ ಕೊರತೆಗಳು ಕ್ರೈಸ್ತರ ರಾಜಕೀಯ ಭಾಗವಹಿಸುವಿಕೆಯು ಅಪಾಯದ ಮಟ್ಟಕ್ಕಿಳಿಯುವಂತೆ ಮಾಡಿದೆ. ಕ್ರೈಸ್ತರ ರಾಜಕೀಯ ಭಾಗವಹಿಸುವಿಕೆಯಲ್ಲಿ ಕಂಡು ಬಂದಂತಹ ಒಂದೇ ಒಂದು ಸಕಾರಾತ್ಮಕ (ಆಶಾದಾಯಕ) ಬೆಳವಣಿಗೆಯೆಂದರೆ ಇತ್ತೀಚೆಗಿನ ಸಾರ್ವತ್ರಿಕ ಚುನಾವಣೆಗಳಲ್ಲಿ (ಕ್ಷೇತ್ರ ಕಾರ್ಯಾಧಾರಿತ ಅಂಕಿ ಅಂಶಗಳ ಆಧಾರದಲ್ಲಿ) ಕ್ರೈಸ್ತರ ಮತದಾನದ ಪ್ರಮಾಣದಲ್ಲಿ ಏರಿಕೆಯಾಗಿರುವುದು ಕಂಡು ಬಂದಿದೆ. ಆದರೆ ಈ ಮತದಾನದ ಪ್ರಮಾಣದಲ್ಲಿ ಏರಿಕೆಗನುಸಾರ ಅವರ ರಾಜಕೀಯ ಪ್ರಾತಿನಿಧ್ಯತೆಯಲ್ಲಿ ಏರಿಕೆ ಕಂಡು ಬರುತ್ತಿಲ್ಲವಾಗಿದೆ.

ಕ್ರೈಸ್ತರ ರಾಜಕೀಯ ಬದುಕು ಭಾಗವಹಿಸುವಿಕೆಗೆ ಸಂಬಂಧಿಸಿದಂತೆ ಕ್ಷೇತ್ರ ಕಾರ್ಯಾಧಾರಿತ ಅಧ್ಯಯನದಿಂದ ಕಂಡುಕೊಳ್ಳಲಾದ ಇನ್ನಿತರ ಮುಖ್ಯ ಅಂಶಗಳು ಈ ಕೆಳಗಿನಂತಿವೆ.

- ಕ್ರೈಸ್ತರ ಲೋಕಸಭೆ ಮತ್ತು ವಿಧಾನ ಸಭೆಗಳಲ್ಲಿನ ಮತದಾನದ ಪ್ರಮಾಣಕ್ಕೆ ಹೋಲಿಸಿದಾಗ ಸ್ಥಳೀಯ ಸರಕಾರಗಳಿಗೆ ನಡೆದ ಚುನಾವಣೆಗಳಲ್ಲಿ ಅವರ ಮತದಾನದ ಪ್ರಮಾಣದಲ್ಲಿ ಕಡಿಮೆ ಕಂಡು ಬಂದಿದೆ. ಇದು ಕ್ರೈಸ್ತರಿಗೆ ಸ್ಥಳೀಯ ಸರಕಾರಗಳ ಪ್ರಕ್ರಿಯಗಳಲ್ಲಿ ಆಸಕ್ತಿ ಕಡಿಮೆಯೆಂದು ತೋರಿಸುತ್ತದೆ.

- ಕ್ರೈಸ್ತ ಪಂಗಡಗಳ ಪೈಕಿ ಕೊಂಕಣಿ ಭಾಷಿಗ ಕ್ರೈಸ್ತರ ರಾಜಕೀಯ ಪ್ರಾತಿನಿಧ್ಯ ಹಾಗೂ ಪಾಲುಗೊಳ್ಳುವಿಕೆ ಇತರ ಕ್ರೈಸ್ತ ಪಂಗಡಗಳಿಗಿಂತ ಉತ್ತಮವೆಂದು ಕಂಡು ಬರುತ್ತದೆ.
- ಕ್ರೈಸ್ತರು ಯಾವುದೇ ಪ್ರಕಾರದ ಹೋರಾಟ/ಪ್ರತಿಭಟನೆಗಳಲ್ಲಿ ಪಾಲುಗೊಳ್ಳುವ ಪ್ರಮಾಣ ಬಹಳ ಕಡಿಮೆಯಿದೆ.
- ಕ್ರೈಸ್ತರ ಒಲವು ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಪಕ್ಷದೆಡೆಗೆ ಇರುವುದು ಅಂಕಿ ಅಂಶಗಳು ಸಮರ್ಥಿಸುತ್ತದೆ. ಜಾತ್ಯಾತೀತ ಪಕ್ಷಗಳಿಗೆ ಕ್ರೈಸ್ತರು ಹೆಚ್ಚಾಗಿ ಬೆಂಬಲಿಸುತ್ತಾರೆಂದು ಅಧ್ಯಯನ ಸಾಬೀತು ಪಡಿಸಿದೆ.
- ಕ್ರೈಸ್ತ ಪೌರರುಗಳು ರಾಜಕೀಯ ಪಕ್ಷಗಳಲ್ಲಿ ಸಕ್ರಿಯ ಸದಸ್ಯರಾಗಿ ತೊಡಗಿಸಿಕೊಂಡವರ ಪ್ರಮಾಣ ಬಹಳಷ್ಟು ಕಡಿಮೆಯೆಂದು (೨.೬೩%) ಕಂಡು ಬರುತ್ತದೆ.
- ರಾಜಕೀಯ ಭಾಗವಹಿಸುವಿಕೆಯು ಅತ್ಯಂತ ಪ್ರಾಮುಖ್ಯವೆಂದು ಕ್ರೈಸ್ತರ ಅನಿಸಿಕೆಯಾಗಿದೆ. ಸಮೀಕ್ಷೆ ನಡೆಸಿದವರ ಪೈಕಿ ಶೇ. ೭೮.೯೪ ರಷ್ಟು ಇದನ್ನು ಒಪ್ಪಿಕೊಂಡಿದ್ದಾರೆ.
- ಸಕ್ರಿಯ ರಾಜಕಾರಣದಲ್ಲಿ ಧರ್ಮಸಭೆಯ (ಚರ್ಚ್‌ನ) ಪಾಲುಗೊಳ್ಳುವಿಕೆಯನ್ನು ಕ್ರೈಸ್ತರಲ್ಲಿ ಹೆಚ್ಚಿನವರು ಅಗತ್ಯವಿಲ್ಲವೆನ್ನುತ್ತಾರೆ.
- ಕ್ರೈಸ್ತ ನಂಬಿಕೆಗಳು ಹಾಗೂ ತತ್ವಗಳು ಕ್ರೈಸ್ತರ ರಾಜಕೀಯ ಬದುಕಿಗೆ ಪೂರಕವೆಂದು ಅಭಿಪ್ರಾಯ ಪಟ್ಟಿದ್ದಾರೆ. (ಶೇ. ೮೬.೮೪)
- ರಾಜಕಾರಣದಲ್ಲಿ ಧಾರ್ಮಿಕ ವಿಚಾರಗಳನ್ನು ಬೆರೆಸುವುದು ಉಚಿತವಲ್ಲವೆಂಬುದು ಕ್ರೈಸ್ತರ ಅಭಿಪ್ರಾಯ.
- ಕ್ರೈಸ್ತರಿಗೆ ಧಾರ್ಮಿಕ ನೆಲೆಯಲ್ಲಿ ಪ್ರತ್ಯೇಕವಾದ ಪಕ್ಷ ಸಂಘಟಿಸಿ ಚುನಾವಣೆಗಳಲ್ಲಿ ಸ್ಪರ್ಧಿಸುವಲ್ಲಿ ಆಸಕ್ತಿ ಕಡಿಮೆಯಿದೆ.
- ಜಿಲ್ಲೆಯಲ್ಲಿ ಕ್ರೈಸ್ತರು ರಾಜಕೀಯೇತರ ಕ್ಷೇತ್ರಗಳ ಅಭಿವೃದ್ಧಿಗೆ ಮಹತ್ತರ ಕೊಡುಗೆ ನೀಡಿರುವುದು ಕಂಡು ಬಂದಿದೆ. ಆದರೆ ಅದಕ್ಕನುಗುಣವಾಗಿ ಅವರಿಗೆ ರಾಜಕೀಯ ಅವಕಾಶಗಳು ಕಡಿಮೆ ಲಭಿಸುತ್ತಿವೆಯೆಂದು ಅಧ್ಯಯನದಿಂದ ದೃಢಪಟ್ಟಿದೆ.

ಇನ್ನು ಕ್ರೈಸ್ತರ ರಾಜಕೀಯ ಭಾಗವಹಿಸುವಿಕೆಯನ್ನು ಉತ್ತಮ ಪಡಿಸುವ ನಿಟ್ಟನಲ್ಲಿ ಅನೇಕ ಸಲಹೆಗಳನ್ನು ನೀಡಬಹುದಾಗಿದೆ.

- ಕ್ರೈಸ್ತರು ರಾಜಕೀಯ ಸಂಘ ಸಂಸ್ಥೆಗಳಲ್ಲಿ ಸಕ್ರಿಯವಾಗಿ ಭಾಗವಹಿಸಬೇಕು.
- ಪಂಚಾಯತ್ ಮಟ್ಟದಿಂದಲೇ ರಾಜಕೀಯ ಭಾಗವಹಿಸುವಿಕೆ ಮುಖಂಡತ್ವ ವಹಿಸುವುದನ್ನು ಪ್ರಾರಂಭಿಸಬೇಕು.
- ಮತದಾನಗಳಲ್ಲಿ ಸಕ್ರಿಯವಾಗಿ ಭಾಗವಹಿಸುವಂತಾಗಬೇಕು.
- ಒಳ್ಳೆಯದಾಗಿ ಕೆಲಸ ಮಾಡುವವರನ್ನು ಬೆಂಬಲಿಸಬೇಕು.
- ರಾಜಕೀಯ ಭಾಗವಹಿಸುವಿಕೆಯಲ್ಲಿ ಸರ್ವಧರ್ಮ ಸಮಭಾವವಿರಬೇಕು.
- ಜಾತ್ಯಾತೀತ ಪಕ್ಷಗಳಲ್ಲಿ ಗುರುತಿಸಿ ಕೊಳ್ಳುವುದು, ರಾಜಕೀಯ ಜೀವನದಲ್ಲಿ ಪಾರದರ್ಶಕತೆ ಜನ ನಾಯಕರಾಗಿ ಜನರ ಸೇವೆಯಲ್ಲಿ ತೊಡಗಿಸಿಕೊಳ್ಳುವುದಕ್ಕೆ ಆಧ್ಯತೆ ನೀಡಬೇಕು.
- ಹೊರ ದೇಶಗಳಿಗೆ ಪ್ರತಿಭಾ ಫಲಾಯನ ತಡೆಯಬೇಕಿದೆ ಮತ್ತು ಅವರ ಕೌಶಲ್ಯಗಳನ್ನು ರಾಜಕೀಯ ಭಾಗವಹಿಸುವಿಕೆಗೆ, ಸಂಘಟನಾ ಕಾರ್ಯಗಳಿಗಾಗಿ ವಿನಿಯೋಗಿಸಬೇಕಿದೆ.
- ಕ್ರೈಸ್ತರು ಇತರೇ ಸಮುದಾಯಗಳ ಸಮಾನ ಮನಸ್ಕರೊಂದಿಗೆ ಸಹಕರಿಸಿಕೊಂಡು ರಾಜಕೀಯ ಪ್ರಕ್ರಿಯೆಗಳಲ್ಲಿ ಭಾಗವಹಿಸಬೇಕಿದೆ. ರಾಜಕೀಯದಲ್ಲಿ ಕ್ರೈಸ್ತರು ಪ್ರತ್ಯೇಕಿತರಾಗಿ ಉಳಿಯಬಾರದು.
- ಸಮಾಜಿಕ ಸಮಸ್ಯೆಗಳು ತಮಗೆ ಸೇರಿದ್ದೇ ಅಲ್ಲವೆಂಬ ಭಾವನೆ ದೂರವಾಗಬೇಕಿದೆ.
- ರಾಜಕೀಯ ಕೊಳಕು, ಸಂಭಾವಿತರಿಗೆ ತಕ್ಕುದಲ್ಲ/ರಾಜಕೀಯ ಕ್ಷೇತ್ರ ತಮ್ಮ ಕಾರ್ಯಕ್ಷೇತ್ರವಲ್ಲವೆಂಬ ಭಾವನೆ ದೂರವಾಗಬೇಕಿದೆ.
- ಕ್ರೈಸ್ತ ಸಮಾಜ ಕ್ರೈಸ್ತ ಯುವ ಜನತೆಯ ರಾಜಕೀಯ ನಾಯಕತ್ವದ ಬೆಳವಣಿಗೆ ಪೂರಕವಾದ ಚಟುವಟಿಕೆಗಳು, ಪ್ರತಿಭಟನೆಗಳು, ಹಕ್ಕೊತ್ತಾಯದ ಜಾಥಾ,

ಕಾಲೇಜು/ಶಾಲಾ ಮಟ್ಟದ ನಾಯಕತ್ವ ಇವುಗಳಲ್ಲಿ ಸಕ್ರಿಯವಾಗಿ ಭಾಗವಹಿಸಲು ಪ್ರೋತ್ಸಾಹ ನೀಡಬೇಕಿದೆ.

- ಎಲ್ಲಾ ಕ್ರೈಸ್ತ ಪಂಗಡಗಳನ್ನು ರಾಜಕೀಯವಾಗಿ ಸಂಘಟಿಸಲು ಒಂದು ಸಮಾನ ವೇದಿಕೆ/ಒಕ್ಕೂಟಗಳ ಅಗತ್ಯವಿದೆ.
- ಇವೆಲ್ಲಕ್ಕಿಂತಲೂ ಮಿಗಿಲಾಗಿ, ಓರ್ವ ಪೌರನಾಗಿ ರಾಜಕೀಯ ಭಾಗವಹಿಸುವಿಕೆಯು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಬಹಳಷ್ಟು ಮಹತ್ವ ಪಡೆದಿದೆಯೆಂಬ ಅರಿವನ್ನು ಮೂಡಿಸುವ ಪ್ರಯತ್ನಗಳಾಗಬೇಕಿದೆ.
- ಕೋಮು ಧ್ರುವೀಕರಣದ ಈ ಸಂಧರ್ಭದಲ್ಲಿ ಮತೀಯ ಮತದಾರರ ವರ್ಗ ತುರ್ತಾಗಿ ಜಾರಿಗೆ ತರಬೇಕು. ಅಲ್ಪಸಂಖ್ಯಾತರಲ್ಲಿ ಅಲ್ಪ ಸಂಖ್ಯಾತರಾಗಿರುವ ಕ್ರೈಸ್ತರಿಗೆ ಲೋಕಸಭೆ/ವಿಧಾನಸಭೆ/ಸ್ಥಳೀಯ ಚುನಾವಣೆಗಳಲ್ಲಿ ಸ್ಥಾನಗಳನ್ನು ಮೀಸಲಾಗಿಡಬೇಕಿದೆ.

ಇನ್ನು ಈ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಮುಂದಿನ ಅಧ್ಯಯನಗಳು/ಸಂಶೋಧನೆಗಳು ಸಾಧ್ಯವಿದೆ. ಕ್ರೈಸ್ತರ ರಾಜಕೀಯ ಭಾಗವಹಿಸುವಿಕೆಯನ್ನು ಇತರೇ ಅಲ್ಪ ಸಂಖ್ಯಾತ ಸಮುದಾಯಗಳ ರಾಜಕೀಯ ಭಾಗವಹಿಸುವಿಕೆಯೊಂದಿಗೆ ತುಲನಾತ್ಮಕವಾಗಿ ಅಧ್ಯಯನ ಮಾಡಬಹುದಾಗಿದೆ. ಅಥವಾ ಈ ಜಿಲ್ಲೆಯಲ್ಲಿ ಕ್ರೈಸ್ತರ ರಾಜಕೀಯ ಭಾಗವಹಿಸುವಿಕೆಯನ್ನು ಇನ್ನಿತರ ಜಿಲ್ಲೆಗಳ/ರಾಜ್ಯಗಳ ಕ್ರೈಸ್ತರ ರಾಜಕೀಯ ಪಾಲ್ಗೊಳ್ಳುವಿಕೆಯೊಂದಿಗೆ ತುಲನಾತ್ಮಕ ಅಧ್ಯಯನಗಳ ಸಾಧ್ಯತೆಗಳಿವೆ.

## ಅನುಬಂಧ ೧ ಕೋಷ್ಟಕಗಳು

**ಅಧ್ಯಾಯ ೩ ರಾಜಕೀಯದಲ್ಲಿ ಕ್ರೈಸ್ತರ ಪ್ರಾತಿನಿಧ್ಯತೆ**

೩.೧.೧. ೧೯೬೨ರ ಮಂಗಳೂರು ಲೋಕಸಭಾ ಕ್ಷೇತ್ರದ ಫಲಿತಾಂಶದ ವಿವರ

೩.೨.೧. ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ವಿಧಾನ ಸಭಾ ಕ್ಷೇತ್ರಗಳ ಪಟ್ಟಿ

೩.೨.೨. ಜಿಲ್ಲೆಯಿಂದ ವಿಧಾನ ಸಭೆಗೆ ಆಯ್ಕೆಗೊಂಡ ಕ್ರೈಸ್ತ ಶಾಸಕರ ಪಟ್ಟಿ

೩.೨.೩. ವಿವಿಧ ವಿಧಾನ ಸಭಾ ಕ್ಷೇತ್ರಗಳಲ್ಲಿ ಚುನಾವಣೆಗಳಲ್ಲಿ ಸ್ಪರ್ಧಿಸಿ ಸೋತ ಕ್ರೈಸ್ತ ಅಭ್ಯರ್ಥಿಗಳ ಪಟ್ಟಿ

೩.೩.೧. ೧೯೯೫ರ ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್ ಚುನಾವಣೆಯಲ್ಲಿ ಕ್ರೈಸ್ತರ ಪ್ರಾತಿನಿಧ್ಯದ ಪ್ರಮಾಣ:

೩.೩.೨. ೨೦೦೦ ದಲ್ಲಿ ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್‌ಗೆ ನಡೆದ ಸಾರ್ವತ್ರಿಕ ಚುನಾವಣೆಯಲ್ಲಿ ಕ್ರೈಸ್ತರ ಪ್ರಾತಿನಿಧ್ಯದ ಪ್ರಮಾಣ

೩.೩.೩. ೨೦೦೫ ರ ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್‌ಗೆ ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯದ ಪ್ರಮಾಣ:

೩.೩.೨.೧. ೧೯೯೫ರ ಮಂಗಳೂರು ತಾಲೂಕು ಪಂಚಾಯತ್‌ಗೆ ನಡೆದ ಚುನಾವಣೆಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯದ ಪ್ರಮಾಣ.

೩.೩.೨.೨. ೨೦೦೦ದಲ್ಲಿ ಮಂಗಳೂರು ತಾಲೂಕು ಪಂಚಾಯತ್‌ಗೆ ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯ:

೩.೩.೨.೩. ೨೦೦೫ ರ ಮಂಗಳೂರು ತಾಲೂಕು ಪಂಚಾಯತ್‌ಗೆ ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯ:

೩.೩.೨.೪. ೧೯೯೫ ರಲ್ಲಿ ಬಂಟ್ವಾಳ ತಾಲೂಕು ಪಂಚಾಯತ್‌ಗೆ ನಡೆದ ಚುನಾವಣೆಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯ.

೩.೩.೨.೫. ೨೦೦೦ದಲ್ಲಿ ಬಂಟ್ವಾಳ ತಾಲೂಕು ಪಂಚಾಯತ್‌ಗೆ ನಡೆದ ಚುನಾವಣೆಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯ.

೩.೩.೨.೭. ೨೦೦೫ ರ ಬಂಟ್ವಾಳ ತಾಲೂಕು ಪಂಚಾಯತ್‌ಗೆ ನಡೆದ ಚುನಾವಣೆಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯ:

೩.೩.೨.೮. ೨೦೦೦ ದಲ್ಲಿ ಪುತ್ತೂರು ತಾಲೂಕು ಪಂಚಾಯತ್‌ಗೆ ನಡೆದ ಚುನಾವಣೆಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯ:

೩.೩.೨.೯. ೨೦೦೫ ರಲ್ಲಿ ಪುತ್ತೂರು ತಾಲೂಕು ಪಂಚಾಯತ್‌ಗೆ ನಡೆದ ಚುನಾವಣೆಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯ.

೩.೩.೨.೧೦. ೧೯೯೫ ರಲ್ಲಿ ಬೆಳ್ತಂಗಡಿ ತಾಲೂಕು ಪಂಚಾಯತ್‌ಗೆ ನಡೆದ ಚುನಾವಣೆಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯ:

೩.೩.೨.೧೧. ೨೦೦೦ ದಲ್ಲಿ ಬೆಳ್ತಂಗಡಿ ತಾಲೂಕು ಪಂಚಾಯತ್‌ಗೆ ನಡೆದ ಚುನಾವಣೆಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯ.

೩.೩.೨.೧೨. ೨೦೦೫ ರಲ್ಲಿ ಬೆಳ್ತಂಗಡಿ ತಾಲೂಕು ಪಂಚಾಯತ್‌ಗೆ ನಡೆದ ಚುನಾವಣೆಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯ:

೩.೩.೨.೧೩. ೧೯೯೫ ರಲ್ಲಿ ಸುಳ್ಯ ತಾಲೂಕು ಪಂಚಾಯತ್‌ಗೆ ನಡೆದ ಚುನಾವಣೆಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯ:

೩.೩.೨.೧೪. ೨೦೦೦ ದಲ್ಲಿ ಸುಳ್ಯ ತಾಲೂಕು ಪಂಚಾಯತ್‌ಗೆ ನಡೆದ ಚುನಾವಣೆಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯ:

೩.೩.೨.೧೫. ೨೦೦೫ ರಲ್ಲಿ ಸುಳ್ಯ ತಾಲೂಕು ಪಂಚಾಯತ್‌ಗೆ ನಡೆದ ಚುನಾವಣೆಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯ:

೩.೩.೨.೧೬. ೨೦೦೫ ರಲ್ಲಿ ತಾಲೂಕು ಪಂಚಾಯತ್‌ಗಳಿಗೆ ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ ಗೆದ್ದ ಕ್ರೈಸ್ತ ಅಭ್ಯರ್ಥಿಗಳ ಪ್ರಮಾಣ.

೩.೩.೨.೧೭. ೨೦೦೭ ರಲ್ಲಿ ಪುರಸಭೆ ಮತ್ತು ಪಟ್ಟಣ ಪಂಚಾಯತ್‌ಗಳಿಗೆ ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯ.

೩.೩.೩.೧. ೨೦೦೫ ರಲ್ಲಿ ಜಿಲ್ಲೆಯ ಗ್ರಾಮ ಪಂಚಾಯತ್‌ಗಳಿಗೆ ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ ಕ್ರೈಸ್ತರ ಪ್ರಾತಿನಿಧ್ಯ.

**ಅಧ್ಯಾಯ ೪ ಕ್ರೈಸ್ತರ ರಾಜಕೀಯ ಬದುಕು, ಭಾಗವಹಿಸುವಿಕೆ ಹಾಗೂ ದೂರದೃಷ್ಟಿ**

೪.೬.೪. ಅಭ್ಯರ್ಥಿಗಳ ಗೆಲುವಿಗೆ ಕಾರಣವಾದ ಪ್ರಧಾನ ಅಂಶಗಳು

೪.೭.೧. ಸೈದ್ಧಾಂತಿಕ ತಳಹದಿಯಲ್ಲಿ ಕ್ರೈಸ್ತ ಪೌರರುಗಳ ವರ್ಗೀಕರಣ

೪.೭.೨. ಕ್ರೈಸ್ತರು ರಾಜಕೀಯ ಪಕ್ಷಗಳಲ್ಲಿ ತೊಡಗಿಸಿಕೊಂಡ ಬಗೆ

೪.೭.೩. ಕ್ರೈಸ್ತರು ರಾಜಕೀಯ ಭಾಗವಹಿಸುವಿಕೆಗೆ ಕಲ್ಪಿಸಿರುವ ಮಹತ್ವ

೪.೮.೧. ರಾಷ್ಟ್ರೀಯ ವಿಚಾರಗಳು ಚರ್ಚಿನಲ್ಲಿದೆಯೇ

೪.೮.೨. ರಾಷ್ಟ್ರೀಯ ಪ್ರಾಮುಖ್ಯತೆಯ ವಿಷಯಗಳಲ್ಲಿ ಚರ್ಚಿನ ಸಹಕಾರದ ಕುರಿತು ಕ್ರೈಸ್ತರ ಅಭಿಮತ

೪.೮.೩. ಸಕ್ರಿಯ ರಾಜಕಾರಣದಲ್ಲಿ ಚರ್ಚ್‌ನ ಪಾಲ್ಗೊಳ್ಳುವಿಕೆಯ ಕುರಿತು ಕ್ರೈಸ್ತ ಪೌರರ ಅಭಿಮತ

೪.೯.೧. ಕ್ರೈಸ್ತರು ಮತ್ತು ರಾಜಕಾರಣ – ಯಾವುದು ಸರಿ?

೪.೯.೧. ಕ್ರೈಸ್ತರ ರಾಜಕೀಯ ಬದುಕು, ಭಾಗವಹಿಸುವಿಕೆ ಹಾಗೂ ದೂರದೃಷ್ಟಿ: (ಕ್ಷೇತ್ರ ಕಾರ್ಯಾಧಾರಿತ ವಿವರಗಳು)

## ಅನುಬಂಧ ೨ ಪ್ರಶ್ನಾವಳಿ

## " ದಕ್ಷಿಣ ಕನ್ನಡದ ಕ್ರೈಸ್ತರು ಮತ್ತು ರಾಜಕೀಯ ಭಾಗವಹಿಸುವಿಕೆ – ಒಂದು ಅಧ್ಯಯನ"

**ಪೀಠಿಕೆ**

ಪ್ರಸ್ತುತ ಅಧ್ಯಯನದ ಮುಖ್ಯ ಉದ್ದೇಶವು ದಕ್ಷಿಣ ಕನ್ನಡದ ಕ್ರೈಸ್ತ ಸಮುದಾಯದ ರಾಜಕೀಯ ಪಾಲುಗೊಳ್ಳುವಿಕೆಯ ಮಟ್ಟವನ್ನು ಗುರುತಿಸುವುದಾಗಿದೆ ಮತ್ತು ಕ್ರೈಸ್ತ ಸಮುದಾಯವು ರಾಜಕೀಯ ಭಾಗವಹಿಸುವಿಕೆಯಲ್ಲಿ ಏಕೆ ಹಿಂದುಳಿದಿದ್ದಾರೆ ಎಂದು ಶೋಧಿಸುವುದಾಗಿದೆ.

**ಸೂಚನೆಗಳು**

ಈ ಪ್ರಶ್ನಾವಳಿಯಲ್ಲಿ ವಿವಿಧ ಪ್ರಕಾರದ ಪ್ರಶ್ನಾಗಳಿವೆ. ಕೆಲವು ಪ್ರಶ್ನೆಗಳಿಗೆ ಚುಟುಕಾಗಿ ಉತ್ತರಿಸಬಹುದು. ಕೆಲವುದಕ್ಕೆ ಕೊಟ್ಟ ಉತ್ತರಗಳಲ್ಲಿ ಸರಿಯಾದುದಕ್ಕೆ ಮಾರ್ಕ್ ಮಾಡಿದರಾಯಿತು.

- ಈ ಸಮಿಕ್ಷೆಯನ್ನು ಕೇವಲ ಅಧ್ಯಯನ ಉದ್ದೇಶಕ್ಕಾಗಿ ಮಾತ್ರ ಮಾಡಲಾಗುತ್ತಿದೆ.
- ನೀವು ವ್ಯಕ್ತಪಡಿಸಿರುವ ಅಭಿಪ್ರಾಯಗಳ ಗೌಪ್ಯತೆಯನ್ನು ಕಾಪಾಡಲಾಗುವುದು.
- ನಿಮ್ಮ ಇತರೆ ಉಪಯುಕ್ತ ಸಲಹೆ ಮತ್ತು ಪೂರಕ ಅಭಿಪ್ರಾಯಗಳಿದ್ದಲ್ಲಿ ಕೃತಜ್ಞತಾ ಪೂರ್ವಕ ಸ್ವೀಕರಿಸಲಾಗುವುದು.
- ನಿಮ್ಮ ಸಹಾಯಕ್ಕಾಗಿ ಅನಂತ ಕೃತಜ್ಞತೆಗಳು.

### ಭಾಗ – ೧ ಸಾಮಾನ್ಯ ಮಾಹಿತಿಗಳು

೧. ಹೆಸರು :

೨. ಲಿಂಗ :

(ಅ) ಪುರುಷ

(ಆ) ಮಹಿಳೆ

೩. ವಯಸ್ಸು :

(ಅ) ೧೮–೩೪

(ಆ) ೩೫–೪೪

(ಇ) ೪೫–೫೪

(ಈ) ೫೫ ರಿಂದ ಮೇಲ್ಪಟ್ಟು

೪. ಉದ್ಯೋಗ :

(ಅ) ಕೃಷಿಕ

(ಆ) ಕೃಷಿ ಕಾರ್ಮಿಕ

(ಇ) ಮನೆವಾಳ್ತಿ

(ಈ) ನಿರುದ್ಯೋಗಿ

(ಉ) ಉದ್ಯೋಗಿ

೫. ಜಿಲ್ಲೆ :

೬. ತಾಲ್ಲೂಕು :

೭. ವಾಸಸ್ಥಳ :

(ಅ) ನಗರ ಪ್ರದೇಶ

(ಆ) ಗ್ರಾಮಾಂತರ ಪ್ರದೇಶ

೮. ವಾರ್ಷಿಕ ಆದಾಯ:

(ಅ) ರೂ. ೧,೦೦೦/– ದಿಂದ ರೂ ೧೦,೦೦೦/–

(ಆ) ರೂ. ೧೦,೦೦೦/– ದಿಂದ ರೂ ೨೦,೦೦೦/–

(ಇ) ರೂ. ೨೦,೦೦೦/– ದಿಂದ ಮೇಲ್ಪಟ್ಟು

೯. ಕ್ರೈಸ್ತ ಪಂಗಡ:

(ಅ) ಕೊಂಕಣಿ ಕ್ರೈಸ್ತ

(ಆ) ಪ್ರೊಟೆಸ್ಟಾಂಟ್ ಕ್ರೈಸ್ತ

(ಇ) ಮಲಯಾಳಿ ಕ್ರೈಸ್ತ

೧೦. ವಿದ್ಯಾರ್ಹತೆ :

(ಅ) ಅನಕ್ಷರಸ್ಥ

(ಆ) ಪ್ರಾಥಮಿಕ ಶಿಕ್ಷಣ

(ಇ) ಪ್ರೌಢ ಶಿಕ್ಷಣ

(ಈ) ಪದವಿ ಪೂರ್ವ ಶಿಕ್ಷಣ

(ಉ) ಪದವಿ ಶಿಕ್ಷಣ

(ಊ) ಸ್ನಾತ್ತಕೋತ್ತರ

## ಭಾಗ – ೨ ರಾಜಕೀಯ ಬದುಕು

೧೧. ನೀವು ವರ್ತಮಾನ ಪತ್ರಿಕೆಗಳನ್ನು ಓದುವಿರಾದರೆ ಈ ಕೆಳಗಿನ ಯಾವ ಯಾವ ಪತ್ರಿಕೆಗಳನ್ನು ಓದುವಿರಿ?

(ಅ) ಉದಯವಾಣಿ

(ಆ) ವಿಜಯ ಕರ್ನಾಟಕ

(ಇ) ಪ್ರಜಾವಾಣಿ

(ಈ) ಇಂಗ್ಲೀಷ್ ದಿನ ಪತ್ರಿಕೆಗಳು

(ಉ) ಇತರೇ

೧೨. ವರ್ತಮಾನ ಪತ್ರಿಕೆಗಳಲ್ಲಿ ಮುಖ್ಯವಾಗಿ ಈ ಕೆಳಗಿನವುಗಳಲ್ಲಿ ಯಾವುದನ್ನು ಓದುವಿರಿ?

(ಅ) ಎಲ್ಲಾ ವಿಚಾರಗಳನ್ನು

(ಆ) ರಾಜಕೀಯ ವಿಚಾರಗಳನ್ನು ಮಾತ್ರ

(ಇ) ಸಿನಿಮಾ ಮತ್ತು ಮನರಂಜನೆ

(ಈ) ಇನ್ನಿತರ ವಿಚಾರಗಳನ್ನು.

೧೩. ನೀವು ಪ್ರತಿದಿನ ದೂರದರ್ಶನ ಕಾರ್ಯಕ್ರಮಗಳನ್ನು ವೀಕ್ಷಿಸುವಿರಾ?

(ಅ) ಹೌದು (ಆ) ಇಲ್ಲ

೧೪. ನೀವು ಪ್ರತಿದಿನ ರೇಡಿಯೋ ಆಲಿಸುವಿರಾ?

(ಅ) ಹೌದು (ಆ) ಇಲ್ಲ

೧೫. ನೀವು ರಾಷ್ಟ್ರೀಯ ಹಬ್ಬಗಳಾದ ಸ್ವಾತಂತ್ರ್ಯ ದಿನಾಚರಣೆ, ಗಣರಾಜ್ಯ ದಿನಾಚರಣೆಗಳಲ್ಲಿ ಭಾಗವಹಿಸುವಿರಾ ?

(ಅ) ಹೌದು (ಆ) ಇಲ್ಲ

೧೬. ನೀವು ಮದುವೆ, ಹುಟ್ಟು ಹಬ್ಬ ಹಾಗೂ ಇತರೇ ಸಾಮಾಜಿಕ ಚಟುವಟಿಕೆಗಳಲ್ಲಿ ಭಾಗವಹಿಸುವಿರಾ?

(ಅ) ಹೌದು (ಆ) ಇಲ್ಲ

೧೭. ನೀವು ಕ್ರೈಸ್ತೇತರರ ಸಾಮಾಜಿಕ ಕಾರ್ಯ ಕ್ರಮಗಳಲ್ಲೂ ಪಾಲ್ಗೊಳ್ಳುವಿರಾ?

(ಅ) ಹೌದು (ಆ) ಇಲ್ಲ

೧೮. ನೀವು ಪಕ್ಷದ ಸಭೆ, ಪ್ರಚಾರ ಇತ್ಯಾದಿ ರಾಜಕೀಯ ಚಟುವಟಿಕೆಗಳಲ್ಲಿ ಭಾಗವಹಿಸುತ್ತೀರಾ?

(ಅ) ಹೌದು (ಆ) ಇಲ್ಲ

೧೯. ಕುಡಿಯುವ ನೀರು, ವಿದ್ಯುತ್‌ಚ್ಛಕ್ತಿ, ರಸ್ತೆ, ಇತ್ಯಾದಿ ಸಮಸ್ಯೆಗಳ ಪರಿಹಾರಕ್ಕೆ ನೀವು ಅನುಸರಿಸುವ ಮಾರ್ಗಗಳು ಯಾವುವು?

(ಅ) ಸಂಬಂಧ ಪಟ್ಟವರಿಗೆ ಲಂಚ ನೀಡುವುದರ ಮೂಲಕ

(ಆ) ಸಂಬಂಧಿಸಿದವರಿಗೆ ಮನವಿ ಅರ್ಪಿಸುವುದರ ಮೂಲಕ

೨೦. ನೀವು ಯಾವತ್ತಾದರೂ ರಾಜಕೀಯ ಪ್ರತಿಭಟನೆಗಳಲ್ಲಿ ಭಾಗವಹಿಸಿದ್ದೀರಾ?

(ಅ) ಹೌದು (ಆ) ಇಲ್ಲ

೨೧. ಹೌದಾದರೆ ಯಾವ ಪ್ರತಿಭಟನೆಯಲ್ಲಿ ಭಾಗವಹಿಸಿದ್ದೀರಿ?

೨೨. ನಿಮ್ಮ ರಾಜಕೀಯ ಮಾಹಿತಿಗಳ ಮೂಲ ಯಾವುದು?

(ಅ) ವರ್ತಮಾನ ಪತ್ರಿಕೆಗಳ ಓದುವಿಕೆ

(ಆ) ರೇಡಿಯೋ / ಟಿ.ವಿ. ಮಾಧ್ಯಮಗಳು

(ಇ) ಗೆಳೆಯರ ಸಂಪರ್ಕದಿಂದ

(ಈ) ಪಕ್ಷಗಳಿಂದ, ಸಂಘಟನೆಗಳಿಂದ

೨೨. ನೀವು ಇತ್ತೀಚೆಗೆ ನಡೆದಂತಹ ಈ ಕೆಳಗಿನ ಚುನಾವಣೆಗಳಲ್ಲಿ ಮತ ಚಲಾಯಿಸಿದ್ದೀರಾ?

(ಅ) ಲೋಕ ಸಭೆ – ಹೌದು / ಇಲ್ಲ

(ಆ) ವಿಧಾನ ಸಭೆ – ಹೌದು / ಇಲ್ಲ

(ಇ) ಸ್ಥಳೀಯ ಸರಕಾರಗಳ – ಪಂಚಾಯತ್ / ನಗರ ಸಭೆ – ಹೌದು / ಇಲ್ಲ.

೨೩. ನೀವು ಮೇಲೆ ತಿಳಿಸಿದ ಯಾವುದಾದರೂ ಚುನಾವಣೆಗಳಲ್ಲಿ ಮತ ಚಲಾಯಿಸದಿದ್ದರೆ ಅದಕ್ಕೆ ಕಾರಣಗಳು.

(ಅ) ಮತದಾರರ ಪಟ್ಟಿಯಲ್ಲಿ ನನ್ನ ಹೆಸರು ಇರಲಿಲ್ಲ.

(ಆ) ಮತ ಚಲಾಯಿಸಲು ಮರೆತಿದ್ದೆನು

(ಇ) ನಾನು ನನ್ನದೇ ಕೆಲಸದಲ್ಲಿ ನಿರತನಾಗಿದ್ದೆನು

(ಈ) ನನಗೆ ಮತ ಚಲಾಯಿಸಲು ಆಸಕ್ತಿ ಇರಲಿಲ್ಲ..

(ಉ) ಯೋಗ್ಯ ಅಭ್ಯರ್ಥಿಗಳು ಇರದಿದ್ದ ಕಾರಣ.

೨೪. ಯಾವ ಅಭ್ಯರ್ಥಿಗೆ ಮತ ಚಲಾಯಿಸಬೇಕೆಂಬ ನಿಮ್ಮ ನಿರ್ಧಾರವು ಈ ಕೆಳಗಿನ ಯಾವ ಅಂಶದ ಮೇಲೆ ಆಧರಿಸಿದೆ?

(ಅ) ಅಭ್ಯರ್ಥಿಯ ಪಕ್ಷ

(ಆ) ಅಭ್ಯರ್ಥಿಯ ಪ್ರಾಮಾಣಿಕ ವ್ಯಕ್ತಿತ್ವ

(ಇ) ಅವನ ಜಾತಿ ಅಥವಾ ಧರ್ಮ

(ಈ) ಅವನ ಶಿಕ್ಷಣ ಮಟ್ಟ

(ಉ) ಅವನ ಹಣದ ಶ್ರೀಮಂತಿಕೆ

(ಊ) ಅವನ ಕಾರ್ಯ ಕ್ಷಮತೆ

(ಋ) ಇತರೇ ಅಂಶಗಳು.

೨೫. ನೀವು ಯಾವ ಆಧಾರದಲ್ಲಿ ಒಂದು ಪಕ್ಷವನ್ನು ಉತ್ತಮ ಅಥವಾ ಸ್ವೀಕಾರಾರ್ಹ ಪಕ್ಷವೆಂದು ತೀರ್ಮಾನಿಸುತ್ತೀರಿ?

(ಅ) ಅದರ ನಾಯಕತ್ವ

(ಆ) ಅಲ್ಪ ಸಂಖ್ಯಾತರ ಕುರಿತು ಅದರ ನಿಲುವು

(ಇ) ಅದರ ಸಾಧನೆ ಮತ್ತು ಇತಿಹಾಸ

(ಈ) ಅದರ ಆರ್ಥಿಕ ಧೋರಣೆಗಳು

(ಉ) ಇತರೇ ಅಂಶಗಳು

೧೬. ತಮ್ಮ ಪ್ರಕಾರ ತಮ್ಮ ಕ್ಷೇತ್ರದ ಅಭ್ಯರ್ಥಿಯ ಗೆಲುವಿಗೆ ಯಾವುದು ಮುಖ್ಯ ಕಾರಣವಿರಬಹುದು?

(ಅ) ಅವನ ಧರ್ಮ ಅಥವಾ ಜಾತಿ

(ಆ) ಅವನ ಪ್ರಾಮಾಣಿಕ ವ್ಯಕ್ತಿತ್ವ ಮತ್ತು ಕಾರ್ಯ ಕ್ಷಮತೆ

(ಇ) ಅವನ ಪಕ್ಷದ ಜನಪ್ರಿಯತೆ

(ಈ) ಅವನ ಹಣ.

(ಉ) ಇತರೇ ಅಂಶಗಳು.

೧೭. ತಾವು ಸಾಮಾನ್ಯವಾಗಿ ಯಾವ ಪಕ್ಷವನ್ನು ಬೆಂಬಲಿಸುತ್ತೀರಿ?

(ಅ) ಕಾಂಗ್ರೇಸ್ (ಐ)/ ಭಾರತೀಯ ರಾಷ್ಟ್ರೀಯ ಕಾಂಗ್ರೇಸ್

(ಆ) ಭಾರತೀಯ ಜನತಾ ಪಕ್ಷ (ಬಿ.ಜೆ.ಪಿ)

(ಇ) ಜಾತ್ಯಾತೀತ ಜನತಾ ದಳ

(ಈ) ಕಮ್ಯುನಿಸ್ಟ್ ಪಕ್ಷಗಳು

೧೮. ತಾವು ಯಾಕೆ ಆ ಪಕ್ಷವನ್ನು ಬೆಂಬಲಿಸುವಿರಿ?

(ಅ) ಉತ್ತಮ ನಾಯಕತ್ವ

(ಆ) ಜಾತ್ಯಾತೀತ ಪಕ್ಷ

(ಇ) ಸಾಂಪ್ರದಾಯಿಕ ಕಾರಣಗಳಿಗೋಸ್ಕರ

(ಈ) ಇತರೇ ಕಾರಣಗಳಿಗಾಗಿ

೧೯. ರಾಜಕೀಯದಲ್ಲಿ ಈ ಕೆಳಗಿನವುಗಳಲ್ಲಿ ನಿಮ್ಮನ್ನು ನೀವೇ ಯಾವ ವರ್ಗಕ್ಕೆ ಸೇರಿದವರೆಂಬುದಾಗಿ ಪರಿಗಣಿಸುವಿರಿ

(ಅ) ಸಂಪ್ರದಾಯಸ್ತರು

(ಆ) ರಾಜಕೀಯವಾಗಿ ಮೂಲಭೂತ ಪರಿವರ್ತಕರು

(ಇ) ಇವೆರಡರ ನಡುವೆ

(ಈ) ಕ್ರೈಸ್ತರು ರಾಜಕೀಯದಲ್ಲಿ ಪಾಲ್ಗೊಳ್ಳಲೇ ಬಾರದು.

೩೦. ನೀವು ರಾಜಕೀಯ ಪಕ್ಷಗಳಲ್ಲಿ ತೊಡಗಿಸಿ ಕೊಂಡಿರುವಿರಾದರೆ ಹೇಗೆ ನಿಮ್ಮನ್ನೂ ನೀವೇ ತೊಡಗಿಸಿ ಕೊಂಡಿದ್ದೀರಿ, ದಯವಿಟ್ಟು ತಿಳಿಸಿ

(ಅ) ಪಕ್ಷದ ಪದಾಧಿಕಾರಿಯಾಗಿ

(ಆ) ಪಕ್ಷದ ಸಕ್ರಿಯ ಸದಸ್ಯನಾಗಿ

(ಇ) ಚುನಾವಣಾ ಪ್ರಚಾರಗಳಲ್ಲಿ ಪಾಲ್ಗೊಳ್ಳುವುದರ ಮೂಲಕ

(ಈ) ಕೇವಲ ಮತದಾನದ ಮೂಲಕ

(ಉ) ಇತರೇ ರೀತಿಯಲ್ಲಿ.

೩೧. ಒಬ್ಬ ಕ್ರೈಸ್ತ ಪೌರನಾಗಿ ರಾಜಕೀಯ ಭಾಗವಹಿಸುವಿಕೆಯನ್ನು ಹೇಗೆ ಕಾಣುವಿರಿ?

(ಅ) ಅತ್ಯಂತ ಪ್ರಾಮುಖ್ಯ

(ಆ) ಸಾಮಾನ್ಯ ಪ್ರಾಮುಖ್ಯತೆ

(ಇ) ಅಷ್ಟೊಂದು ಪ್ರಾಮುಖ್ಯವಲ್ಲ

(ಈ) ಯಾವ ಪ್ರಾಮುಖ್ಯತೆಯೇ ಇಲ್ಲ.

೩೨. ಈ ಕೆಳಗಿನ ಪಟ್ಟಿಯಲ್ಲಿ ಕೊಟ್ಟಿರುವ ಯಾವುದಾದರೂ ವಿಚಾರಗಳು ನಿಮ್ಮ ಚರ್ಚಿನಲ್ಲಿವೆಯೇ?

(ಅ) ಗಣರಾಜ್ಯ ದಿನಾಚರಣೆ ಇತ್ಯಾದಿ ರಾಷ್ಟ್ರೀಯ ದಿನಗಳಂದು ಚರ್ಚಿನಲ್ಲಿ ವಿಶೇಷ ಪ್ರಾರ್ಥನೆ.

(ಆ) ಪ್ರತಿ ಆದಿತ್ಯವಾರ ಪೂಜೆಗಳ ಸಂದರ್ಭದಲ್ಲಿ ರಾಷ್ಟ್ರ ಮತ್ತು ಆಳುವವರಿಗೋಸ್ಕರ ಪ್ರಾರ್ಥನೆ.

(ಇ) ದೇಶ ರಕ್ಷಣೆ, ನೆರೆ ಹಾಗೂ ಬರಗಾಲಗಳಂತಹ ರಾಷ್ಟ್ರೀಯ ಅಗತ್ಯಗಳಿಗೆ ನಿಧಿ ಸಂಗ್ರಹ.

(ಈ) ಸಾಮಾಜಿಕಾ ರಾಜಕೀಯ ಬೆಳವಣಿಗೆಗಳ ಕುರಿತು ಗುಂಪು ಚರ್ಚೆ.

೩೩. ಮೇಲೆ ತಿಳಿಸಿದ ರೀತಿಯ ಕಾರ್ಯಕ್ರಮಾಗಳನ್ನು ಚರ್ಚಿನಲ್ಲಿ ನಡೆಸುವುದರ ಕುರಿತು ನಿಮ್ಮ ಅಭಿಪ್ರಾಯ.

(ಅ) ಪೂರ್ತಿ ಸಹಮತವಿದೆ.

(ಆ) ಆಂಕಿಕವಾಗಿ ಒಪ್ಪುತ್ತೇನೆ.

(ಇ) ನನಗೆ ತಿಳಿದಿಲ್ಲ/ಗೂತ್ತಿಲ್ಲ.

(ಈ) ನನ್ನ ವಿರೋಧವಿದೆ.

೩೪. ಚರ್ಚುಗಳು ರಾಷ್ಟ್ರ ರಾಜಕಾರಣದಲ್ಲಿ ಸಕ್ರಿಯವಾಗಿ ಪಾಲುಗೊಳ್ಳುವುದರ ಬಗ್ಗೆ ನಿಮ್ಮ ಅನಿಸಿಕೆ.

(ಅ) ನಾನು ಇದನ್ನು ಸ್ವಾಗತಿಸುತ್ತೇನೆ.

(ಆ) ಹೆಚ್ಚಿಗೆ ಪಾಲುಗೊಳ್ಳುವುದು ಅಗತ್ಯವಿಲ್ಲ

(ಇ) ನನಗೆ ಆಸಕ್ತಿಯಿಲ್ಲ.

(ಈ) ಇತರೇ.

೩೫. ಕ್ರೈಸ್ತ ನಂಬಿಕೆಗಳು ಅಥವಾ ತತ್ವಗಳು ಮತ್ತು ರಾಜಕೀಯ ಭಾಗವಹಿಸುವಿಕೆ ನಡುವಣ ಸಂಬಂಧದ ಕುರಿತು ನಿಮ್ಮ ಅನಿಸಿಕೆ

(ಅ) ಕ್ರೈಸ್ತರ ಬದುಕಿನಲ್ಲಿ ರಾಜಕೀಯ ಭಾಗವಹಿಸುವಿಕೆ ಅನಿವಾರ್ಯ ಅಂಶ

(ಆ) ಕ್ರೈಸ್ತರ ನಂಬಿಕೆಗಳು ರಾಜಕೀಯ ಭಾಗವಹಿಸುವಿಕೆಗೆ ವಿರುದ್ದವಾಗಿದೆ.

೩೬. ರಾಜಕಾರಣವು ಕ್ರಿಶ್ಚಿಯನ್ನರಿಗೆ ಯೋಗ್ಯವಾದ ಕಸಬು ಎಂದು ನಿಮಗೆ ಅನ್ನಿಸುವುದೇ ?

(ಅ) ಹೌದು, ಖಂಡಿತವಾಗಿಯೂ

(ಆ) ಖಂಡಿತವಾಗಿಯೂ ಯೋಗ್ಯವಾದ ಕಸಬು ಅಲ್ಲ.

೩೭. ಈ ಕೆಳಗಿನ ಕಾರ್ಯ ಕ್ರಮಗಳ ಪೈಕಿ ಕ್ರೈಸ್ತರ ರಾಜಕೀಯ ಪಾಲ್ಗೊಳ್ಳುವಿಕೆಯ ನಿಟ್ಟಿನಲ್ಲಿ ನೀವು ಯಾವುದನ್ನು ಬೆಂಬಲಿಸುವಿರಿ?

(ಅ) ಕ್ರೈಸ್ತರ ಒಂದು ರಾಜಕೀಯ ಪಕ್ಷವನ್ನು ಸಂಘಟಿಸಿ ಚುನಾವಣೆಗಳಲ್ಲಿ ಸ್ಪರ್ಧಿಸುವಿಕೆ.

(ಆ) ಕೇವಲ ಕ್ರೈಸ್ತ ಸಂಘಟನೆಗಳನ್ನು ಪ್ರಾರಂಭಿಸಿ ಅವರಿಗೆ ರಾಜಕೀಯದಲ್ಲಿ

ಹೇಗೆ ಭಾಗವಹಿಸಬಹುದೆಂಬುದನ್ನು ತಿಳಿಸಿ ಕೊಡುವುದು.

ಇ) ಇತರೇ ವಿಧಾನಗಳಲ್ಲಿ.

೩೮. ಇಲ್ಲಿಯ ತನಕ ರಾಜಕಾರಣ ಕುರಿತು ಚರ್ಚಿನ ಮನೋಭಾವ ಹೇಗಿತ್ತು?

(ಅ) ಔದಾಸೀನ್ಯತೆಯಿಂದ ಕೂಡಿದ

(ಆ) ತಟಸ್ಥ ಮನೋಭಾವ

(ಇ) ಬಹುಮತವಿರುವ ಪಕ್ಷವನ್ನು ಖುಷಿಪಡಿಸುವ ತೆರನಾದ

(ಈ) ಕಾಳಜಿ ಅಥವಾ ಅನುಕಂಪದಿಂದ ಕೂಡಿದ

(ಉ) ಇತರೇ

೩೯. ನಿಮಗೆ ಕ್ರೈಸ್ತರಲ್ಲಿ ಪ್ರಿಯವಾದ ನಾಯಕರು ಯಾರು?

೪೦. ಕ್ರೈಸ್ತೇತರರಲ್ಲಿ ನೀವು ಮೆಚ್ಚುವ ನಾಯಕರು ಯಾರು?

೪೧. ಧರ್ಮವನ್ನು ರಾಜಕೀಯದಲ್ಲಿ ಬೆರೆಸುವುದರ ಕುರಿತು ನಿಮ್ಮ ಅನಿಸಿಕೆ

(ಅ) ಉಚಿತ

(ಆ) ಉಚಿತವಲ್ಲ

೪೨. ಮಹಿಳೆಯರಿಗೆ ರಾಜಕೀಯ ಮೀಸಲಾತಿ ಅವಶ್ಯವಿದೆಯೇ ?

೪೩. ಭವಿಷ್ಯದಲ್ಲಿ ಕ್ರೈಸ್ತ ಹುರಿಯಾಳುಗಳು ಚುನಾವಣೆಗಳಲ್ಲಿ ಗೆಲ್ಲುವ ಸಾಧ್ಯತೆಗಳಿವೆಯೇ?

(ಅ) ಇದೆ

(ಆ) ಇಲ್ಲ

೪೪. ಕ್ರೈಸ್ತ ಸಮುದಾಯದ ರಾಜಕೀಯ ಭವಿಷ್ಯಕ್ಕೆ ಏನು ಅಡೆ ತಡೆಗಳಿವೆ?

೪೫. ಕ್ರೈಸ್ತರೊಳಗೆ ಏಕತೆ ಇದೆಯೇ ? ಇಲ್ಲದಿದ್ದರೆ ಯಾವ ಅಡೆ ತಡೆಗಳಿವೆ?

೪೬. ಕ್ರೈಸ್ತರ ರಾಜಕೀಯ ಪಾಲ್ಗೊಳ್ಳುವಿಕೆಯನ್ನು ಸುಧಾರಿಸುವಲ್ಲಿ ನಿಮ್ಮ ಸಲಹೆಗಳು

೧

೨

೩

## ಅನುಬಂಧ ೩ ವೈಯಕ್ತಿಕ ಸಂದರ್ಶನ

# ವೈಯಕ್ತಿಕ ಸಂದರ್ಶನ

## ಕ್ರೈಸ್ತ ನಾಯಕರು/ಪ್ರತಿನಿಧಿಗಳೊಂದಿಗೆ

೧. ನಿಮ್ಮ ಪರಿಚಯ, ವಿದ್ಯಾಭ್ಯಾಸ, ರಾಜಕೀಯ ಅನುಭವ, ಹಿನ್ನೆಲೆ ಇತ್ಯಾದಿ.

೨. ನಿಮ್ಮ ರಾಜಕೀಯ ಬದುಕನ್ನು ಮನೆಯವರು ಬೆಂಬಲಿಸುತ್ತಿದ್ದಾರಾ? ಅವರ ನಿಲುವೇನು?

೩. ನಿಮ್ಮ ಅನುಭವದಂತೆ ಸ್ವತಂತ್ರ್ಯ ಭಾರತದಲ್ಲಿ ಸರಕಾರಗಳು ಕ್ರೈಸ್ತರ ಬಗ್ಗೆ ಹೊಂದಿರುವ ನಿಲುವಿನ ಬಗ್ಗೆ ನಿಮ್ಮ ಅನಿಸಿಕೆ/ಅಭಿಪ್ರಾಯಗಳೇನು?

೪. ಅಲ್ಪ ಸಂಖ್ಯಾತ ಸಮುದಾಯದವರಿಗೆ ಇರುವಂತಹ ಸವಲತ್ತುಗಳು ಕ್ರೈಸ್ತರಿಗೆ ಎಷ್ಟರ ಮಟ್ಟಿಗೆ ಪ್ರಾಪ್ತವಾಗುತ್ತಿದೆ? ನಿಮ್ಮ ಅಭಿಪ್ರಾಯವೇನು?

೫. ಕ್ರೈಸ್ತ ಸಮುದಾಯದ ಶೇಕಡಾವಾರು ಪ್ರಮಾಣಕ್ಕನುಗುಣವಾಗಿ ರಾಜಕೀಯ ಪ್ರಾತಿನಿಧ್ಯ ದೊರಕುತ್ತಿದೆಯೇ? ಇಲ್ಲವಾದಲ್ಲಿ ಅದಕ್ಕೆ ಕಾರಣಗಳಾವುವು?

೬. ಕ್ರೈಸ್ತ ಸಮುದಾಯದಲ್ಲಿ ನಾಯಕತ್ವದ ಬೆಳವಣಗೆಗೆ ತೊಡಕು ಅಡ್ಡಿಗಳಿವೆಯೆಂದು ನೀವು ಭಾವಿಸುತ್ತೀರಾ?

೭. ಆಸ್ಕರ್, ಬ್ಲೇಸಿಯಸ್, ಮುಂತಾದ ನಾಯಕರು ಈ ಸಮುದಾಯದ ಪ್ರಗತಿಗೆ ತೋರಿದ ಆಸಕ್ತಿ ಹೇಗಿದೆ?

೮. ಪ್ರಸ್ತುತ ಕ್ರೈಸ್ತರಿಗೆ ಆಗುತ್ತಿರುವ ತೊಂದರೆಗಳು.

೯. ಕ್ರೈಸ್ತರ ರಾಜಕೀಯವಾದ ನಾಯಕತ್ವಕ್ಕೆ ಸಂಬಂಧಿಸಿದಂತೆ ಧರ್ಮಸಭೆಯ ನಿಲುವಿನ ಬಗ್ಗೆ ನಿಮಗೇನನ್ನಿಸುತ್ತದೆ?

೧೦. ಕ್ರೈಸ್ತರು ಸಮಾಜದ ಮುಖ್ಯವಾಹಿನಿಯಲ್ಲಿ (ಸಕ್ರಿಯ ರಾಜಕೀಯ ನಾಯಕತ್ವ ಉನ್ನತ ಸರಕಾರಿ ಹುದ್ದೆ/ಸೇವೆಗಳಲ್ಲಿ) ಗುರುತಿಸಿಕೊಳ್ಳದಿರುವಿಕೆಗೆ ಇರುವ ಪ್ರಮುಖ ಅಡಚಣೆಗಳಾವುವು?

೧೧. ಕ್ರೈಸ್ತರ ರಾಜಕೀಯ ಭವಿಷ್ಯದ ಬಗ್ಗೆ ನಿಮ್ಮ ಅಭಿಪ್ರಾಯಗಳೇನು?

೧೨. ಕ್ರೈಸ್ತರ ರಾಜಕೀಯ ಭಾಗವಹಿಸುವಿಕೆಯನ್ನು ಉತ್ತಮಗೊಳಿಸುವ ನಿಟ್ಟಿನಲ್ಲಿ ನಿಮ್ಮ ಸಲಹೆಗಳು.

ಸಂದರ್ಶಿತರ ಪಟ್ಟಿ

(೧) ಶ್ರೀಯುತ ಶೀರ್ತಾಡಿ ವಿಲಿಯಂ ಪಿಂಟೋ

ರಾಜ್ಯೋತ್ಸವ ಪ್ರಶಸ್ತಿ ವಿಜೇತರು

ವಕೀಲರು, ಉಡುಪಿ.

(೨) ಪ್ರೋ. ರೀಟಾ ನೊರೊನ್ಹ

ಸ್ಕೂಲ್ ಅಫ್ ಸೋಶಿಯಲ್ ವರ್ಕ್

ರೋಶನಿ ನಿಲಯ, ವೆಲೆನ್ಸಿಯ, ಮಂಗಳೂರು.

(೩) ಶ್ರೀಮತಿ ಮರಿಯಮ್ಮ ಥೋಮಸ್

ವಕೀಲರು ಮತ್ತು ಸದಸ್ಯರು

ಮಂಗಳೂರು ಮಹಾನಗರಪಾಲಿಕೆ, ಮಂಗಳೂರು.

(೪) ಶ್ರೀಮತಿ ಅನಸೂಯ ಮಾಬೆನ್

ಮಾಜಿ ಉಪಮೇಯರ್

ಮಂಗಳೂರು ಮಹಾನಗರ ಪಾಲಿಕೆ, ಮಂಗಳೂರು.

(೫) ಡಾ. ಜೆರಾಲ್ಡ್ ಪಿಂಟೋ

ಪ್ರಾಧ್ಯಾಪಕರು

ಮಿಲಾಗ್ರಿಸ್ ಕಾಲೇಜು, ಕಲ್ಯಾಣಪುರ.

(೬) ಶ್ರೀ ಐವನ್ ಡಿ'ಸೋಜ

ವಕೀಲರು, ನೋಟರಿ ಮತ್ತು ರಿಜಿಸ್ಟ್ರಾರ್ ಕ್ರಿಶ್ಚಿಯನ್ ಮ್ಯಾರೇಜ್

ಕರ್ನಾಟಕ ಸರ್ಕಾರ

ಕರಂಗಲ್‌ಪಾಡಿ, ಮಂಗಳೂರು.

(೭) ಶ್ರೀ ಪಿ. ಬಿ. ಡೇಸ

ಅಧ್ಯಕ್ಷರು

ಪೀಪಲ್ಸ್ ಯೂನಿಯನ್ ಫಾರ್

ಸಿವಿಲ್ ಲಿಬರ್ಟಿಸ್, ದಕ್ಷಿಣ ಕನ್ನಡ ಜಿಲ್ಲೆ.

(೮) ಶ್ರೀ ಎ. ಸಿ. ಜಯರಾಜ್

ವಕೀಲರು ಮತ್ತು ಅಧ್ಯಕ್ಷರು

ಮಲಯಾಳಿ ಕ್ರಿಶ್ಚಿಯನ್ ಅಸೋಸಿಯೇಶನ್

ಮಂಗಳೂರು.

(೯) ಶ್ರೀ ಜೋರ್ಜ್ ಕೇಸ್ಟಲಿನೊ

ರಾಜ್ಯ ಪ್ರಶಸ್ತಿ ವಿಜೇತ ಶಿಕ್ಷಕರು

ನಕ್ರೇ, ಕಾರ್ಕಳ.

(೧೦)ಲಯನ್ ಐ. ಎ. ಕೈರನ್ನ

ಡಿಸ್ಟ್ರಿಕ್ಟ್ ಚೀಫ್ ಕಮಿಷನರ್,

ಭಾರತ್ ಸ್ಕೌಟ್ಸ್ ಆಂಡ್ ಗೈಡ್ಸ್

ದಕ್ಷಿಣ ಕನ್ನಡ ಜಿಲ್ಲೆ.

(೧೧)ಶ್ರೀಮತಿ ಶಾಲೆಟ್ ಪಿಂಟೋ

ಮಾಜಿ ಉಪಾಧ್ಯಕ್ಷರು,

ದಕ್ಷಿಣ ಕನ್ನಡ ಜಿಲ್ಲಾ ಪಂಚಾಯತ್.

# ಪರಾಮರ್ಶನ ಗ್ರಂಥಗಳು

೧. ಬಿ.ಕೆ. ಗೋಖಲೆ, "ರಾಜ್ಯಶಾಸ್ತ್ರ – ಸಿದ್ಧಾಂತ ಮತ್ತು ಸರ್ಕಾರೀ ಯಂತ್ರ" ಹಿಮಾಲಯ ಪಬ್ಲಿಷಿಂಗ್ ಹೌಸ್, ಎಂಟನೆಯ ಮುದ್ರಾಣ, ೧೯೯೪

೨. ಪ್ಯಾರಿ ಜೆರ್ರೈಯಂಟ್ ಯಟ್ ಅಲ್ "ಪಾರ್ಟಿಸಿಪೇಶನ್ ಇನ್ ಪಾಲಿಟಿಕ್ಸ್" ಮ್ಯಾಂಚೆಸ್ಟರ್ ಯುನಿವರ್ಸಿಟಿ ಪ್ರೆಸ್ ಲಂಡನ್ ೧೯೭೨,

೩. ಮಿಲ್‌ಬ್ರಾತ್ ಲೆಸ್ಟರ್ "ಪೊಲಿಟಿಕಲ್ ಪಾರ್ಟಿಸಿಪೇಶನ್" ರ್‍ಯಾಂಡ್ ಆ್ಯಂಡ್ ಮೆಕ್‌ನಲ್ಲಿ & ಕಂಪೆನಿ, ಚಿಕಾಗೊ, ೧೯೭೧

೪. ರಾಮನಾಥ ಶರ್ಮ ಬರೆದ "ಪೊಲಿಟಿಕಲ್ ಸೋಶಿಯೊಲಾಜಿ". ಲಿಲಿ ಜಯ ಸಿಂಗೇ ಅವರ ಮಿಡಿಯ ಪ್ರಮೋಟರ್ಸ್ ಮತ್ತು ಪಬ್ಲಿಷರ್ಸ್ ಪ್ರೈ. ಲಿಮಿಟೆಡ್ ೧೯೯೭ ರಲ್ಲಿ

೫. ಟೆರ್‌ಚೆಕ್ ರೊನಾಲ್ಡ್ "ಇನ್ಸೆಂಟೀವ್ಸ್ ಆ್ಯಂಡ್ ವೋಟರ್ ಪಾರ್ಟಿಸಿಪೇಶನ್ ಎ ರಿಸರ್ಚ್ ನೋಟ್" ಸ್ಪ್ರಿಂಗ್, ೧೯೭೯

೬. ಎಂ. ವಿ. ಪೈಲಿ "ಭಾರತದಲ್ಲಿ ಸಂವಿಧಾನಾತ್ಮಕ ಸರ್ಕಾರ", ಎಸ್ ಚಾಂದ್ ಮತ್ತು ಕಂಪನಿ ಪ್ರಕಟಿತ ಆರನೆಯ ಮುದ್ರಣ, ೨೦೦೬

೭. ಡಾ. ಬಿ. ಎಲ್ ಫಾಡಿಯಾ "ಇಂಡಿಯನ್ ಗವರ್ನ್‌ಮೆಂಟ್ ಆ್ಯಂಡ್ ಪಾಲಿಟಿಕ್ಸ್" ಸಾಹಿತ್ಯಭವನ ಪಬ್ಲಿಕೇಶನ್ಸ್ ಆರನೆಯ ಮುದ್ರಣ ೨೦೦೫

೮. ರೊವೇನಾ ರೊಬಿನ್‌ಸನ್, "ಕ್ರಿಶ್ಚಿಯನ್ಸ್ ಆಫ್ ಇಂಡಿಯಾ" ಸೇಜ್ ಪಬ್ಲಿಕೇಶನ್ಸ್ ನ್ಯೂ ಡೆಲ್ಲಿ, ೨೦೦೩

೯. ವೆ. ರೆ. ಥೋಮಸ್ ಪಿ. ಮುಂಡುಕುಯಿ "ಕಥೋಲಿಕೇಟ್ ಚರ್ಚ್ ಹಿಸ್ಟರಿ ಎಟ್ ಎ ಗ್ಲಾನ್ಸ್" ಜಾನ್‌ಸನ್ ಪ್ರಿಂಟರ್ಸ್ ಕೇರ್ ಅಫ್ ಗ್ಲಾರಿ ಗ್ರಾಫಿಕ್ಸ್ ಪ್ರೈವೇಟ್ ಲಿಮಿಟೆಡ್ ಗೌತಮ್ ನಗರ್, ದೆಹಲಿ – ೪೯, ೨೦೦೫

೧೦. ಡಾ. ಪಿಯುಸ್ ಫಿಡೆಲಿಸ್ ಪಿಂಟೊ, "ಕರಾವಳಿ ಕರ್ನಾಟಕ ಕ್ರೈಸ್ತರ ಇತಿಹಾಸ" ಸಮನ್ವಯ ಪ್ರಕಾಶನ, ಮಂಗಳೂರು ೧೯೯೯

೧೧. ಬಿ. ಎಸ್ ತಲ್ವಾಡಿ, "ಕರ್ನಾಟಕ ಕ್ರೈಸ್ತರ ಇತಿಹಾಸ" ಕನ್ನಡ ಕಥೋಲಿಕ ಸಂಘದಿಂದ ಪ್ರಕಾಶಿತ, ೧೯೮೯

೧೨. "ಏಕತ" ದಿ ಡೈರೆಕ್ಟರಿ ಆಫ್ ಕ್ರಿಶ್ಚಿಯನ್ ಚರ್ಚ್‌ಸ್ ಇನ್ ದಕ್ಷಿಣ ಕನ್ನಡ ಆ್ಯಂಡ್ ಉಡುಪಿ ಡಿಸ್ಟ್ರಿಕ್ಟ್ಸ್ ಸಂಪಾದಕರು ರೆವರೆನ್ ಡಾ. ರೊನಾಲ್ಡ ಕುಟಿನ್ಹ. ಪ್ರಕಾಶನ ಎಪ್ರಿಲ್, ೨೦೦೩

೧೩. ಟೆರ್ಚೆಕ್ ರೊನಾಲ್ಡ್ "ಇನ್ಸೆಂಟೀವ್ಸ್ ಆ್ಯಂಡ್ ವೋಟರ್ ಪಾರ್ಟಿಸಿಪೇಶನ್: ಎ ರಿಸರ್ಚ್ ನೋಟ್" ಸ್ಪ್ರಿಂಗ್, ೧೯೭೯

೧೪. ಗಾಡ್ವಿನ್ ಶಿರಿ, "ಕರ್ನಾಟಕ ಕ್ರಿಶ್ಚಿಯನ್ಸ್ ಆ್ಯಂಡ್ ಪಾಲಿಟಿಕ್ಸ್" ಪಬ್ಲಿಷ್‌ಡ್ ಬೈದಿ ಕ್ರಿಶ್ಚಿಯನ್ ಲಿಟರೇಚರ್ ಸೊಸೈಟಿ, ಮದ್ರಾಸ್, ೧೯೭೮

೧೫. ಡಾ. ಎಂ. ಚಂದ್ರ ಪೂಜರಿ, "ಕರಾವಳಿ ಕರ್ನಾಟಕದ ಕೋಮುವಾದ" ಪ್ರಸಾರಾಂಗ ಕನ್ನಡ ವಿಶ್ವವಿದ್ಯಾನಿಲಯ, ಹಂಪಿ, ೨೦೦೮, ಪುಟಸಂಖ್ಯೆ – ೨.

೧೬. ಅಶೋಕ ರಾಖೇಶ ಡಿ'ಸೋಜ ಅವರ ಅಪ್ರಕಟಿತ ಹಂಪಿ ಕನ್ನಡ ವಿಶ್ವ ವಿದ್ಯಾನಿಲಯದ ಎಂ. ಫಿಲ್. ಪದವಿಗೆ ಪೂರಕವಾಗಿ ಬರೆಯಲ್ಪಟ್ಟ "ಮ್ಯಾಂಗಲೋರ್ ಮ್ಯಾಗಜೀನ್‌ನಲ್ಲಿ ಬಿಂಬಿತ ದಕ್ಷಿಣ ಕನ್ನಡ" ಸಂಪ್ರಬಂಧ, ೨೦೦೮

೧೭. ರೆ. ಡಾ. ಪಿಯುಸ್ ಫಿಡೆಲಿಸ್ ಪಿಂಟೋರವರ "ಆಂಗ್ಲೋ–ಮೈಸೂರು ಸಂಬಂಧದ ಹಿನ್ನಲೆಯಲ್ಲಿ ಕರಾವಳಿ ಕರ್ನಾಟಕದ ಕೊಂಕಣಿ ಕ್ರೈಸ್ತರು" (೧೭೬೧–೧೭೯೯) ಸಮನ್ವಯ ಪ್ರಕಾಶನ ಮಂಗಳೂರು, ೧೯೯೯

೧೮. ರೆ. ಡಾ. ವಿಜಯ ಕುಮಾರ್ ರವರ "ಕರ್ನಾಟಕದಲ್ಲಿ ಪ್ರೊತೆಸ್ತಾಂತ ಮಿಷನ್ನುಗಳ ಚರಿತ್ರೆ, ಕನ್ನಡ ದೈವಜ್ಞಾನ ಸಾಹಿತ್ಯ ಸಮಿತಿ, ಮಂಗಳೂರು ಪ್ರಕಾಶಿತ – ೨೦೦೪

೧೯. ಶಾಲೆಗಳ ಮಾಹಿತಿ ಕೃತಿ "ಅನುದಾನಿತ ಶಾಲಾ ದರ್ಪಣ" ಸ್ಮರಣ ಸಂಚಿಕೆ ೨೦೦೬. ದಕ್ಷಿಣ ಕನ್ನಡ ಜಿಲ್ಲಾ ಅನುದಾನಿತ ಶಾಲೆಗಳ ಆಡಳಿತದವರ ಸಂಘ. (ರಿ) ಮಂಗಳೂರು ಪ್ರಕಾಶಿತ – ೨೦೦೬

೨೦. “ದಿ ಡಯೋಷಿನ್ ಅಫ್ ಮಂಗಳೂರು” ದಿ ಕಥೋಲಿಕ್ ಡೈರೆಕ್ಟರಿ ಅಫ್ ಇಂಡಿಯಾ ೨೦೦೫–೦೬, ಎ ಕ್ಲಾರೆಟಿಯನ್ ಪಬ್ಲಿಕೇಶನ್, ಮಲ್ಲೇಶ್ವರಂ, ಬೆಂಗಳೂರು ೨೦೦,

೨೧. ಡಾ. ಪೀಟರ್ ವಿಲ್ಸನ್ ಪ್ರಭಾಕರ್ ರವರ ಕೃತಿ “ಸತ್ಯಮಿತ್ರ ಬಂಗೇರ” ಕರ್ನಾಟಕ ತುಳು ಸಾಹಿತ್ಯ ಅಕಾಡೆಮಿ ಪ್ರಕಾಶಿತ ತುಳು ಕೃತಿ, ೧೯೯೭

೨೨. ಪ್ರೊ.ಎಚ್.ಎಂ ರಾಜಶೇಖರ್ “ಭಾರತ ಸರಕಾರ ಮತ್ತು ರಾಜಕೀಯ” ಪಬ್ಲಿಷ್‌ಡ್ ಬೈ ಕಿರಣ್ ಪ್ರಕಾಶನ ಮೈಸೂರು. ಒಂಬತ್ತನೇ ಪರಿಷ್ಕೃತ ಆವೃತ್ತಿ, ೨೦೦೬.

೨೩. ಡಾ.ಎಂ.ಚಂದ್ರ ಪೂಜಾರಿಯವರ “ರಾಜಕೀಯ ಬಡತನ” ಸಿದ್ಧಾರ್ಥ ಪ್ರಕಾಶನ ಹೊಸಪೇಟೆ, ೨೦೦೮.

೨೪. ಡಾ. ಗಾಡ್ವಿನ್ ಶಿರಿ “ದಲಿತ ಕ್ರೈಸ್ತರು” ಕನ್ನಡ ಅನುವಾದ ವಿಲಿಯಂ ಪ್ರಕಾಶಕರು ಕ್ರಿಶ್ಚಿಯನ್ ಇನ್‌ಸ್ಟಿಟ್ಯೂಟ್ ಫಾರ್ ದಿ ಸ್ಟಡಿ ಅಫ್ ರಿಲಿಜಿಯನ್ ಎಂಡ್ ಸೊಸೈಟಿ, ಬೆಂಗಳೂರು – ೪೬, ೧೯೯೭.

೨೫. ನೀರಾ ಚಂದೋಕೆ “ಬಿಯಾಂಡ್ ಸೆಕ್ಯುಲಾರಿಸಂ ದಿ ರೈಟ್ಸ್ ಅಫ್ ರಿಲಿಜಿಯನ್ ಮೈನಾರಿಟೀಸ್” ನ್ಯೂ ಡೆಲ್ಲಿ ಆಕ್ಸಫರ್ಡ್ ಯುನಿವರ್ಸಿಟಿ ಪ್ರೆಸ್,೧೯೯೧.

೨೬. ಡಿ.ಎಲ್ ಸೇಥ್ ಆಂಡ್ ಆಶಿಸ್ ನಂದಿ ಸಂಪಾದಿತ “ಮಲ್ಟಿ ವರ್ಸ್ ಅಫ್ ಡೆಮಾಕ್ರಸಿ” ನ್ಯೂ ಡೆಲ್ಲಿ, ಸೇಜ್ ಪಬ್ಲಿಕೇಶನ್ಸ್ ೧೯೯೬.

೨೭. ರಜನಿ ಕೊಥಾರಿ “ಸ್ಟೇಟ್ ಅಗೆಯಿನ್ಸ್ಟ್ ಡೆಮೊಕ್ರೆಸಿ ಇನ್ ಸರ್ಚ್ ಅಫ್ ಹ್ಯೂಮನ್ ಗವರ್ನ್ನಾನ್ಸ” ಅಜಂತ ಪಬ್ಲಿಕೇಶನ್ಸ್, ೧೯೮೮.

೨೮. ಕಾಂತಿ ಫರಾಯಸ್ “ದಿ ಕ್ರಿಶ್ಚಿಯನ್ ಇಂಪಾಕ್ಟ್ ಇನ್ ಸೌಥ್ ಕೆನರಾ “ಪಬ್ಲಿಷ್‌ಡ್ ಬೈ ಚರ್ಚ್ ಹಿಸ್ಟರಿ ಅಸೋಸಿಯೇಶನ್ ಅಫ್ ಇಂಡಿಯಾ, ವೆಸ್ಟ್ ಇಂಡಿಯಾ ಬ್ರಾಂಚ್, ಮುಂಬಾಯಿ, ೧೯೯೯.

೨೯. ಡಾ. ಜೆರಾಲ್ಡ್ ಪಿಂಟೋ ಸಂಪಾದಿತ “೨೦ವ್ಯಾ ಶೆಕ್ಡಾಚೆ ಕೊಂಕ್ಣಿ ಮ್ಹಾನ್ ಮನಿಸ್ ಭಾಗ – ೧ “ಕರ್ನಾಟಕ ಕೊಂಕಣಿ ಸಾಹಿತ್ಯ ಅಕಾಡೆಮಿ, ಮಂಗಳೂರು. ಪ್ರಕಾಶಿತ ೨೦೦೭.

# ಲೇಖನಗಳು


೧. ೨೦೦೧ ರ ಜನಗಣತಿಯ ಅಂಕಿ ಅಂಶಗಳು ಭಾರತದಲ್ಲಿ ಧರ್ಮವಾರು ಜನಸಂಖ್ಯೆ ಕೃಪೆ ಡಬ್ಲ್ಯು ಡಬ್ಲ್ಯು ಡಬ್ಲ್ಯು. ಗ್ಲೋರಿಯಸ್ ಇಂಡಿಯಾ. ಓಆರ್‌ಜಿ/ ರಿಲೀಜಿಯನ್. ಪಿ ಎಚ್ ಪಿ.

೨. ಶಿಫಾಲಿ ಝಾ "ರೈಟ್ಸ್ ವರ್ಸಸ್ ರೆಪ್ರೆಸೆಂಟೇಶನ್ – ಡಿಫೆಂಡಿಂಗ್ ಮೈನಾರಿಟಿ ಇಂಟರೆಸ್ಟ್ ಇನ್ ದಿ ಕಾನ್‌ಸ್ಟಿಟ್ಯೂಯೆಂಟ್ ಅಸೆಂಬ್ಲಿ" ಇಕನಾಮಿಕ್ ಆ್ಯಂಡ್ ಪೊಲಿಟಿಕಲ್ ವೀಕ್ಲಿ, ಎಪ್ರಿಲ್ ೧೯, ೨೦೦೩

೩. ರೆ. ಫಾ. ಮಾರ್ಕ್ ವಾಲ್ಡರ್ "ಜಿಲ್ಲೆಯ ಬೆಳವಣಿಗೆಯಲ್ಲಿ ಕ್ರೈಸ್ತ ಧರ್ಮ ಸಭೆಯ ಪಾತ್ರ", ಅಡ್ಯನಡ್ಕ ಕೃಷ್ಣಭಟ್ ಸಂಪಾದಿತ ಸುದರ್ಶನ ಗ್ರಂಥದಿಂದ, ವಿಜಯ ಕಾಲೇಜ್ ಟ್ರಸ್ಟ್ ಮುಲ್ಕಿ ಪ್ರಕಾಶಿತ ೧೯೭೭,

೪. "ಏಕತ" ದಿ ಡೈರೆಕ್ಟರಿ ಆಫ್ ಕ್ರಿಶ್ಚಿಯನ್ ಚರ್ಚ್‌ಸ್ ಇನ್ ದಕ್ಷಿಣ ಕನ್ನಡ ಆ್ಯಂಡ್ ಉಡುಪಿ ಡಿಸ್ಟ್ರಿಕ್ಟ್ಸ್ ಸಂಪಾದಕರು ರೆವರೆನ್ ಡಾ. ರೊನಾಲ್ಡ ಕುಟಿನ್ಹ. ಪ್ರಕಾಶನ ಎಪ್ರಿಲ್, ೨೦೦೩

೫. ಪ್ರಜಾವಾಣಿ ದಿನಪತ್ರಿಕೆ, ಕರಾವಳಿ ಅಂಕಣ ೧೫ನೇ ಎಪ್ರಿಲ್, ೨೦೦೯.

೬. ಪ್ರೊ. ವಲೇರಿಯನ್ ರಾಡ್ರಿಗಸ್‌ರ "ಕೆನರಾ ಕ್ರೈಸ್ತರು ಮತ್ತು ಅವರ ರಾಜಕೀಯ ಹಂಬಲ" ಜಾಗತಿಕ ಕೆನರಾ ಕೊಂಕಣಿ ಕಥೋಲಿಕ್ ಸಮುದಾಯದ ಜಾಗತಿಕ ಸಮ್ಮೆಳನ ಡಿ. ೨೬ ರಿಂದ ೨೯ ರ ೨೦೦೪ ರಲ್ಲಿ ಮಂಡಿಸಿದ ಪ್ರಬಂಧ

೭. ಮಹಮ್ಮದ್ ಅರಿಫ್ ಪಡುಬಿದ್ರಿ "ಕಡಲತಡಿಯಲ್ಲಿ ರಾಜಕೀಯದ ಹೊಸ ಅಲೆ" ವಿಜಯ ಕರ್ನಾಟಕ ದಿನಪತ್ರಿಕೆ ಕ್ಷೇತ್ರ ದರ್ಶನ ಮಾಲಿಕೆ, ೨೩ ಮಾರ್ಚ್ ೨೦೦೯

೮. ಪ್ರಜಾವಾಣಿ ವಾರ್ತೆ, ಪ್ರಜಾವಾಣಿ ದಿನಪತ್ರಿಕೆ ಕರಾವಳಿ ಅಂಕಣ ೭ನೇ ಜುಲಾಯಿ ೨೦೦೯.

೯. ದಿ ಹಿಂದೂ ದಿನ ಪತ್ರಿಕೆ, "ಮೈನಾರಿಟೀಸ್ ಡ್ರಾ ಎ ಬ್ಲಾಂಕ್ ಇನ್ ಲೋಕ ಸಭಾ ಪೋಲ್ಸ್" ೨೨ನೇ ಮೇ ೨೦೦೯

೧೦. ಸುಹಾಸ್ ಪಲ್‌ಶೀಕರ್ ಮತ್ತು ಸಂಜಯ್ ಕುಮಾರ್ "ಪಾರ್ಟಿಸಿಪೇಟರಿ ನಾರ್ಮ್ : ಹೌ ಬ್ರೋಡ್ ಬೇಸ್‌ಡ್ ಇಟ್" ಇಕನಾಮಿಕ್ ಆ್ಯಂಡ್ ಪೊಲಿಟಿಕಲ್ ವೀಕ್ಲಿ ಡಿಸೆಂಬರ್೧೮, ೨೦೦೪

೧೧. ದಕ್ಷಿಣ ಕನ್ನಡ ಜಿಲ್ಲೆಯ ಅಂಕಿ – ಅಂಶಗಳ ನೋಟ, ೨೦೦೩ –೦೪ ಪುಟ – ೬೫

೧೨. ಡಾ. ಕೆ. ಜಿ. ವಸಂತ ಮಾಧವ, "ದಕ್ಷಿಣ ಕನ್ನಡ ಜಿಲ್ಲೆಯ ಇತಿಹಾಸ ಸಮೀಕ್ಷೆ" ಸುದರ್ಶನ ಗ್ರಂಥ

೧೩. ರೆ. ಫಾ. ಮಾರ್ಕ್ ವಾಲ್ಡಾರ್ ರವರ "ಜಿಲ್ಲೆಯ ಬೆಳವಣಿಗೆಯಲ್ಲಿ ಕ್ರೈಸ್ತ ಧರ್ಮ ಸಭೆಯ ಪಾತ್ರ" ಸುದರ್ಶನ ಗ್ರಂಥ, ವಿಜಯ ಕಾಲೇಜ್ ಟ್ರಸ್ಟ್, ಮುಲ್ಕಿ ಪ್ರಕಾಶಿತ, ೧೯೭೭,

೧೪. ಭಕ್ತಿ ವಿ. ಹೆಗ್ಡೆಯವರ "ಬಾಸೆಲ್ ಮಿಸ್ಸಿಯನ್ ಇನ್ ಮೇಂಗಲೋರ್ ೧೭೫ ಇಯರ್ ಅಫ್ ಟ್ರಾನ್ಸ್ ಫಾರ್ಮಿಂಗ್ ಲೈವ್ಸ್" ಸಿಟಿ ಹೆರಾಲ್ಡ್ ಅಂಕಣ – ಡೆಕ್ಕನ್ ಹೆರಾಲ್ಡ್ ಇಂಗ್ಲೀಷ್ ದೈನಿಕ ದಿನಾಂಕ ಫೆಬ್ರವರಿ ೨೧,

೧೫. ಪ್ರಜಾವಾಣಿ ದಿನಪತ್ರಿಕೆ, ಕರಾವಳಿ ಅಂಕಣ, ೧೫ನೇ ಎಪ್ರಿಲ್ ೨೦೦೯

೧೬. ಅ. ಬಾಲಕೃಷ್ಣ ಶೆಟ್ಟಿ ಪೊಳಲಿಯವರ ಲೇಖನ "ಧಾರ್ಮಿಕ ಮತ್ತು ಸಾಮಾಜಿಕ ಸುಧಾರಣೆಗಳು "ಪೊಲಿ" – ಕೆನರಾ ೨೦೦ ವರುಷಗಳು ತುಂಬಿದ ಸಂಧರ್ಭದಲ್ಲಿ ದಕ್ಷಿಣ ಕನ್ನಡ ಜಿಲ್ಲಾ ಆಡಳಿತವು ಹೊರ ತಂದ ಸಂಸ್ಮರಣಾ ಗ್ರಂಥ – ಶ್ರೀ ಎಂ. ಮುಕುಂದ ಪ್ರಭು ಪ್ರಕಾಶಿತ, ೨೦೦೦.

೧೭. ಕನ್ನಡ ಪ್ರಭವಾರ್ತೆ "ಕೊಂಕಣಿ ಕ್ರೈಸ್ತರು ಕೆಳವರ್ಗದವರ ಜತೆ ಬೆರೆಯಬೇಕು" ಕನ್ನಡ ಪ್ರಭ ದೈನಿಕ, ಡಿಸೆಂಬರ್ ೩೦, ೨೦೦೪.

೧೮. ಡಾ. ಸೂರ್ಯನಾಥ ಕಾಮತ್‌ರ "ದಕ್ಷಿಣ ಕನ್ನಡದಲ್ಲಿ ಸ್ವಾತಂತ್ರ್ಯ ಹೋರಾಟ" ಸುದರ್ಶನ ಗ್ರಂಥ, ವಿಜಯ ಕಾಲೇಜು ಟ್ರಸ್ಟ್, ಮುಲ್ಕಿ ಪ್ರಕಾಶಿತ ೧೯೭೭.

೧೯. ಎಸ್. ವೆಂಕಟೇಶ್ ರವರ ಲೇಖನ "ಕರ್ನಾಟಕಕ್ಕೆ ಕ್ರೈಸ್ತ ಧರ್ಮದ ಕೊಡುಗೆ", ಜನಪದ ಮಾಸಿಕ ಸಂಪುಟ ೩೭ ಸಂಚಿಕೆ ೯ ಡಿಸೆಂಬರ್ ೨೦೦೨

೨೦. “ದಿ ಡಯೋಷಿಸ್ ಅಫ್ ಮಂಗಳೂರು” ದಿ ಕಥೋಲಿಕ್ ಡೈರೆಕ್ಟರಿ ಅಫ್ ಇಂಡಿಯಾ ೨೦೦೫–೦೬, ಎ ಕ್ಲಾರೆಟಿಯನ್ ಪಬ್ಲಿಕೇಶನ್, ಮಲ್ಲೇಶ್ವರಂ, ಬೆಂಗಳೂರು ೨೦೦,

೨೧. ಪ್ರೊ ಜಾನ್ ಎಮ್ ರೆಬೆಲ್ಲೊ ರವರ ಕೊಂಕಣಿ ಲೇಖನ “ರಾಜಕೀಯ ಕ್ಷೇತ್ರದಲ್ಲಿ ಮಂಗಳೂರಿನ ಕೊಂಕಣಿ ಕ್ರೈಸ್ತರು” ರಾಕ್ಣೊ ಗೋಲ್ಡನ್ ಜ್ಯೂಬಿಲಿ ಇಶ್ಯೂ ಡಿ. ೧೧ ೧೯೮೮ ಪ್ರಕಾಶಿತ,

೨೨. ಗೋವಿಂದ ಡಿ. ಬೆಳಗಾಂವ್ಕರ್‌ರ “ಲೋಕಸಭಾ ಇಲ್ಲೆಕ್ಷನ್ಸ್ ವುಮೆನ್ ಔಟ್‌ನಂಬರ್ ಮೆನ್ ಇನ್ ವೋಟಿಂಗ್” ದಿ ಹಿಂದೂ ದಿನಪತ್ರಿಕೆ ಮೇ ೪, ೨೦೦೯.

೨೩. ಪ್ರಜಾವಾಣಿ ವಾರ್ತೆ “ಏಸುವಿಗೆ ಆದ ಅವಮಾನ ರಕ್ತದಲ್ಲಿ ಅಂತರ್ಗತ” ಪ್ರಜಾವಾಣಿ ದೈನಿಕದ ಕರಾವಳಿ ಅಂಕಣ ಜುಲಾಯಿ ೭, ೨೦೦೯.

೨೪. ರೆ. ಡಾ. ಪಿಯುಸ್ ಫಿಡೆಲಿಸ್ ಪಿಂಟೋರ, “ಕ್ರಿಶ್ಚಿಯಾನಿಟಿ ಇನ್ ಸೌತ್ ಕೆನರಾ” ‘ಏಕತ’ ದಿ ಡೈರೆಕ್ಟರಿ ಅಫ್ ಕ್ರಿಶ್ಚಿಯನ್ ಚರ್ಚ್‌ಸ್ ಇನ್ ದಕ್ಷಿಣ ಕನ್ನಡ ಆ್ಯಂಡ್ ಉಡುಪಿ ಡಿಸ್ಟ್ರಿಕ್ಟ್ಸ್, ರೆ. ಡಾ. ರೊನಾಲ್ಡ್ ಕುಟಿನ್ಹೊ (ಸಂ) ಪ್ರಕಾಶನ ೨೦೦೩.

೨೫. ಗೋವಿಂದ ಡಿ ಬೆಳಗಾಂವ್ಕರ್‌ರ “ಕಮ್ಯೂನಾಲಿಸಂ ಇನ್ ಕೋಸ್ಟಲ್ ಕರ್ನಾಟಕ” ದಿ ಹಿಂದೂ ದಿನ ಪತ್ರಿಕೆ, ಎಪ್ರಿಲ್ ೨೫, ೨೦೦೯.

೨೬. ಡಾ. ಬಿ.ಎ.ವಿವೇಕ ರೈ “ಮತ್ತೆ ಪಡೆದ ಶಕುಂತಲೆ ಮತ್ತು ತೋಡಿದ ಬಾವಿಗಳು” ಪ್ರಜಾವಾಣಿ ದೈನಿಕ ಫಬ್‌ರವರಿ ೨೭, ೨೦೦೯.

೨೭. ಯೋಗೇಂದ್ರ ಯಾದವ್ “ದಿ ಟ್ರುತ್ ಎಬೌಟ್ ಥಿಯರೀಸ್ ಆನ್ ಟರ್ನ್‌ಔಟ್” ಇಲೆಕ್ಷನ್ಸ್ ೨೦೦೯, ದಿ ಹಿಂದೂ ಎಪ್ರಿಲ್ ೧೩, ೨೦೦೯.

೨೮. ನೇಶನಲ್ ಇಲೆಕ್ಷನ್ ಸ್ಟಡಿ ಗ್ರೂಪ್, “ ನೊ ಬೇರಿಯರ್ಸ್ ಟು ಪಾರ್ಟಿಸಿ ಪೇಶನ್” ದಿ ಹಿಂದೂ, ಮೇ ೨೬, ೨೦೦೯.

೨೯ ಜೆ. ಬಾಲಾಜಿ “ಬಿಗ್ ಶೇರ್ ಫಾರ್ ಸೌತ್” ದಿ ಹಿಂದೂ, ಮೇ ೨೯, ೨೦೦೯.

# ವೆಬ್ ಸೈಟ್‌ಗಳ

೧. ಎಚ್.ಟಿ.ಟಿ.ಪಿ://ಹೋಂ ಪೇಜ್ ಮಾಕ್.ಕಾಮ್/ಬರ್ಕ್ ಜೆಎಮ್/
ಬ್ಲಾಗ್/ಸಿ ೩೭೫೪೬೭೯೩/ಇ ೧೮೨೭೪೪೭೯೩/ಇಂಡೆಕ್ಸ್ ಎಚ್‌ಟಿ ಎಮ್‌ಎಲ್

೨. ಎಚ್.ಟಿ.ಟಿ.ಪಿ://ಹೋಂ ಪೇಜ್ ಮಾಕ್.ಕಾಮ್ ಬರ್ಕ್ ಜೆ.ಎಮ್/ಐ ಬ್ಲಾಗ್/ಸಿ ೩೭೫೪೬೭೯೩/ಇ ೧೮ ೨೭೫೭೪೭೯೩/ಇಂಡೆಕ್ಸ್ ಎಚ್‌ಟಿಎಮ್‌ಎಲ್

೩. ೨೦೦೧ ರ ಜನಗಣತಿಯ ಅಂಕಿ ಅಂಶಗಳು ಭಾರತದಲ್ಲಿ ಧಮಕವಾರು ಜನಸಂಖ್ಯೆ ಕೃಪೆ ಡಬ್ಲ್ಯೂ ಡಬ್ಲ್ಯೂ ಡಬ್ಲ್ಯೂ.ಗ್ಲೋರಿಯನ್ ಇಂಡಿಯಾ ಓ ಆರ್ ಜಿ/ರಿಲೀಜಿಯನ್, ಪಿ ಎಚ್ ಪಿ.

೪. ಎಚ್.ಟಿ.ಟಿ.//ಡಬ್ಲ್ಯೂ ಡಬ್ಲ್ಯೂ ಡಬ್ಲ್ಯೂ. ಯುಎನ್.ಓರ್ಗ್/ವುಮೆನ್ ವಾಚ್/ಒಸಾಗಿ/ಡಬ್ಲೂ ಪಿ ಎಸ್/ಪಬ್ಲಿಕೇಶನ್.

೫. ಎಚ್.ಟಿ.ಟಿ.ಪಿ:// ಡಬ್ಲ್ಯೂ ಡಬ್ಲ್ಯೂ ಡಬ್ಲ್ಯೂ ಮೈನಾರಿಟಿ ರೈಟ್ಸ್.ಒರ್ಗ್/೫೬೪೮/ಇಂಡಿಯಾ/ಇಂಡಿಯಾ ಓವರ್‌ವ್ಯೂ ಎಚ್ ಟಿ ಎಮ್ ಎಲ್.

೬. ಡಬ್ಲ್ಯೂ ಡಬ್ಲ್ಯೂ ಡಬ್ಲ್ಯೂ ಮೈನ್ ಸ್ಟ್ರೀಂ ವಿಕ್ಲಿ.ನೆಟ್/ಆರ್ಟಿಕಲ್ ೯೮. ಎಚ್ ಟಿ ಎಮ್ ಎಲ್

೭. ಎಚ್.ಟಿ.ಟಿ.ಪಿ:// ಡಬ್ಲೂ ಡಬ್ಲೂ.ಆಸಿಸ್.ಓರ್ಗ್/ಆನ್ಯುಅಲ್-೯೭/ಕೆಜಿಆರ್‌ಇಜಿ ಎಸ್ ಒ ಎನ್. ಎಚ್ ಟಿ ಎಮ್

೮. ಎಚ್.ಟಿ.ಟಿ.ಪಿ://ಡಬ್ಲ್ಯೂ ಡಬ್ಲ್ಯೂ.ಡಬ್ಲ್ಯೂ.ಯು ಎನ್ ಎಚ್ ಸಿ ಎಚ್ ಆರ್.ಸಿ ಎಚ್/ಹೂರಿಡೊಕ್ಡ/ಹೊರಿಡೋಕ.ಎನ್ ಎನ್ ಎಪ್ ಎಲ್/ಟೆಸ್ಟ್ ಪೋಮ್/ಜಿ ಬಿ ಸಿ ೬೭೧೫೩೭೪ ಎಫ್ ಎ ೦೦೭೯ ಸಿ ೧೨೫೯೬ ಡಿ ೦೦೪೪೫ ಬಿ ಎಲ್ ಇ/ಓಪಿಇ.

೯. ಎಚ್.ಟಿ.ಟಿ.ಪಿ://ಡಬ್ಲ್ಯೂ ಡಬ್ಲ್ಯೂ ಡಬ್ಲ್ಯೂ.ಇಂಡಿಯನ್; ಇಲೆಕ್ಷನ್.

